# ಸತ್ಯಂ ಶಿವಂ ಸುಂದರಂ

## (ಭಾಗ - ೪)

## ಭಗವಾನ್ ಶ್ರೀ ಸತ್ಯಸಾಯಿ ಬಾಬಾ ಅವರ ದಿವ್ಯಚರಿತ್ರೆ

ಬರೆದವರು :

ದಿ || ನಾ. ಕಸ್ತೂರಿ, ಎಂ.ಎ., ಬಿ.ಎಲ್.

ಸಂಪಾದಕರು, ಸನಾತನ ಸಾರಥಿ

ಕನ್ನಡಾನುವಾದ :

ಎಸ್. ವಿ. ಆಚಾರ್ಯ

ಆಕ ನಾತ ಅನಂತರಾಮಯ್ಯ

ಪ್ರಕಾಶಕರು :

ಶ್ರೀ ಸತ್ಯಸಾಯಿ ಪಬ್ಲಿಕೇಷನ್ಸ್ ಸೊಸೈಟಿ (ರಿ.)

'ಸುಧಾಮ ಹೌಸ್', ಚಿಕ್ಕಪೇಟೆ,

ಬೆಂಗಳೂರು - 560 053.

# ಅಧ್ಯಾಯಗಳ ವಿವರ

## ನನ್ನ ನಿಮ್ಮ ನಡುವೆ

'ಸತ್ಯಂ ಶಿವಂ ಸುಂದರಂ' ಮೂರನೆಯ ಭಾಗವನ್ನು ನಿಮ್ಮ ಕೈಯಲಿಟ್ಟು ಈಗ ನಾಲ್ಕನೆಯ ಭಾಗವನ್ನು ಮುಂದಿಡುವ ಮೊದಲು ಘಟನೆಗಳು ತುಂಬಿ ಹತ್ತು ವರ್ಷಗಳು ಉರುಳಿ ಹೋದವು. ಇದಕ್ಕಾಗಿ ನಾನು ಕ್ಷಮೆ ಕೇಳುತ್ತೇನೆ. ಭಗವಾನರು ಈ ಅವಧಿಯಲ್ಲಿ ಜೀವಂತವಾಗಿರಿಸಿದ್ದಾರೆ. ನನ್ನ ನಿರೀಕ್ಷೆಗೂ ಮೀರಿ ಜಾಗೃತನನ್ನಾಗಿ ಮಾಡಿದ್ದಾರೆ. ಆದರೆ ಬರಹಗಾರ ನಾನು ಎಂದು ನಾನು ಎಂದಿಗು ಭಾವಿಸಿಲ್ಲವಾದ್ದರಿಂದ 'ನಾನು ಅಪರಾಧಿಯಲ್ಲ' ಎಂದು ಮನವಿ ಮಾಡಿಕೊಂಡು ಸುಮ್ಮನಾಗುತ್ತೇನೆ.

ಸಾಯಿ ಎಂಬ ದಿವ್ಯತ್ವದ ಪ್ರಕಟಣೆಯ ಅಸಂಖ್ಯ ಮುಖಗಳು ನಿತ್ಯವಿಸ್ತಾರಗೊಳ್ಳುತ್ತಿರುವ ಈ ಸಮಯದಲ್ಲಿ, ಅದೇ ವೇಗದಲ್ಲಿ ಅವು ಜೊತೆ ಜೊತೆಗೆ ಹೋಗುವುದು ಬಹಳ ಕಷ್ಟವೇ ಆಗಿದೆ. ಆ ಸರ್ವಶಕ್ತ ಪ್ರೇಮ ವಾರಧಿಯು ಆನಂದಯುತ ಮೌನದಲ್ಲಿ ಪರವಶಕ್ಕೇರಿಸುತ್ತದೆ. ಸರ್ವವನ್ನು ಆವರಿಸುವ ಆ ದಿವ್ಯಶಕ್ತಿಯು ನಮ್ಮ ಕೊರತೆಗಳನ್ನು ನಮಗೆ ಅರಿವು ಮಾಡಿ ಕೊಡುತ್ತದೆ. ಆದರೂ ನಮ್ಮೊಳಗಿರುವ ದೈವತ್ವವು ನಮ್ಮನ್ನು ಅವರೆಡೆಗೆ ಸೆಳೆಯುತ್ತದೆ. ಅವರು ನಮ್ಮನ್ನು, ಅಲೆಯುವರು, ಸ್ಥಿರವಾಗಿ ನಿಂತವರು ಇಬ್ಬರನ್ನು ತಮ್ಮ ಅಕ್ಕರೆಯ ತೆಕ್ಕೆಯಲ್ಲಿ ಇರಿಸಿಕೊಳ್ಳಲು ಅರಸುತ್ತಾರೆ.

ಭಗವಾನ್ ಕೃಷ್ಣನು ಅರ್ಜುನನಿಗೆ ತನ್ನ ಕೃಪೆಯನ್ನು ಪಡೆದವರನ್ನು ಹೀಗೆ ವರ್ಣಿಸುತ್ತಾನೆ. "ನನ್ನ ಮಾಧುರ್ಯವು ಅವರ ಪ್ರಜ್ಞೆಯ ಪ್ರತಿಯೊಂದು ಸ್ತರಕ್ಕೂ ಉನಿದು ಇಳಿದಿರುತ್ತದೆ. ಅವರು ನನ್ನೊಳಗೆ, ನನ್ನಿಂದ, ನನಗೂ ಬದುಕುತ್ತಾರೆ. ನನ್ನ ಮಹಿಮೆ ನನ್ನ ಕರುಣೆಗಳನ್ನು ಕೇಂದ್ರವಾಗುಳ್ಳ ಕಥೆಗಳನ್ನು ಬಣ್ಣಿಸುವುದರಲ್ಲಿ ಸಂತೋಷ ಪಡುತ್ತಾರೆ. ನಾನು ನೀಡುವ ಜ್ಞಾನವನ್ನು ಶಕ್ತಿಯನ್ನು, ಪ್ರೇಮವನ್ನು ಇತರರೊಂದಿಗೆ ಅವರು ಹಂಚಿಕೊಳ್ಳುತ್ತಾರೆ. ಅದರಿಂದ ಎಲ್ಲರೂ ಅಪಾರ ಲಾಭ ಪಡೆಯುತ್ತಾರೆ."

ಈ ಪವಿತ್ರ ಹಂಚಿಕೆಯಲ್ಲಿ ಪಾಲುಗೊಳ್ಳಿರೆಂದು ನಿಮ್ಮನ್ನು ಆಹ್ವಾನಿಸುತ್ತಿದ್ದೇನೆ. ಪುಟದಿಂದ ಪುಟಕ್ಕೆ ವಿನಯದಿಂದ, ಶ್ರದ್ಧೆಯಿಂದ, ಆಸೆಯಿಂದ, ಒಂದೊಂದು ಪುಟ ಮಗುಚುವಾಗಲು ಬಹು ಶಿಖರವು ಭಗವಂತನ ದಿವ್ಯ ಭವನದ, ಮತ್ತು ಸ್ವಯಂ ಭಗವಂತನ ದರ್ಶನಗಳಿಂದ ಹೃದಯವನ್ನು ತುಂಬಿಕೊಳ್ಳುತ್ತ ಪಯಣ ಮಾಡಿ, ಅವನ ದಿವ್ಯ ವೈಭವದ ಒಂದೊಂದು ದರ್ಶನದಿಂದಲೂ ನಾವು ಅವನ ಸಾಮೀಪ್ಯ ಪಡೆಯುತ್ತೇವೆ, ಅವನಿಗೆ ಹೆಚ್ಚು ಪ್ರಿಯರಾಗುತ್ತೇವೆ. ನಮ್ಮನ್ನು ತನ್ನ ಸಮೀಪ ಬಂಧುವಾಗಿ ತನ್ನವರೇ ಆಗಿ ಒಪ್ಪಿಸಿಕೊಳ್ಳಲೆಂದೇ ಅಲ್ಲವೇ ಅವನು ಬಂದಿರುವುದು !

ನಾ ಕಸ್ತೂರಿ

# ಅವರು ಹಾಡುವ ಹಾಡುಗಳು

ಈಗ ಮೂವತ್ತೈದು ವರ್ಷಗಳ ಹಿಂದೆ, ಇನ್ನೂ ಬಾಬಾ ಹದಿಹರೆಯದಿಂದ ಮೂಡಿಬರುತ್ತಿರುವಾಗ ಅವರು ಹುಟ್ಟಿದೂರಿನ ಹೊರವಲಯದಲ್ಲಿದ್ದ ಮಂದಿರದಲ್ಲಿ ಈ ಹಾಡನ್ನು ಹಾಡಿದರು. ಬಾಲ್ಯದಿಂದಲೂ ಅವರು ಮಾಧುರ್ಯದ ಹೊರೆಯೇ ಆಗಿದ್ದಾರೆ. ಭಗವಂತನು ಎಲ್ಲರ ಹೃದಯಗಳನ್ನು ಹೋಗುವ ಪರಿಯನ್ನು ಹಾಡುತ್ತ ಬಂದಿದ್ದಾರೆ.ಅವನು ಈ ಭೂಮಿಯವನಲ್ಲವಾದ್ದರಿಂದ, ಆದರೆ ಈ ಭೂಮಿಯನ್ನು ಸ್ವರ್ಗವಾಗಿ ಪರಿವರ್ತಿಸಬೇಕೆಂಬ ಕಳಕಳಿ ಇದ್ದುದ್ದರಿಂದ ಅವನ ಹಾಡುಗಳು ಈಗಿನಂತೆಯೇ ಆಗಲೂ ತನ್ನ ಅವತಾರದ ನಿಗೂಢತೆ, ಭವ್ಯತೆ, ಅದ್ಭುತದಿಂದ ಪ್ರಯೋಜನ ಪಡೆಯಬೇಕೆಂದು ಮನುಷ್ಯನಿಗೆ ನೀಡಿದ ಕರೆಯಾಗಿದ್ದವು. 1945ರಲ್ಲಿ ವೈಕುಂಠ ಏಕಾದಶಿಯ ಪವಿತ್ರವಾದ ದಿನದಂದು (ಸ್ವರ್ಗದ ಬಾಗಿಲುಗಳು ತೆರೆಯುತ್ತವೆಂದು ಹರ್ಷೋಲ್ಲಾಸದಿಂದ ಮಾಡುವ ಹಬ್ಬ). ಬೆಳಿಗ್ಗೆ ಭಕ್ತರು ಅವರನ್ನು ಪೂಜಿಸಲು ತುಳಸಿಮಾಲೆಗಳನ್ನು ಕಟ್ಟುತ್ತಿದ್ದ ಸಮಯದಲ್ಲಿ ಬಾಬಾ ಅವರ ಬಾಯಿಂದ ಆಶುಕವಿತೆಯಾಗಿ ತೆಲುಗಿನಲ್ಲಿ ಇದು ಮೂಡಿಬಂದಿತು.

ಅವರು ಇದನ್ನು ಯಾರಿಗೆ ಹೇಳಿ ಬರೆಸಿದರೋ ಅವರು ಹಾಡುವುದನ್ನು ನಾನು ಕೇಳಿದ್ದೇನೆ. ಮೊದಮೊದಲ ದಿನಗಳಲ್ಲಿ ಬಾಬಾ ಹಾಡುತ್ತಿದ್ದ ಇತರ ಹಾಡುಗಳ ಜೊತೆಯಲ್ಲಿ ಇದನ್ನು 1946ರಲ್ಲಿ ಅಚ್ಚು ಮಾಡಲಾಯಿತು. ವೆಂಕಟಗಿರಿಯ ರಾಜಾ ಸಾಹೇಬ್ ಅದನ್ನು ಪ್ರಕಟಿಸಿದರು.

'ಚೂತಾಮು ರಾ ರಾ' (ನೋಡೋಣ ಬಾ ಬಾ) ಎಂದು ಅದು ಕರೆ ಕೊಡುತ್ತದೆ. 'ಬಾ ಹೋಗಿ ನೋಡೋಣ, ಎಚ್ಚರಗೊಳ್ಳು!' ಎಂದು ಎಚ್ಚರಿಕೆ ನೀಡುತ್ತದೆ. 'ಮೇಲೇಳು' ಎಂದು ಆದೇಶಿಸುತ್ತದೆ. 'ಮುಂದುವರಿ' ಎಂದು ಹೇಳುತ್ತದೆ. ವಿಶ್ವ ಕರುಣೆಯಿಂದ ಮೂಡಿದ ಈ ಹಾಡಿನ ಮೂಲಕ ಇಂದಿಗೂ ನಮ್ಮಲ್ಲಿ ಒಬ್ಬರಿಗೂ ನೀಡಿದ ಕರೆಯಾಗಿದೆ ಇದು.

ಬನ್ನಿ ಸೋದರರೆ, ಸೋದರಯರೇ ಬನ್ನಿ ಹೋಗೋಣ
ಪಾವನ ಪುಟ್ಟುಪರ್ತಿಗೆ ಈಗ ಹೋಗೋಣ
ಅವನು ಸುಂದರ ಕನಕಾಂಬರವ ಧರಿಸಿಹನಂತೆ
ಅವನದು ಸ್ವರ್ಗೀಯ ವೈಭವವಂತೆ, ಅವನೇ ಭಗವಂತನಂತೆ
ಸ್ವಾತಂತ್ರ್ಯ ನೀಡಲೆಮ್ಮ ಕರೆಯುತಿಹನಂತೆ
'ಕೃಪೆಯ ಮಳೆಗರೆವೆ ನಾ' ಎಂದು ಹೇಳುವನಂತೆ.

ಚಿತ್ರಾವತಿಯ ಮರಳ ಮೇಲೆ
ಬೆಟ್ಟದ ನೆರಳಿನಲ್ಲಿ

ಈ ಬಾಬಾ
ರೂಪವ ರೂಪಿ ದೇವ ತಾನೆಂದು

ದಿನವು ತೋರವನಂತೆ
ಹಿಂದೆ ಶಿರ್ಡಿಯಲಿದ್ದನಂತೆ
ನಮಗಾಗಿ ಈಗ ಮರಳಿ ಬಂದಿಹನಂತೆ.

ಬನ್ನಿ ಸೋದರರೆ, ಸೋದರಿಯರೇ ಬನ್ನಿ ಹೋಗೋಣ
ಅವನು ಕೈಗಳನ್ನು ಆಡಿಸುವನಂತೆ
ಅಲ್ಲಿರುವಾಗ ಮಾಡಿದಂತೆ ಅನೇಕ ವೇಳೆ
ಏನು ಕೇಳಿದರೂ ನೀಡುವ ಕೈಗಳಂತೆ ಅವು
ಅವನೇ ಶಿವ ಮತ್ತು ರುದ್ರ
ಕೃಷ್ಣ ಮತ್ತು ಮಾರುತಿಯೂ ಅಂತೆ
ದೇವನ ಎಲ್ಲ ರೂಪಗಳು ಅವನಲ್ಲಿ ಒಂದಾಗಿಹವಂತೆ
ನೀನು ಸತ್ಯ ಧರ್ಮದಲಿಹಿರೆ, ಅದದೇ ರೂಪದಲಿ
ಅವನ ಕಾಣುವಿರಂತೆ

ಕಲಿಯುಗಕೆ ಬೇಕಾದ ಭಗವಂತ ಅವನೇ
ಆದರಿಂದಲೇ ಹೇಳುವರು

ಜಗದ ಸುಳ್ಳನ್ನು ಶಾಪವನ್ನು ತೊಳೆಯೆ ಬಂದಿಹನು
ಕರುಣೆಯ ವಿಶಾಲ ಸಾಗರ ಅವನು

ಬನ್ನಿ ಸೋದರರೆ, ಸೋದರಿಯರೇ ಬನ್ನಿ ! ನಾವು ಹೋಗೋಣ
ಹೂವಿನುಯ್ಯಾಲೆಯಲಿ ಕುಳಿತು

ಅವನು ಥಳಥಳಿಪನಂತೆ
ನಾತಿಸಪ ಸ್ತುತಿಯೇ ಹೂವಿನುಯ್ಯಾಲೆ
ಪೂಜೆಯೇ ಹಲಗೆ ; ಭಕ್ತಿಯ ಸರಪಣಿಗಳು ;
ಸ್ತೋತ್ರಗಳು ಹೂವುಗಳು ದಿವ್ಯ ಪರಿಮಳವು.
ದುಃಖದಲಿ ಮೊರೆಯಿಟ್ಟಾಗ

ಅವನು ಕ್ಷಣದಲ್ಲಿದನು ಪರಿಹರಿಪನಂತೆ
ಕರು ಕರೆಯೆ ತಾಯಿ ಹಸುವಿನಂತೆ
ಅವನು ಧಾವಿಸುವನು, ಓಡಿಬಹನು
ಅವನ ಕಿರುನೋಟ ಮಿದುವಂತೆ, ಶಾಮಕವಂತೆ
ಅವನ ಮಾತುಗಳು ಅಮೃತದೊಲು ಸಿಹಿಯಂತೆ

ಪುಟ್ಟಪರ್ತಿಗೆ ಹೋಗುವವರು
ರಾಜ ಮಾರ್ಗದಲಿರುವಂತೆ
ನಾವಾದರೋ ಸಂದಿಗೊಂದಿಗಳಲ್ಲಿ ವಿಧಿಯ ಹಳಿಯುತ್ತ
ಸುತ್ತುತಿಹೆವಂತೆ, ಮಾಯೆಯಲಿ ಸಿಲುಕಿ
ಬಿಡಿಸಲಾರಿಲ್ಲದೆ.

ಅವನ ಸಂಕಲ್ಪದಲ್ಲಿ ಕೈಯ ತುಂಬ
ವಿಭೂತಿಯಂತೆ, ಒಡನೆಯೇ ಅವನು
ಕಷ್ಟ ಪಡುವವಗೆ ನೊಂದವರಿಗೆ ಅಲೆವವಗೆ ನೀಡುವನಂತೆ

'ಈಗ ಸಮಯವಿರದು ಮತ್ತೊಮ್ಮೆ ನೋಡುವ' ನಿಲ್ಲದಿರಿ
ಬನ್ನಿ ಸೋದರರೆ, ಸೋದರಿಯರೇ ಬನ್ನಿ ! ನಾವು ಹೋಗೋಣ.

ದೇವದರುಶನಕ್ಕಾಗಿ
ಪಾವನ ಪುಟಪರ್ತಿಗೆ ಈಗ ಹೋಗೋಣ
ದುರಹಂಕಾರಿ, ಖೋಟಾ-ಜ್ಞಾನಿಗಳೇ ನಮ್ಮ ಜೊತೆ ಸೇರಿಕೊಳ್ಳಿ
ಅವನ ವೈಭವವನೊಂದಿಷ್ಟು ತಿಳಿದುಕೊಳ್ಳಿ.
ತುಟಿಗಳಲಿ ನಗೆ ಮಿನುಗೆ
ಕಂಗಳವಿ ಮಿಂಚಿಣುಕೆ
ಬೆರಳುಗಳ ಮರಳಿನಲಿ ತೂರಿ ತೆಗೆವನು
ತೇವದ ಮರಳ ಉಂಡೆಯಲ್ಲಿ, ಗುಂಡನೆಯ ಲಡ್ಡು !

ಎಲ್ಲೋ ದೂರದಲಿ ಮುಂಗುಗಣಿನಲಿ ಥಂಭಕರದನು
ಇಂದ್ರಜಾಲವೆಂಬರು, ಮಂತ್ರತಂತ್ರಗಳೆನ್ನುವರು
ಅವರ ಮಾತಿಗೆ ಕಿವುಡಾಗಿ, ಮೇಲೇಳಿ ! ಹೊರಡಿ !
ಕಷ್ಟಗಳ ಗಣಿಸದಿರಿ ; ಪ್ರತಿಫಲವು ದೊಡ್ಡದು.
ಪ್ರತಿಮಂದಿರದಲಿಂದು ಈ ಪವಿತ್ರ ದಿನದಂದು
ತುಳಸೀದಳಗಳು ಮಾಲೆ ಮಾಲೆಯಾಗುತಿವೆ ;
ಸಂತಸದಲಿಹ ಜನರ ಅನುಗ್ರಹಿಸೆ
ಈ ಹಾಡ ಅವನು ಹಾಡುತಿಹನು

ಈ ಕರೆಯು ಜಗತ್ತನ್ನೇ ಪುಟ್ಟಪರ್ತಿಗೆ ಆಕರ್ಷಿಸಿದೆ. ಸುಮಾರು ಹತ್ತು ಸಾವಿರ ಸಂಖ್ಯೆಯ ಪ್ರತಿನಿಧಿಗಳು ಶ್ರೀ ಸತ್ಯಸಾಯಿ ಸೇವಾ ಸಮಿತಿಯ ವಿವಿಧ ಘಟಕಗಳಿಂದ, ಮೂರನೆಯ ವಿಶ್ವ ಸಮ್ಮೇಳನಕ್ಕಾಗಿ ಬಂದು ನೆರೆಯುತ್ತಿದ್ದಾರೆ. 1980ರ ಜನ್ಮದಿನೋತ್ಸವದ ಸಮಯದಲ್ಲಿ ಈ ಸಮ್ಮೇಳನ ನಡೆಯಲಿದೆ.

ಸತ್ಯಂ ಶಿವಂ ಸುಂದರಂ ಕೃತಿಯ ನಾಲ್ಕನೆಯ ಭಾಗದ ಈ ತುಳಸೀದಳವು ಒಬ್ಬ ವಿನೀತ ಮಾಲೆಗಾರನಿಂದ ಅವನ ಪಾದ ಕಮಲಗಳಲ್ಲಿ ಅರ್ಪಿತವಾಗುತ್ತಿದೆ.

ನಾ. ಕಸ್ತೂರಿ
ಪ್ರಶಾಂತಿ ನಿಲಯ
27-7-1980
(ಗುರುಪೂರ್ಣಿಮ)

## ಬಿನ್ನಹ

ಭಗವಾನರ ಮಹಿಮಾ ಚರಿತ್ರೆ 'ಸತ್ಯಂ ಶಿವಂ ಸುಂದರಂ' ಕೃತಿಯ ಮೊದಲ ಮೂರು ಸಂಪುಟಗಳನ್ನು ಪೂಜ್ಯ ನಾ. ಕಸ್ತೂರಿಯವರೇ ಕನ್ನಡಿಗರ ಮಡಿಲು ತುಂಬಿದರು. ನಾಲ್ಕನೆಯ ಭಾಗ ಮುರಿದು ಹೋಯಿತು. ಅದನ್ನು ಸ್ವಾಮಿಯ ಪ್ರೇರಣೆಯಿಂದ, ಅವರು ನೀಡಿದ ಶಕ್ತಿಯಿಂದ ಹಿರಿಯ ಭಕ್ತರೂ ಸಜ್ಜನರೂ ಆದ ಶ್ರೀ ಎಸ್. ವಿ. ಆಚಾರ್ಯರ ಜೊತೆಗೂಡಿ ಕನ್ನಡಕ್ಕೆ ತರಲು ಪ್ರಯತ್ನ ಮಾಡಿದ್ದೇನೆ. ಇದಕ್ಕೆ ಕಾರಣರಾದ ಕರ್ನಾಟಕದ ಶ್ರೀ ಸತ್ಯಸಾಯಿ ಸೇವಾ ಸಮಿತಿಯ ಅಧ್ಯಕ್ಷರಾದ ಶ್ರೀ ನಾಗೇಶ ಧಾಕಪ್ಪಾ ಅವರಿಗೂ ಪ್ರಕಟನ ಮಂಡಲಿಯ ಕಾರ್ಯಕರ್ತರಿಗೂ ಆಭಾರಿಯಾಗಿದ್ದೇನೆ.

ಆಕ ನಾತ ಅಂತನರಾಮಯ್ಯ

॥ ಶ್ರೀ ಸತ್ಯಸಾಯಿನೇ ನಮಃ ॥

# ವಿಶ್ವಾಸದಲ್ಲಿ

## ಸ್ವಾಮಿಯೇ ಹೇಳಿದ ತಮ್ಮ ಕತೆ

ನೀಲಗಿರಿಯ ಉದಕಮಂಡಲದಲ್ಲಿ ಕಾಲೇಜು ವಿದ್ಯಾರ್ಥಿಗಳಿಗಾಗಿ ನಡೆಯುತ್ತಿದ್ದ ಭಾರತೀಯ ಸಂಸ್ಕೃತಿ ಮತ್ತು ಆಧ್ಯಾತ್ಮಿಕತೆಯನ್ನು ಕುರಿತ ಬೇಸಿಗೆ ಶಿಬಿರ ಮುಕ್ತಾಯವಾಗುವ ಹಂತಕ್ಕೆ ಬಂದಿತ್ತು. ಆಗ ಬಾಬಾ ವಿದ್ಯಾರ್ಥಿಗಳಿಗೆಂದು ವಿಶೇಷವಾದ ಒಂದು ಗೋಷ್ಠಿ ನಡೆಸಿದರು. ಆ ಸಮಯದಲ್ಲಿ ಅಸಾಮಾನ್ಯವಾದೊಂದು ಉಲ್ಲಾಸ ಅವರಲ್ಲಿ ವ್ಯಕ್ತವಾಗುತ್ತಿತ್ತು. ಹಿಂದಿನದನ್ನು ನೆನೆದು ಅವರು ಸಂತೋಷ ಪಡುತ್ತಿರುವಂತೆ ಕಾಣಬರುತ್ತಿತ್ತು. ತಮ್ಮ ಶಾಲಾದಿನಗಳನ್ನು ಹೇಳಿ ವಿದ್ಯಾರ್ಥಿಗಳಿಗೆ ಆನಂದ ಉಂಟು ಮಾಡಲು ಅವರು ಅಪೇಕ್ಷಿಸಿದ್ದರು. ಏಕೆಂದರೆ ಅದರಿಂದ 'ನನ್ನ ಬದುಕೇ ನನ್ನ ಸಂದೇಶ' ಎಂಬ ಅವರ ಮಾತು ಈ ಹೇಗೋ ಹಾಗೇ, ಅವರಿನ್ನೂ ಶೈಶವದಿಂದ ಬಾಲ್ಯಕ್ಕೆ ಅಡಿಯಿರಿಸುತ್ತಿದ್ದಾಗಲೂ ತಾನು ಭಗವದವತಾರವೆಂದು ಘೋಷಿಸುವುದಕ್ಕಿಂತ ಮುಂಚಿನ ದಿನಗಳಲ್ಲೂ ಸತ್ಯವಾಗಿತ್ತು. ಇದನ್ನು ವಿದ್ಯಾರ್ಥಿಗಳು ಮನವರಿಕೆ ಮಾಡಿಕೊಳ್ಳಲಿ ಎಂಬುದು ಬಾಬಾ ಅವರ ಇಷ್ಟವಾಗಿತ್ತು. ತಮ್ಮ ಸೋದರ ಬಂಧುಗಳು ಮತ್ತು ತರಗತಿ ಗೆಳೆಯರೊಂದಿಗೆ ಅವರು ಹೇಗೆ ನಡೆದುಕೊಳ್ಳುತ್ತಿದ್ದರು, ಉಪಾಧ್ಯಾಯರು ಹೇಗೆ ವರ್ತಿಸುತ್ತಿದ್ದರು, ತಾವು ಪುಟ್ಟಪರ್ತಿ, ಬುಕ್ಕಪಟ್ಟಣ, ಉರವಕೊಂಡ ಹಾಗೂ ಕಮಲಾಪುರ ಗ್ರಾಮಸ್ಥರೊಂದಿಗೆ, ಹಿರಿಯರೊಂದಿಗೆ ಹೇಗೆ ವ್ಯವಹರಿಸುತ್ತಿದ್ದರು ಎಂಬುದನ್ನು ಹೇಳಿದರು. ತಮ್ಮ ಕತೆಯ ಈ ಅಧ್ಯಾಯವನ್ನು ವಿದ್ಯಾರ್ಥಿಗಳು ಮನನ ಮಾಡಬೇಕು, ಮಗುವಾಗಿದ್ದಾಗಲೇ ತಾನು ಎದುರಿಗಿರಿಸಿಕೊಂಡಿದ್ದ ಆದರ್ಶಗಳನ್ನು ಅವರು ತಮ್ಮ ಹೃದಯಗಳಲ್ಲಿ ನೆಟ್ಟು ಬೆಳೆಸಿಕೊಳ್ಳಬೇಕು ಎಂದು ಒತ್ತಿ ಹೇಳಿದರು. 1978ರಲ್ಲಿ ಬೆಂಗಳೂರಿನಲ್ಲಿ ನಡೆದ ಬೇಸಿಗೆ ಶಿಬಿರ ಮುಗಿದಾಗ ಉದಕಮಂಡಲದ ವಿಶೇಷ ಪ್ರವಚನದ ಬಗೆಗೆ ಕೇಳಿಸಿಕೊಂಡಿದ್ದ ವಿದ್ಯಾರ್ಥಿಗಳು ತಮಗೂ ಆ ಭಾಗ್ಯ ಕರುಣಿಸಬೇಕು, ಸ್ವಾಮಿಯು ತಮ್ಮ ಬಾಲ್ಯದ ದಿನಗಳ ಬಗೆಗೆ, ಶಾಲೆಯ ಒಳಗೂ ಹೊರಗೂ ತಮ್ಮ ಲೀಲೆಗಳನ್ನು ಮೆರೆದುದರ ಚಿತ್ರವನ್ನು ದಯಮಾಡಿ ಕೊಡಬೇಕು ಎಂದು ಕೇಳಿಕೊಂಡರು. ಅವರ ಮನವಿಗೆ ಸಮ್ಮತಿಸಿ ತಮ್ಮ ಜೀವಿತೋದ್ದೇಶವನ್ನು ದಿವ್ಯತ್ವವನ್ನು ಸ್ಪಷ್ಟವಾಗಿ ನಿರವಿಸಿದ ಇನ್ನೂ ಹಲವು ಪ್ರಸಂಗಗಳನ್ನು ಪ್ರಕಟಿಸಿದರು.

ಈ ಕೃತಿಮಾಲಿಕೆಯ ಮೊದಲನೆಯ ಭಾಗ ಪುಟಗಳಲ್ಲಿ ನಾನು, ಐದು ವರ್ಷದ ಮಗುವಾಗಿದ್ದಾಗಲೇ ಬಾಬಾ 'ಗುರು' 'ಬ್ರಹ್ಮಜ್ಞಾನಿ' ಎಂಬ ವಿಶೇಷಣಗಳನ್ನು ಪಡೆದಿದ್ದರು ಎಂದು ಉಲ್ಲೇಖಿಸಿದ್ದೇನೆ. ಆಗಲೇ ಅವರು ತಮ್ಮ ಜೊತೆಯಲ್ಲಿ ಆಡಲು ಬಂದ ಗೆಳೆಯರನ್ನು ತಿದ್ದುತ್ತಿದ್ದರು.

ಅವರಿಗೆ ಬುದ್ಧಿವಾದ ಹೇಳುತ್ತಿದ್ದರು. ಅವರ ಮಾತು ಹಾಗೂ ನಡವಳಿಕೆ ಮಕ್ಕಳಿರಲಿ, ತರುಣರ ಬುದ್ಧಿಯ ಮಟ್ಟಕ್ಕೂ ಮೀರಿದ ನಡುವಳಿಕೆಯಾಗಿತ್ತು. ಮಗುವಾಗಿದ್ದಾಗ ಹಾಗೂ ಶಾಲೆಗೆ ಹೋದಾಗ ಅವರು ಮೆದುವಾಗಿದ್ದರು, ಆದರೆ ನೈತಿಕವಾಗಿ ನಿರ್ಭೀತರಾಗಿದ್ದರು. ಹಿಂಸೆ ದ್ವೇಷಗಳನ್ನು ವಿರೋಧಿಸುತ್ತಿದ್ದರು, ಸುಳ್ಳಾಡುವುದನ್ನು ತಿರಸ್ಕರಿಸುತ್ತಿದ್ದರು. ಆಡಂಬರ, ಅಬ್ಬರ ಅವರಿಗೆ ಪಥ್ಯವಾಗುತ್ತಿರಲಿಲ್ಲ. ತುಂಬ ಸರಳವಾದ ಬದುಕನ್ನು ಬಯಸುತ್ತಿದ್ದರು. ಓರಗೆಯ ಮಕ್ಕಳು ಇನ್ನೂ ವರ್ಣಮಾಲೆಯ ಅಕ್ಷರಗಳನ್ನು ಕಲಿಯಲು ಪ್ರಯಾಸ ಪಡುತ್ತಿರುವಾಗ ಅವರು ಸರಾಗವಾಗಿ ಹಾಡುವರು, ನರ್ತಿಸುವರು, ಪದ್ಯಗಳನ್ನು ಹಾಡುಗಳನ್ನು ರಚಿಸುತ್ತಿರುವರು. ಹಕ್ಕಿ ಪಕ್ಷಿ ಪ್ರಾಣಿಗಳ ಬಗೆಗೆ ಅಪಾರವಾದ ಅನುಕಂಪವನ್ನು ಅವರು ತೋರಿಸುವರು. ಮಾಂಸ, ಮೊಟ್ಟೆ ತಿನ್ನಲು ನಿರಾಕರಿಸಿದರು. ಬಾಯಾರಿದ ಎತ್ತುಗಳನ್ನು ನಿಷ್ಕರುಣೆಯಿಂದ ಜನರು ಹೊಡೆಯುತ್ತಿದ್ದಾಗ ಅವರು ಕಣ್ಣೀರಿಟ್ಟರು. ಮಕ್ಕಳ ಒಂದು ತಂಡಕ್ಕೆ ಅವರು ನಾಯಕರಾಗಿ ನಿಂತರು. ಆ ಮಕ್ಕಳಿಗೆ ಭಗವಂತನ ದಾರಿಯನ್ನೂ, ಆತನ ಕರುಣೆಯನ್ನು ಗಳಿಸುವ ವಿಧಾನಗಳನ್ನೂ ಬೋಧಿಸಿದರು.

ಅನೇಕ ದಿನಗಳು ಅವರು ಕರಣಂ ('ಗ್ರಾಮಕರಣಿಕ') ಮನೆಯಲ್ಲೇ ಉಳಿದು ಬಿಡುತ್ತಿದ್ದರು. ಆ ಮನೆಯ ಒಡತಿ ಸುಬ್ಬಮ್ಮ ಅವರ ಮೇಲೆ ಮಾತೃಪ್ರೇಮವನ್ನು ಸುರಿಸುತ್ತಿದ್ದರು. ಸಮೀಪದಲ್ಲೇ ಇದ್ದ ತಮ್ಮ ಮನೆಯಲ್ಲಿ ಕೋಳಿ ಕೊಯ್ಯುವುದನ್ನು ನೋಡಲಾಗದೆ ಸುಬ್ಬಮ್ಮನವರ ಅಕ್ಕರೆಯ ಮಡಿಲಿಗೆ ಬರುತ್ತಿದ್ದರು. ಅಲ್ಲದೆ ಪೂಜಾಗೃಹದಲ್ಲಿ ಸುಬ್ಬಮ್ಮನವರು ಮಾಡುವ ಪೂಜೆಯನ್ನು ನೋಡಲು ಅವರಿಗೆ ಆಸೆ. ಶಾಲೆಯಲ್ಲಿ ಎಂದು ಮೈಗಳ್ಳನಾಗಲಿಲ್ಲ. ಮಕ್ಕಳೊಂದಿಗೆ ಬೆರೆತು, ಅವರು ಶಾಲೆಯಿಂದ ಅತ್ಯುತ್ತಮ ಪ್ರಯೋಜನ ಪಡೆಯಲು ಅವರಿಗೆ ಸಹಾಯ ಮಾಡಿದರು.

## ಅಪ್ಪರ್ ಪ್ರೈಮರಿ ಶಾಲೆಯತ್ತ

ಕಿಕ್ಕಿರಿದು ತುಂಬಿದ ಎತ್ತಿನ ಗಾಡಿಯಲ್ಲಿ ಕುಳಿತು ಪುಟ್ಟಪರ್ತಿಯಿಂದ ಬುಕ್ಕಪಟ್ಟಣಕ್ಕೆ, ಅಲ್ಲಿಂದ ಹದಿನಾರು ಮೈಲುದೂರದ ಪೆನುಕೊಂಡೆಗೆ ತಾವು ಮಾಡಿದ ಒಂದು ಪ್ರಯಾಣದ ಕಥೆಯನ್ನು ಬಾಬಾ ಉದಕಮಂಡಲದಲ್ಲಿ ನಿರೂಪಿಸಿದರು. ಆಗ ಅವರಿಗೆ ಹತ್ತು ವರ್ಷ. ಅವರು ಮತ್ತು ಇನ್ನು ಕೆಲವರು ಹೇಗೋ ಕಷ್ಟಪಟ್ಟು ಗಾಡಿಯೊಳಕ್ಕೆ ತೂರಿಕೊಳ್ಳುವುದು ಸಾಧ್ಯವಾಯಿತು. ಹಲವರಿಗೆ ಸ್ಥಳವಿಲ್ಲದೆ ಹೊರಗುರುಳಬೇಕಾಯಿತು. ಅವರಾಗ ಲೋವರ್ ಪ್ರೈಮರಿ ಶಾಲೆಯಲ್ಲಿದ್ದು ಒಂದು ಪರೀಕ್ಷೆಯಲ್ಲಿ ಉತ್ತೀರ್ಣವಾದಾಗ ಮಾತ್ರ ಅಪ್ಪರ್ ಪ್ರೈಮರಿ ತರಗತಿಗೆ ಸೇರಿಕೊಳ್ಳಬಹುದಿತ್ತು. ಪರೀಕ್ಷೆ ನಡೆಯುತ್ತಿದ್ದುದು ಪೆನುಕೊಂಡದಲ್ಲಿ. ಅವರಿದ್ದುದು ಹದಿನೆಂಟು ಜನ, ಗಾಡಿ ತುಂಬಿ ತುಳುಕುತ್ತಿತ್ತು. ದಿಣ್ಣೆ ಬಂದರೆ ಎತ್ತುಗಳಿಗೆ ಗಾಡಿ ಎಳೆಯಲು ಆಗುತ್ತಲೇ ಇರಲಿಲ್ಲ. ಆಗ ಮಕ್ಕಳು ಕೆಳಗಿಳಿದು ಬಹಳ ದೂರ ನಡೆದುಕೊಂಡು ಬರಬೇಕಾಗುತ್ತಿತ್ತು. ಇಳುಕಲಿನಲ್ಲಿ ಚಕ್ರಗಳು ವೇಗವಾಗಿ ಉರುಳುವಾಗ ತಡೆಯಲು ಗಾಡಿಗೆ ಬ್ರೇಕುಗಳಿರುತ್ತಿರಲಿಲ್ಲ. ಆದ್ದರಿಂದ ಆಗಲೂ ಮಕ್ಕಳು ನಡೆದುಕೊಂಡೇ ಹೋಗುತ್ತಿದ್ದರು. ಮಕ್ಕಳನ್ನು ದೂರದ ಅಪರಿಚಿತವಾದ ನಗರಕ್ಕೆ ಕಳಿಸುವುದಕ್ಕೆ ಮೊದಲು ಮನೆ

ದೇವರಿಗೆ ಪೂಜೆ ಮಾಡಿ, ಪರೀಕ್ಷೆಯಲ್ಲಿ ಉತ್ತೀರ್ಣರಾಗುವಂತೆ ಮಾಡಬೇಕೆಂದು ಪ್ರಾರ್ಥನೆ ಸಲ್ಲಿಸಿದ ನಂತರವೇ ಕಳುಹಿಸಿಕೊಡಲಾಗುತ್ತಿತ್ತು.

ಪೆನುಕೊಂಡೆಯಲ್ಲಿ ಅವರೆಲ್ಲ ಒಟ್ಟಿಗೆ ಇರುತ್ತಿದ್ದರು. ಉಪಾಧ್ಯಾಯರು ಮಕ್ಕಳಿಗೆ ಕೊನೆಗಳಿಗೆ ಸೂಚನೆಗಳನ್ನು ಕೊಡುತ್ತಿದ್ದರು. ಅಡಿಗೆ ಮನೆಯ ಉಸ್ತುವಾರಿ ವಹಿಸಿಕೊಳ್ಳಲು ಬಾಬಾ ಒಪ್ಪಿದರು. ಇಡೀ ತಂಡಕ್ಕೆ ಮಧ್ಯಾಹ್ನ, ರಾತ್ರಿ ಊಟವನ್ನು ಅವರು ತಯಾರಿಸುತ್ತಿದ್ದರು. ಯಾರಿಂದರೂ ಅವರು ನೆರವನ್ನು ಕೋರಲಿಲ್ಲ. ಪರೀಕ್ಷೆಯ ಮರುದಿನವೂ ಈ ವ್ಯವಸ್ಥೆ ಮುಂದುವರಿಯಿತು. ಪಠ್ಯಭಾಗವನ್ನು ಪುನರಾವರ್ತನೆ ಮಾಡುವುದಕ್ಕಾಗಲಿ, ಉಪಾಧ್ಯಾಯರು ನಡೆಸುತ್ತಿದ್ದ ವಿಶೇಷ ತರಗತಿಗಳಿಗೆ ಹೋಗುವುದಕ್ಕಾಗಲಿ ಅವರಿಗೆ ಸಮಯವಿರಲಿಲ್ಲ. ಆದರೂ ಕೆಲವು ವಾರಗಳ ನಂತರ ಫಲಿತಾಂಶವು ಪ್ರಕಟವಾದಾಗ ಅಪ್ಪರ್ ಪ್ರೈಮರಿ ಶಾಲೆಗೆ ಹೋಗಲು ಅರ್ಹತೆ ಪಡೆದು ಉತ್ತೀರ್ಣರಾದವರು ಅವರೊಬ್ಬರೇ !! ಮೂರುಮೈಲು ದೂರದ ಹಳ್ಳಿ ಬುಕ್ಕಪಟ್ಟಣದ ಜನ ಬಹಳ ಒಳ್ಳೆಯವರು. ತಮ್ಮ ಹಳ್ಳಿಯಲ್ಲಿದ್ದ ಶಾಲೆಗೆ ಬಾಬಾ ಅವರನ್ನು ಪ್ರೀತಿಯಿಂದ ಅವರು ಸ್ವಾಗತಿಸಿದರು. ಹೂವುಗಳಿಂದ ಅಲಂಕರಿಸಿದ ಗಾಡಿಯಲ್ಲಿ ಒಂದು ಕುರ್ಚಿಯ ಮೇಲೆ ಅವರನ್ನು ಕುಳ್ಳಿರಿಸಿ ಅಲಂಕರಿಸಿದ ಎತ್ತುಗಳು ಎಳೆಯುತ್ತಿರಲು ಶಾಲೆಯ ಬಾಗಿಲವರೆಗೆ ಮೆರವಣಿಗೆಯಲ್ಲಿ ಕರೆತಂದರು. ಪುಟ್ಟಪರ್ತಿಯ ಈ 'ಅದ್ಭುತ ಬಾಲಕ', ಆಗಲೇ 'ಭಗವಂತನ ಪುತ್ರ' ಎಂದು ಪ್ರಸಿದ್ಧನಾಗಿದ್ದವನು ತಮ್ಮ ಶಾಲೆಯಲ್ಲಿ ಕಲಿಯಲು ಬಂದನಲ್ಲ ಎಂದು ಅವರಿಗೆ ತುಂಬ ಸಂತೋಷ ಹಾಗೂ ಹೆಮ್ಮೆಯಾಗಿತ್ತು.

ಬಾಬಾ ಬುಕ್ಕಪಟ್ಟಣದ ಎಲ್ಲ ಕಣ್ಣುಗಳ ಆಕರ್ಷಣೆಯ ಕೇಂದ್ರವಾಗಿದ್ದರು. ತರಗತಿಯಲ್ಲಿ ನಡೆಯುತ್ತಿದ್ದ ಪಾಠಗಳನ್ನು ಅವರು ಆಲಿಸುತ್ತಿದ್ದದ್ದು ವಿರಳ. ಪಠ್ಯಪುಸ್ತಕಗಳನ್ನು ಅವರು ತೆರೆದಿದ್ದೇ ಇಲ್ಲ. ಆದರೂ ತರಗತಿಯ ಅತ್ಯಂತ ಪ್ರತಿಭಾವಂತ ಬಾಲಕ ಎಂದು ಎಲ್ಲರೂ ಅವನನ್ನು ಹೊಗಳುವರು. ಇದರಿಂದಾಗಿ ಪ್ರತಿದಿನ ಅವರೊಟ್ಟಿಗೆ ಪುಟ್ಟಪರ್ತಿಯಿಂದ ಶಾಲೆಗೆ ನಡೆಯುತ್ತಿದ್ದ ಇತರ ಗೆಳೆಯರಿಗೆ ಬಾಬಾ ಅವರ ಬಗೆಗೆ ಹೊಟ್ಟೆಕಿಚ್ಚು ಉಂಟಾಗುತ್ತಿತ್ತು. ಅನೇಕ ವೇಳೆ ಅವರು ಜಗಳ ತೆಗೆದು ಅವರ ಮೇಲೆ ಬೀಳುತ್ತಿದ್ದರು. ಚಿತ್ರಾವತಿಯ ಮರಳ ಹಾಸಿನ ಮೇಲೆ ಬೀಳಿಸುತ್ತಿದ್ದರು. ದರದರ ಎಳೆದಾಡುತ್ತಿದ್ದರು. ಅವರ ಷರಟು ನಿಕ್ಕರುಗಳು ಕೊಳೆ ಕೆಸರು ಮೆತ್ತಿ ಹಾಳಾಗುತ್ತಿದ್ದವು. ಚಿತ್ರಾವತಿಯಲ್ಲಿ ಪ್ರವಾಹ ಬಂದಿದ್ದಾಗ ರಭಸವಾಗಿ ಮುಳುಗಿಸಲು ಪ್ರಯತ್ನಿಸುತ್ತಿದ್ದರು. ತಾವು ಈ ಹಿಂಸೆಗಳನ್ನು ಪ್ರತಿಭಟಿಸಲೂ ಇಲ್ಲ, ಯಾರೊಂದಿಗೂ ಅವುಗಳನ್ನು ಕುರಿತು ದೂರಲಿಲ್ಲ ಎಂದು ಬಾಬಾ ಹೇಳಿದರು. ಅದಕ್ಕೆ ಬದಲು ಅವು ಅಜ್ಞಾನಿಗಳಾದ ಕಿರಿಯರು ಮಾಡುವ ಕುಚೇಷ್ಟೆಗಳು ಎಂದು ಬಗೆದು ಅವುಗಳನ್ನು ಸಹಿಸಿಕೊಳ್ಳುತ್ತಿದ್ದರು. ತಮಗೆ ಹಿಂಸೆ ಕೊಡುತ್ತಿದ್ದ ಯಾರೊಬ್ಬರ ಹೆಸರನ್ನೂ ಅವರು ಹೇಳಲಿಲ್ಲ ಮಾತ್ರವಲ್ಲ, ಅವರ ವಿರುದ್ಧವಾಗಿ ಯಾವುದೇ ಕೆಟ್ಟ ಭಾವನೆಯನ್ನು ಕೂಡ ಅವರು ತಳೆಯಲಿಲ್ಲ.

## ಹಿರೇಮಣಿಯಾಗಿ

ಆ ದಿನಗಳಲ್ಲಿ ಪ್ರತಿಯೊಂದು ತರಗತಿಯೂ ಸೆಳೆಬೆತ್ತದ 'ಸುಯ್' 'ಸುಯ್' ಸದ್ದಿನಿಂದ ಪ್ರತಿಧ್ವನಿಸುತ್ತಿದ್ದಿತು. ಅದೃಷ್ಟವಿಲ್ಲದ ಅಂಗೈ ಮೇಲೂ ಬೆನ್ನ ಮೇಲೂ ನಿಷ್ಕರುಣೆಯಿಂದ

ತಡೆಬಡೆಯಿಲ್ಲದೆ ಬೆತ್ತದ ಬಡಿತ ಬೀಳುತ್ತಿದ್ದವು. ಈ ಶಿಕ್ಷೆಕೊಟ್ಟು ಉಪಾಧ್ಯಾಯರು ಬಳಲಿದಾಗ ಶಿಕ್ಷೆ ವಿಧಿಸುವ ಕೆಲಸವನ್ನು ಮುಂದುವರಿಸುವ ಭಾಗ್ಯ ತರಗತಿಯ ಅತ್ಯಂತ ಬುದ್ಧಿವಂತನಾದ ಹುಡುಗನಿಗೆ ವರ್ಗಾವಣೆಯಾಗುತ್ತಿದ್ದಿತು. ಒಂದು ದಿನ ತರಗತಿಯಲ್ಲಿ ಮಕ್ಕಳಿಗೆ ಕೊಟ್ಟ ಪ್ರಶ್ನೆ 'ಭಾರತದ ವೈಭವವನ್ನು ವರ್ಣಿಸಿ' ಎಂದು ಉತ್ತರ ಇಂಗ್ಲೀಷ್‌ನಲ್ಲಿರಬೇಕಾಗಿತ್ತು. ಮಕ್ಕಳಿಗೆ ಭಾರತದ ವಿಷಯ ತಿಳಿದಿರಲಿಲ್ಲ. ಇಂಗ್ಲೀಷಂತೂ ಇನ್ನೂ ತಿಳಿದಿರಲಿಲ್ಲ. ಬಾಬಾ ಪ್ರಶ್ನೆಗೆ ಅಡಕವಾಗಿ, ಆದರೆ ಆತ್ಮವಿಶ್ವಾಸದಿಂದ ಉತ್ತರ ಕೊಟ್ಟರು. "ಎತ್ತರವಾದ ಪರ್ವತಗಳಿಂದಲೂ, ಅನೇಕಾನೇಕ ಶಾಖೆಗಳಿಂದ ಕೂಡಿದ ಬಹುದೊಡ್ಡ ನದಿಗಳಿಂದಲೂ, ಅನೇಕ ಬಯಲುಗಳಿಂದಲೂ ತುಂಬಿದ ಭಾರತವು ಈ ಭವ್ಯ ಅಂಶಗಳಿಂದ ಸುಂದರವಾಗಿದೆ." ಆಮೇಲೆ ಬಾಬಾ ಈ ಪ್ರಸಂಗದ ಮಿಕ್ಕ ವಿವರಗಳನ್ನು ಒದಗಿಸಿದರು. " ಉಪಾಧ್ಯಾಯರ ಪ್ರಕಾರ ಇತರ ವಿದ್ಯಾರ್ಥಿಗಳಿಗೆ ಶಿಕ್ಷೆ ವಿಧಿಸಬೇಕಾಗಿತ್ತು. ನಾನು ಅವರೆಲ್ಲರ ಕೆನ್ನೆಗೆ ಹೊಡೆಯಬೇಕಾಗಿತ್ತು. ಅವರು ಒಬ್ಬೊಬ್ಬರ ಮೂಗನ್ನು ಎಡಗೈಯಿಂದ ಭದ್ರವಾಗಿ ಹಿಡಿದು ಫಟೀರನೆ ಕೆನ್ನೆಗೆ ಹೊಡೆಯಬೇಕಾಗಿತ್ತು. ತರಗತಿಯಲ್ಲಿ ಸುಮಾರು ಮೂವತ್ತು ಜನ ವಿದ್ಯಾರ್ಥಿಗಳಿದ್ದರು. ಅವರಲ್ಲಿ ಕೆಲವರಂತೂ ನನಗಿಂತ ತುಂಬಾ ಎತ್ತರವಾಗಿದ್ದರು. ನಾನು ಒಂದು ಬೆಂಚಿನ ಮೇಲೆ ಹತ್ತಿ ನಿಂತು ಅಹಿತವಾದ, ಮನಸ್ಸಿಗೆ ಇಷ್ಟವಾಗದ ಈ ಕರ್ತವ್ಯ ಪಾಲನೆ ಮಾಡಬೇಕಾಯಿತು. ಆದರೆ ಉಪಾಧ್ಯಾಯರು ಹೇಳಿದಷ್ಟು ಜೋರಾಗಿ ಹೊಡೆಯುವುದು ನನಗೆ ಸಾಧ್ಯವಾಗಲಿಲ್ಲ. ನನ್ನ ಪೆಟ್ಟುಗಳು ಬಹು ಮೃದುವಾಗಿ ಅವರ ಕೆನ್ನೆಗಳ ಮೇಲೆ ಇಳಿಯುತ್ತಿದ್ದವು. ಇದನ್ನು ನೋಡಿ ಉಪಾಧ್ಯಾಯರಿಗೆ ಬಲು ಕೋಪ ಬಂತು. ನನ್ನನ್ನು ಹತ್ತಿರ ಕರೆದು ಕೋಪದಿಂದ ಕಿರಿಚಿದರು. "ನಾನು ಅವರ ಕೆನ್ನೆಗೆ ಅರಿಶಿನ ಹಚ್ಚು ಎಂದು ನಿನಗೆ ಹೇಳಿದೆನೇನು? ಕೆನ್ನೆಗೆ ಹೊಡಿ ಎಂದು ಹೇಳಿದೆ. ಹೇಗೆ ಎಂಬುದನ್ನು ಈಗ ನಿನಗೆ ತೋರಿಸುತ್ತೇನೆ' ನನ್ನ ಮೂಗನ್ನು ಹಿಡಿದುಕೊಂಡು ಲೆಕ್ಕ ಹಾಕುತ್ತ ನನ್ನ ಕೆನ್ನೆಗೆ ಅಪ್ಪಳಿಸಿದರು. ಸುಮಾರು ಮೂವತ್ತು ಏಟುಗಳನ್ನು ಹೊಡೆದು ನಿಲ್ಲಿಸಿದರು. ಅಷ್ಟನ್ನೂ ನಾನು ಸಹಿಸಿಕೊಂಡೆ. ಉಪಾಧ್ಯಾಯರನ್ನು ನಾನು ಬಿಟ್ಟುಕೊಡಬಾರದು ಅಥವಾ ಅಪಮಾನಿಸಬಾರದು. ಭಾರತದ ಭೂಗೋಳ ಇತಿಹಾಸದ ಬಗೆಗೆ ನನಗೆ ತಿಳಿದಿದ್ದ ಪರಿಜ್ಞಾನವಾದರೂ ಅಷ್ಟೇ ಅಲ್ಲವಾಗಿದ್ದರೂ ಅಂದು ಅವರು ವಿಧಿಸಬೇಕೆಂದಿದ್ದ ಶಿಕ್ಷೆಯನ್ನೇ ಸರಿಯಾಗಿ ನಿರ್ವಹಿಸದೆ, ಅವರ ಉದ್ದೇಶ ಏನಿತ್ತೋ ಅದನ್ನು ನಾನು ಭಂಗಗೊಳಿಸಿದೆನಷ್ಟೆ'.

ತರಗತಿಯ ಹಿರೇಮಣಿಯಾಗಿ ತಮಗೆ ವಿಶೇಷ ಕರ್ತವ್ಯ ಹೊಣೆಗಾರಿಕೆ ಇದ್ದವು ; ಒಂದು ವಿಶೇಷ ಅಧಿಕಾರ ಇದ್ದಿತು ಎಂದು ಬಾಬಾ ವಿವರಿಸಿದರು. "ವಿದ್ಯಾರ್ಥಿಗಳಿಗೂ ಇತರ ತರಗತಿಗಳ ಹಿರೇಮಣಿಗಳಿಗೂ ಒಬ್ಬ ಹಿರೇಮಣಿಯಾದವನು ಹೇಗೆ ನಡೆದುಕೊಳ್ಳಬೇಕೆಂದನ್ನು ತೋರಿಸಲು ಹೊರಟೆ. ಮಿಕ್ಕವರಿಗಿಂತ ಕೆಲವು ನಿಮಿಷ ಮೊದಲು ನಾನು ಶಾಲೆಯನ್ನು ಸೇರುತ್ತಿದ್ದೆ. ತರಗತಿ ಪ್ರಾರಂಭವಾಗುವುದಕ್ಕೆ ಮೊದಲು ಕಪ್ಪು ಹಲಗೆಯನ್ನು ಒರೆಸಿಡುತ್ತಿದ್ದೆ. ಎಷ್ಟೋ ವೇಳೆ ಬೆಂಚು ಡೆಸ್ಕುಗಳನ್ನೂ ಒರೆಸಬೇಕಾಗುತ್ತಿತ್ತು. ಬಾಬಾ ಮುಂದುವರಿಸಿದರು. 'ರಾಮನು ಗುರು ವಸಿಷ್ಠರ ಪದತಲದಲ್ಲಿ ಇತರ ಬಾಲಕರೊಂದಿಗೆ ಕುಳಿತು ವಿದ್ಯಾಭ್ಯಾಸ ಮಾಡಿದನು. ಕೃಷ್ಣನೂ ಅಷ್ಟೇ, ಗುರು

ಸಂದೀಪರ ಬಳಿ ತನ್ನ ಗೆಳೆಯರಾದ ಸುಧಾಮ ಮತ್ತು ಇತರರೊಂದಿಗೆ ಕುಳಿತು ಕಲಿತನು. ನಿರಾಕಾರವೂ, ನಿರ್ಗುಣವೂ ಆದ ದೈವೀ ತತ್ವವು ಮಾನವ ಆಕಾರವನ್ನು ತಳೆದು ಮಾನವರ ನಡುವೆ ಕಾಣಿಸಿಕೊಂಡಾಗ ಎಲ್ಲರಿಗೂ ಇಷ್ಟವಾಗುವ ಜೊತೆಗಾರನಾಗಿ, ಸಮಕಾಲೀನ ಜನರಿಗೆ ಅರ್ಥವಾಗುವ ಮಟ್ಟದ ನಿದರ್ಶನವಾಗಿ ವರ್ತಿಸುವುದು ಅತ್ಯಗತ್ಯವಾಗುತ್ತದೆ".

ಬುಕ್ಕಪಟ್ಟಣದ ಶಾಲೆಯಲ್ಲಿ ತಮ್ಮ ಶಾಲಾ ಉಪಾಧ್ಯಾಯರಾದ ಕೊಂಡಪ್ಪನವರು ಕುರ್ಚಿಗೆ ಅಂಟಿಕೊಂಡು ಬಿಟ್ಟ ಪ್ರಸಂಗವನ್ನು ಉಲ್ಲೇಖಿಸುತ್ತಾ ತಾವು ಅದನ್ನು ಸಂಕಲ್ಪಿಸಿದ್ದರಿಂದ ಹಾಗೆ ಆಯಿತು ಎಂದು ಬಾಬಾ ಪ್ರವಚನದ ನಡುವೆ ಸ್ವೀಕರಿಸಿದರು. ಆಗ ಖಂಡಿತವಾಗಿ ತಮ್ಮ ಉದ್ದೇಶ ಗಂಟೆಗಟ್ಟಲೆ ತಮ್ಮನ್ನು ಬೆಂಚಿನ ಮೇಲೆ ನಿಲ್ಲಿಸಿದ್ದಕ್ಕಾಗಿ ಅವರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬುದಾಗಿರಲಿಲ್ಲ. ಅದಕ್ಕಾಗಿ ಅವರು ಅಪಮಾನದ ಮುದ್ದೆಯಾಗುವ ಹಾಗೆ ತಾವು ಮಾಡಲಿಲ್ಲ, ಎಂದು ಅವರು ವಿವರಿಸಿದರು. ತಮ್ಮ ವಿಶಿಷ್ಟತೆಯನ್ನು ಇಲ್ಲೇ ತುಸು ಪ್ರಕಟಿಸಲು, ತಮ್ಮ ದಿವ್ಯತೆಯ ಕಿರು ನೋಟವೊಂದನ್ನು ಹೊಳೆಯಿಸಲು, ಸುತ್ತಣ ಪ್ರಪಂಚ ಎದ್ದು ಕುಳಿತು 'ಯಾರು ಈ ಹುಡುಗ !'ಎಂದು ಕೇಳುವಂತೆ ಮಾಡಲು ಅದನ್ನು ಸಂಕಲ್ಪಿಸಿದುದಾಗಿ ಹೇಳಿದರು.

ಕೊಂಡಪ್ಪನವರು ಪಾಠ ಹೇಳುತ್ತಿದ್ದ ಗಂಟೆ ಮುಗಿದ ಮೇಲೆ ಅವರು ಸಹಜವಾಗಿಯೇ ಮುಂದಿನ ಪಾಠ ಮಾಡಲು ಮೆಹಬೂಬ್ ಖಾನ್ ಅವರಿಗೆ ಕುರ್ಚಿಯನ್ನು ತೆರವು ಮಾಡಿಕೊಡಬೇಕಾಗಿತ್ತು. ಆದರೆ ಅವರು ಮೇಲೆ ಏಳಲು ಸಾಧ್ಯವಾಗಲೇ ಇಲ್ಲ. ಕುರ್ಚಿ ಅವರಿಗೆ ಅಂಟಿಕೊಂಡುಬಿಟ್ಟಿತ್ತು. ಸತ್ಯನಿಗೆ ಶಿಕ್ಷೆ ಕೊಟ್ಟಿದ್ದಕ್ಕೆ ಅವರಿಗೆ ತಕ್ಕ ಶಾಸ್ತ್ರಿಯಾಯಿತು ಎಂದು ಬಾಲಕರು ಸೂಚಿಸಿದರು. ಬಾಬಾರನ್ನು ಪ್ರೀತಿಯಿಂದ ಮೆಚ್ಚುತ್ತಿದ್ದ ಮೆಹಬೂಬ್ ಖಾನ್ ಅವರಿಗೆ ಬಾಬಾ ಅವರ ದಿವ್ಯತೆಯ ಕಲ್ಪನೆ ಆಗಲೇ ಬಂದಿತ್ತು. ಅವರು ಕೊಂಡಪ್ಪನವರಿಗೆ ಹೇಳಿದರು "ನಿಮಗೆ ಇದು ಅರ್ಥವಾಗುವುದಿಲ್ಲ. ರಾಜು ಸಾಮಾನ್ಯ ಮನುಷ್ಯ ಅಲ್ಲ ; ಅವನು ದೈವೀ ಬಾಲಕ. ಅನೇಕ ಸಂದರ್ಭಗಳಲ್ಲಿ ಅವನಲ್ಲಿ ದಿವ್ಯ ತೇಜಸ್ಸು ಪ್ರಕಾಶಿಸುತ್ತಿರುವುದನ್ನು ನಾನು ನೋಡಿದ್ದೇನೆ. ನೀವು ಅವನಿಗೆ ವಿಧಿಸಿರುವ ಶಿಕ್ಷೆಯನ್ನು ಈಗಿಂದೀಗಲೇ ಹಿಂತೆಗೆದುಕೊಳ್ಳಿ. ತಕ್ಷಣವೇ ನಿಮಗೆ ಒದಗಿರುವ ಶಿಕ್ಷೆಯೂ ಮಾಯವಾಗುತ್ತದೆ." ಹೀಗೆ ಹೇಳಿ ಮೆಹಬೂಬ್ ಖಾನ್ ಬಾಬಾ ಅವರನ್ನು ನಿಂತಿದ್ದ ಬೆಂಚಿನಿಂದ ಕೆಳಗಿಳಿಯುವಂತೆ ಹೇಳಿದರು. ಅವರು ಕುಳಿತೊಡನೆಯೇ ಕೊಂಡಪ್ಪನವರೂ ಕುರ್ಚಿಯಿಂದ ಎದ್ದು ಹೊರ ನಡೆಯಲು ಸಾಧ್ಯವಾಯಿತು.

## ಸಹಪಾಠಿಗಳು

ಉರವಕೊಂಡದ ಘಟನೆಗಳನ್ನು ಸ್ವಾಮಿ ನಿರೂಪಿಸಿದರು. ಉರವಕೊಂಡ ಅನಂತಪುರದಿಂದ ಸುಮಾರು ಮೂವತ್ತು ಮೈಲು ದೂರದಲ್ಲಿದೆ. ಅಲ್ಲಿ ಅವರು ತಮ್ಮ ಅಣ್ಣನ ಮನೆಯಲ್ಲಿ ಸುಮಾರು ಎರಡು ವರ್ಷ ಇದ್ದರು. ಅಣ್ಣ ಅಲ್ಲಿನ ಪ್ರೌಢಶಾಲೆಯಲ್ಲಿ ತೆಲುಗು ಪಂಡಿತರು. ಈಗ ಒಂದೂವರೆ

ವರ್ಷದ ಹಿಂದೆ ನಾನು ಉರವಕೊಂಡದ ಆ ಶಾಲೆಯನ್ನು ನೋಡಲು ಹೋಗಿದ್ದೆ. ಅಲ್ಲಿ ಸ್ವಾಮಿಯ ಹೆಜ್ಜೆ ಗುರುತುಗಳಿಂದ ಪುನೀತಗೊಂಡ ವಿಶಾಲವಾದ ಶಾಲಾ ಪ್ರಾಂಗಣಗಳಲ್ಲಿ ನಾನು ನಡೆದಾಡಿದೆ. ಒಮ್ಮೆ ಅವರ ತರಗತಿಯಾಗಿದ್ದ ಕೊಠಡಿಯಲ್ಲಿ ಸ್ವಲ್ಪ ಹೊತ್ತು ಕಳೆದೆ. ವಿದ್ಯಾರ್ಥಿಯಾಗಿ ಅವರು ಉಪಯೋಗಿಸುತ್ತಿದ್ದ ಡೆಸ್ಕ್‌ನ ಮೇಲೆ ಸ್ವಲ್ಪ ಹೊತ್ತು ಕುಳಿತೆ. ಅದು ಬೆಂಚು-ಡೆಸ್ಕು ಎರಡೂ ಒಂದೇ ಆದ ಒಂದು ಆಸನ. ಬಾಗಿಲು ತೆರೆದು ಮುಚ್ಚಬಹುದಾದ ಇಳಿಜಾರು ಮುಚ್ಚಳವುಳ್ಳ, ಬರೆವ ಮೇಜು ಅದು. ಅಂತಹ ಪ್ರತಿ ಬೆಂಚಿನ ಮೇಲೂ ಮೂವರು ವಿದ್ಯಾರ್ಥಿಗಳು ಕುಳಿತು ಕೊಳ್ಳಬಹುದಾಗಿತ್ತು. ತಮ್ಮ ಪುಸ್ತಕಗಳನ್ನು ಅರೆಯ ಒಳಗೆ ಇರಿಸಿಕೊಳ್ಳಬಹುದಾಗಿತ್ತು. ನಾನು ಬೆಂಚಿನ ಮೇಲೆ ಕುಳಿತು ಬಾಬಾ ನನ್ನ ಪಕ್ಕದಲ್ಲಿ ಕುಳಿತಿರುವಂತೆ ಕಲ್ಪಿಸಿಕೊಂಡೆ !

ಈಗ ಉರವಕೊಂಡದಲ್ಲಿ ವೈದ್ಯಕೀಯ ನಡೆಸುತ್ತಿರುವ ಡಾ. ಮೊಯಿನುದ್ದೀನ್ ಅಂದು ನನ್ನ ಜೊತೆಯಲ್ಲಿ ಇದ್ದರು. ಅವರು ಬಾಬಾ ಅವರ ಓರಗೆಯವರು ಮತ್ತು ಅವರ ಸಹಪಾಠಿಯಾಗಿದ್ದರು. ಅವರು ನುಡಿದರು "ನನ್ನ ಬೆಂಚು ಬಾಬಾ ಅವರು ಕುಳಿತುಕೊಳ್ಳುತ್ತಿದ್ದ ಬೆಂಚಿನ ಹಿಂದಿನದು. ಅವರ ಸ್ಥಳಕ್ಕೆ ನೇರವಾಗಿ ಹಿಂದಿನ ಸ್ಥಳ ನನ್ನದಾಗಿತ್ತು. ನಾನು ಅವರ ಟೋಪಿಯನ್ನು ಎಗರಿಸಿಬಿಡುತ್ತಿದ್ದೆ. ಅವರು ತಮ್ಮ ಟೋಪಿಯನ್ನು ದಯವಿಟ್ಟು ಹಿಂದಕ್ಕೆ ಕೊಡಬೇಕೆಂದು ಪ್ರಾರ್ಥಿಸುತ್ತಿದ್ದರು. ಏಕೆಂದರೆ ತಲೆಗೆ ಟೋಪಿಯಿಲ್ಲದೆ ವಿದ್ಯಾರ್ಥಿಯು ಶಾಲೆಗೆ ಬರುವಂತೆಯೇ ಇರಲಿಲ್ಲ. ಬಾಬಾ ನನ್ನ ಜೊತೆ ಜಗಳ ಆಡಲಾರರು, ಅಥವಾ ಮಾಸ್ತರ ಬಳಿಗೆ ದೂರು ಒಯ್ಯಲಾರರು ಅಥವಾ ಮುಯ್ಯಿ ತೀರಿಸಲು ನನ್ನ ಟೋಪಿಯನ್ನು ಎಗರಿಸಲಾರರು ಎಂದು ನನಗೆ ಚೆನ್ನಾಗಿ ಗೊತ್ತು. ಅಷ್ಟು ಶಾಂತ ಸ್ವಭಾವಿ, ಅಷ್ಟು ಮೃದು, ಅಷ್ಟು ಸಾಧು. ಆದ್ದರಿಂದ ನಾನು ಏನಾದರೂ ಸಿಹಿ ತಿಂಡಿಯನ್ನು-ರಸಗುಲ್ಲಾ, ಬುಂದಿ, ಲಡ್ಡು ಅಥವಾ ಮೈಸೂರು ಪಾಕು - ಏನಾದರೂ ಸೃಷ್ಟಿ ಮಾಡಿಕೊಡಬೇಕು ಎಂದು ಷರತ್ತು ಹಾಕುತ್ತಿದ್ದೆ. ಕಲ್ಲುಸಕ್ಕರೆ ತಿಂದು ತಿಂದು ನನಗೆ ಬೇಜಾರಾಗಿತ್ತು. ಆಗ ಬಾಬಾ ತಮ್ಮ ಅಂಗೈಯನ್ನು ಎರಡೋ ಮೂರೋ ಸಲ ಹಾಗೆ ಗಾಳಿಯಲ್ಲಿ ಸುತ್ತಿಸುತ್ತಿದ್ದರು. ನನ್ನ ಪ್ರೀತಿಯ ಸಿಹಿ ತಿಂಡಿ ಪ್ರತ್ಯಕ್ಷವಾಗುತ್ತಿತ್ತು. ಆದರೆ ಈ ಘಟನೆ ಎಲ್ಲರ ನಾಲಿಗೆಗೂ ನೀರೂರಿಸುವುದು. ಮತ್ತೆ ಹಾಗೇ ಮಾಡಿ ತಮಗೂ ಸಿಹಿತಿಂಡಿ ಕೊಡಬೇಕೆಂದು ಎಲ್ಲರೂ ಕಿರುಚುವರು. ಈ ಸದ್ದು ಜೋರಾಗಿ ಉಪಾಧ್ಯಾಯರು ಬರುವಂತೆ ಮಾಡುವುದು. ಅವರಿಗೂ ಒಂದು ಪಾಲು ದೊರೆತ ನಂತರ ಪಾಠ ಪ್ರಾರಂಭವಾಗುವುದು." ಬಾಬಾ ಅವರ ಇನ್ನೊಬ್ಬ ಸಹಪಾಠಿ ಶ್ರೀ ಸೀತಾರಾಮರಾವ್. ಈ ಜಗತ್ತಿನ ನೆಲೆಗೊಳಿಸಿ ಎಲ್ಲ ಕಡೆಯೂ ಸತ್ಯವು ತಾನೇ ತಾನಾಗಿ ಮೆರೆಯುವಂತೆ ಮಾಡುವುದಾಗಿ ಬಾಬಾ ಅವರೊಂದಿಗೆ ಹೇಳಿದ್ದರಂತೆ.

ಶಾಲೆಯ ನಡುವಣ ಅಂಗಳದಲ್ಲಿ ಬೆಳೆದಿದ್ದ, ಕೊಂಬೆಗಳು ಹೆಣೆದುಕೊಂಡ ಕುಳ್ಳಾದ ಹಳೆಯ ಮರಗಳನ್ನೂ ನಾನು ನೋಡಿದೆ. ಆ ಅಂಗಳದಲ್ಲಿದ್ದ ಐದು ಮರಗಳಲ್ಲಿ ಬಾಬಾ ತಾವು ಹೇಗೆ ಮರಕೋತಿ ಆಟ ಆಡುತ್ತಿದ್ದರೆಂಬುದನ್ನು ವರ್ಣಿಸಿದರು. ಅವುಗಳಲ್ಲಿ ಎರಡನ್ನು ಕಡಿದು ಬಿಟ್ಟಿದ್ದರು. ಅದೃಷ್ಟವಶಾತ್ ಇನ್ನೂ ಮೂರು ಉಳಿದಿದೆ. ಮರಕೋತಿ ಎರಡು ತಂಡಗಳು ಸೇರಿ ಆಡುವ ಆಟ. ಕೊಂಬೆಗಳ ಮೇಲೆ ಸರಿಯುತ್ತಾ ಕೆಳಕ್ಕೆ ಬೀಳದೆ ನೇತಾಡುತ್ತಾರೆ. ಕೊಂಬೆಯಿಂದ ಕೊಂಬೆಗೆ

ಹಾಯುತ್ತಾರೆ, ಎದುರಾಳಿಗಳನ್ನು ಹೆದರಿಸಿ ಅವರ ಧೈರ್ಯ ಕುಸಿಯುವಂತೆ ಮಾಡುತ್ತಾರೆ. ಕೊಂಬೆಗಳ ನಡುವೆ ತೆವಳುತ್ತಾರೆ, ನೆಗೆಯುತ್ತಾರೆ. ಈ ಆಟದಲ್ಲಿ ಯಾರನ್ನು ಮುಟ್ಟುತ್ತಾರೋ ಅವರು 'ಔಟ್' ಆದ ಹಾಗೆ. ಕೋಪದಿಂದ ಎದುರಾಳಿಗಳ ಮೇಲೆ ಕೆರಳಿ ಗುರುಗುಟ್ಟುತ್ತಾರೆ. ಆಗಾಗ ಜಾರಿ ಬೀಳುತ್ತಾರೆ. ಹಾಗೆ ಬಿದ್ದರೆ ಅವರು 'ಸತ್ತ' ಹಾಗೆ ; ಆಟದಿಂದ ಹೊರಗೆ. ಕೊಂಬೆಗಳನ್ನು ಜೋರಾಗಿ ಅಲುಗಾಡಿಸುತ್ತಾರೆ. ಅಲ್ಲಿ ಕುಳಿತಿರುವ 'ಕೋತಿ'ಗಳು ಕೆಳಗೆ ಬೀಳಲಿ ಎಂದು. ನಗು, ಕೇಕೆ, ಅಬ್ಬರಗಳ ನಡುವೆ ಯಾರಾದರೂ ಕೆಟ್ಟ ಮಾತಾಡಿದರೆ ತಕ್ಷಣವೇ ಅವರನ್ನು 'ಕೆಳಗೆ ಬಿದ್ದು ಔಟ್' ಆದ ಹಾಗೆ ಎಂದು ಹೇಳುತ್ತಿದ್ದರು. ಆಟದ ಕೊನೆಯಲ್ಲಿ ಬಾಬಾ ಪ್ರತಿಯೊಬ್ಬರಿಗೂ ಸಿಹಿ ಕೊಡುತ್ತಿದ್ದರು. ಆ ದಿನಗಳಲ್ಲಿ ಆ ಮರಗಳ ಮೇಲೆ ಆಟವಾಡಿ ನೆಗೆದು ಕುಪ್ಪಳಿಸಿದ ಡಾ. ಮೊಯಿನುದ್ದೀನ್ ಅಂಥವರು ಆ ಆಟದ ಸವಿಯನ್ನು ಈಗಲೂ ನೆನೆದು ಚಪ್ಪರಿಸುತ್ತಿದ್ದಾರೆ.

## ಸ್ಕೌಟ್ ತಂಡ

ಒಂದು ಪ್ರವಚನದಲ್ಲಿ ಸ್ವಾಮಿಯು ತಮ್ಮ 'ಬಾಲ್ಯ ಸ್ಕೌಟ್' ದಿನಗಳ ಕಥೆಯನ್ನು ವಿವರಿಸಿದರು. "ನಮಗೊಬ್ಬರು ವ್ಯಾಯಾಮ ಶಿಕ್ಷಕರಿದ್ದರು. ಶಾಲಾ ಸೌಟ್ ತಂಡವೊಂದನ್ನು ಅವರು ಕಟ್ಟಿದರು. ನಾನು ಆ ತಂಡಕ್ಕೆ ಸೇರಿ ಕೊಳ್ಳಲೇಬೇಕೆಂದು ಒತ್ತಾಯ ಮಾಡಿದರು. ಸ್ಕೌಟಿಂಗಿನ ಕೆಲವು ಒಳ್ಳೆಯ ತತ್ವಗಳನ್ನು ಸಾಧನೆಯ ಪಥದ ಕಡೆಗೆ ತಿರುಗಿಸಲು ಪ್ರಯತ್ನಿಸಬೇಕೆಂದು ನನಗೂ ಇಷ್ಟವಿತ್ತು. ಆದರೇನು ಮಾಡುವುದು, ನಮ್ಮ ಮನೆಯವರು ತುಂಬ ಬಡವರು. ಸಮವಸ್ತ್ರ ಕೊಡಿಸುವುದಾಗಲಿ, ಇತರ ವೆಚ್ಚಗಳಿಗೆ ಹಣ ಒದಗಿಸುವುದಕ್ಕಾಗಲಿ ಅವರಿಗೆ ಶಕ್ಯವಿರಲಿಲ್ಲ. ಆದುದರಿಂದ ಸೇರಿಕೊಳ್ಳಲು ನನಗೆ ಸಾಧ್ಯವಾಗಲಿಲ್ಲ. ನಮ್ಮ ಕುಟುಂಬದ ಬಡತನ ಎಷ್ಟು ಆಳವಾಗಿತ್ತೆಂಬುದನ್ನು ನಿಮಗೆ ಮನವರಿಕೆ ಮಾಡಬೇಕಾದರೆ ಒಂದು ಸಂದರ್ಭ ವಿವರಿಸುತ್ತೇನೆ ಕೇಳಿ : ಒಂದೇ ಅಂಗಿಯನ್ನು ತೊಟ್ಟುಕೊಂಡು ನಾನು ಪ್ರತಿದಿನವೂ ಶಾಲೆಗೆ ಹೋಗುತ್ತಿದ್ದೆ. ಏಕೆಂದರೆ ಎರಡನೆಯ ಒಂದು ಅಂಗಿಯೇ ನನ್ನ ಬಳಿ ಇರಲಿಲ್ಲ. ಈ ಗುಟ್ಟು ಇಳಿದುಕೊಂಡ ಕೆಲ ಹುಡುಗರು ನನ್ನನ್ನು ಆಡಿಕೊಂಡು ನಗತೊಡಗಿದರು. ಶಾಲೆಗೆ ಹೋಗುವಾಗ, ಬರುವಾಗ ನನ್ನನ್ನು ಛೇಡಿಸುತ್ತಿದ್ದರು, ಮೊದಲೇ ಹರಿದುಹೋಗಿದ್ದ ನನ್ನ ಅಂಗಿಯನ್ನು ಇನ್ನಷ್ಟು ಎಳೆದಾಡುತ್ತಿದ್ದರು, ಹರಿದು ಬಿಡುತ್ತಿದ್ದರು. ಹರಿದ ಅಂಗಿಯನ್ನು ಜೋಡಿಸಿ ಚುಚ್ಚಿಕೊಳ್ಳಲು ಒಂದು ಪಿನ್ನು ಕೂಡ ಇರಲಿಲ್ಲವಾಗಿ ಹೊಲದ ಬೇಲಿಯ ಪಕ್ಕದಲ್ಲಿ ಬೆಳೆದಿದ್ದ ಗಿಡದ ಮುಳ್ಳನ್ನೇ ಕಿತ್ತು ಅಂಗಿಗೆ ಚುಚ್ಚಿಕೊಳ್ಳುತ್ತಿದ್ದೆ.

"ಸ್ಕೌಟು ತಂಡಕ್ಕೆ ನಾನು ಸೇರಿಕೊಳ್ಳದಿರಲು ನಿಜವಾದ ಕಾರಣ ಏನೆಂದು ತಿಳಿದ ನನ್ನ ಗೆಳೆಯರಿಗೆ ತುಂಬ ದುಃಖವಾಯಿತು. ತರಗತಿಯಲ್ಲಿ ಯಾವಾಗಲೂ ನನ್ನ ಬಲಗಡೆ ಕುಳಿತುಕೊಳ್ಳುತ್ತಿದ್ದ ಹುಡುಗ ಕಂದಾಯ ಇಲಾಖೆಯ ಮುಖ್ಯ ಕರಣಿಕರ ಮಗ. ಅವನು ತನ್ನ ತಂದೆಯ ಬಳಿ ಹೋಗಿ ಎರಡು ಜೊತೆ ಸಮವಸ್ತ್ರ ಹೊಲಿಸಿಕೊಡಬೇಕೆಂದು ಕೇಳಿಕೊಂಡ. ಸಮವಸ್ತ್ರವೆಂದರೆ ಖಾಕಿ ನಿಕ್ಕರು

ಮತ್ತು ಖಾಕಿಯ ಅರತೋಳಿನ ಅಂಗಿ, ಒಂದು ಜೊತೆಯನ್ನು ಸುರುಳಿ ಸುತ್ತಿ ನನ್ನ ಡೆಸ್ಕ್‌ನ ಅರೆಯಲ್ಲಿ ತಂದಿಟ್ಟು ಅದರ ಜೊತೆಗೆ ಒಂದು ಸಣ್ಣ ಕಾಗದ ಬರೆದಿಟ್ಟ. "ನೀನು ಇದನ್ನು ತೆಗೆದುಕೊಳ್ಳಲೇಬೇಕು, ಹಾಕಿಕೊಳ್ಳಲೇ ಬೇಕು. ನಾನು ಸೋದರರು. ಆದ್ದರಿಂದ ಇದನ್ನು ತೆಗೆದುಕೋ !" ಆದರೆ ಅದನ್ನು ನೋಡಿ ನನಗೆ ಸಂತೋಷವಾಗಲಿಲ್ಲ. ಈ ಉಡುಗೊರೆಯನ್ನು ನಿರಾಕರಿಸಬೇಕೆಂದು ನಿರ್ಧರಿಸಿದೆ. ಸಮವಸ್ತ್ರವನ್ನು ಅವನ ಡೆಸ್ಕಿನ ಅರೆಯಲ್ಲಿಟ್ಟು ಅದರ ಜೊತೆಯಲ್ಲಿ ಒಂದು ಪತ್ರ ಬರೆದಿಟ್ಟೆ "ನಮ್ಮ ಸ್ನೇಹ ಮುಂದುವರಿಯಬೇಕೆಂದು ನೀನು ಬಯಸುವೆಯಾದರೆ ಲೌಕಿಕವಾದ ವಸ್ತುಗಳ ಕೊಡುವಿಕೆ ಕೊಳ್ಳುವಿಕೆಗಳಲ್ಲಿ ನೀನು ತೊಡಗಬಾರದು. ಅಗತ್ಯವಿರುವ ವ್ಯಕ್ತಿಯು ಇನ್ನೊಬ್ಬನಿಂದ ಒಂದು ವಸ್ತುವನ್ನು ಪಡೆದಾಗ, ಈ ಉಪಕಾರವನ್ನು ಹೇಗೆ ತೀರಿಸುವುದು ಎಂಬ ಆತಂಕ ಅವನನ್ನು ಕಾಡತೊಡಗುತ್ತದೆ ; ಅದೇ ಸಮಯದಲ್ಲಿ ಕೊಟ್ಟವನ ಮನಸ್ಸಿನಲ್ಲಿ ತಾನು ಮಾಡಿದ ದಾನದ ಬಗೆಗೆ ಜಂಬಹುಟ್ಟಿ ಅವನ ಮನಸ್ಸನ್ನು ಹಾಳು ಮಾಡುತ್ತದೆ. ನಿಜವಾದ ಸ್ನೇಹವು ಹೃದಯದಿಂದ ಹೃದಯಕ್ಕೆ ಹರಿಯಬೇಕು. ಕೊಳು ಕೊಡೆಯ ತಳಹದಿಯ ಮೇಲೆ ನಾವು ಸ್ನೇಹವನ್ನು ಕಟ್ಟಿದರೆ ತೆಗೆದುಕೊಂಡವನು ತಾನು ಸಣ್ಣವನೆಂದು ಕೊಳ್ಳುತ್ತಾನೆ : ಕೊಟ್ಟವನು ತಾನು ದೊಡ್ಡವನೆಂದು ಬೀಗುತ್ತಾನೆ. ಅಂತಹ ಸ್ನೇಹ ಹೆಚ್ಚು ಕಾಲ ಬಾಳುವುದಿಲ್ಲ. ಆದ್ದರಿಂದ ನೀನು ನನ್ನ ಡೆಸ್ಕಿನಲ್ಲಿಟ್ಟ ಬಟ್ಟೆಗಳನ್ನು ನಾನು ತೆಗೆದುಕೊಳ್ಳುವುದಿಲ್ಲ ; ಈ ಪತ್ರದೊಂದಿಗೆ ನಿನಗೆ ಹಿಂದಿರುಗಿಸುತ್ತೇನೆ. ಮಾರನೆಯ ದಿನ ಆ ಹುಡುಗ ಮತ್ತೆ ಬೇಡಿಕೊಂಡನು. "ನೀನು ಬೇಕಾದರೆ ಸ್ಕೌಟ್ ತಂಡವನ್ನು ಬಿಟ್ಟ ನಂತರ ಅದನ್ನು ಹಿಂದಿರುಗಿಸಬಹುದು" ಎಂದನು. ನಾನು ಅದಕ್ಕೂ ಒಪ್ಪಲಿಲ್ಲ. ನಾನು ಹೇಳಿದೆ "ನನಗೆ ಸಹಾಯದ ಅಗತ್ಯವಿಲ್ಲ. ಅದನ್ನು ನಾನು ಕೇಳುವುದಿಲ್ಲ. ಇತರರಿಗೆ ನೆರವು ನೀಡಲು, ನೆರವು ನೀಡುವ ಅತ್ಯುತ್ತಮ ವಿಧಾನ ಯಾವುದೆಂದು ತೋರಿಸಿಕೊಡಲು ಅವಕಾಶಕ್ಕಾಗಿ ನಾನು ಕಾಯುತ್ತಿದ್ದೇನೆ. ಅಲ್ಲದೆ, ನಿನ್ನ ತಂದೆ ನಿನಗಾಗಿ ಈ ಸಮವಸ್ತ್ರಗಳನ್ನು ಸಿದ್ಧಪಡಿಸಿ ಕೊಟ್ಟಿದ್ದಾರೆ. ಅವು ನನ್ನ ಉಪಯೋಗಕ್ಕೆಂದು ಸಿದ್ಧವಾದವಲ್ಲ. ನನ್ನ ಹೆಸರೇ ಹೇಳುವ ಹಾಗೆ ನಾನು ಸತ್ಯ. ನಿನ್ನ ಬದಲಾಗಿ ನಾನು ಇವನ್ನು ಉಪಯೋಗಿಸಿದರೆ ನಾನು ಸತ್ಯವನ್ನು ಒಂದು ಬದಿಗೆ ತಳ್ಳಿಹಾಕಿದಂತಾಗುತ್ತದೆ ಅಷ್ಟೆ". "ನನ್ನ ಬಂಧುವೊಬ್ಬರಿಗೆ ಸುಮಾರು ಇಪ್ಪತ್ತು ವರ್ಷಗಳ ಕೆಳಗೆ ಏನಾಯಿತು ಎಂಬುದನ್ನು ಈ ಸಂದರ್ಭದಲ್ಲಿ ಹೇಳಬೇಕೆನಿಸುತ್ತದೆ. ಅವರು ರಂಗೂನಿನಲ್ಲಿ ಒಂದು ಬರ್ಮಾ ಕೊಡೆಯನ್ನು ಕೊಂಡುಕೊಂಡರು. ಚಪ್ಪಟೆ ಮುಸುಕಿನ, ಉಜ್ವಲ ಬಣ್ಣದ ಆ ಕೊಡೆಯನ್ನು ಬೆಂಗಳೂರಿನಲ್ಲಿ ವಾಸಿಸುತ್ತಿದ್ದ ತಮ್ಮ ಸೋದರಿಗಾಗಿ ಎಂದು ಕೊಂಡು ತಂದಿದ್ದರು. ಆದರೆ ಆಕೆ ಅದನ್ನು ತೆಗೆದುಕೊಳ್ಳಲು ಒಪ್ಪಲಿಲ್ಲ, ಯಾರೂ ಬಳಸದೆ ಆ ಕೊಡೆ ಹಾಗೇ ಉಳಿದಿತ್ತು. ಆತನ ತಂದೆ, ತಾಯಿ ಒಮ್ಮೆ ಆ ಕೊಡೆಯನ್ನು ತಂದು ಬಾಬಾ ಅವರೆದುರಿಗೆ ಕಾಣಿಕೆಯೆಂದು ಇಟ್ಟರು. ಒಡನೆಯೇ ಸ್ವಾಮಿ ಹೇಳಿದರು : "ಕದ್ದ ವಸ್ತುಗಳನ್ನು ಏಕೆ ನನಗಾಗಿ ತರುವಿರಿ ! ಇದು ನಿಮ್ಮ ಮಗಳಿಗೆ ಸೇರಿದ್ದು. ಆಕೆ ಅದನ್ನು ಉಪಯೋಗಿಸಲಿ, ಬಿಡಲಿ ಇದು ಅವಳ ವಸ್ತು." ಬಾಬಾ ಅವರಿಗೆ ಅರ್ಪಿಸುವ ಪ್ರತಿಯೊಂದು ವಸ್ತುವೂ ಮೊತ್ತಮೊದಲು ಅವರಿಗಾಗಿ ಉದ್ದೇಶಿಸಿ ಅರ್ಪಿಸಿದುದಾಗಿರಬೇಕು.

## ಗುರುವಾರಗಳು

ಉರವಕೊಂಡದಲ್ಲಿ ಬಾಬಾ ಪ್ರತಿದಿನವೂ ಮನೆಗೆ ನೀರು ಹೊತ್ತು ತರುತ್ತಿದ್ದ ಬಾವಿಯನ್ನು ನಾನು ನೋಡಿದೆ. ಅವರ ಮನೆಯಿಂದ ಕೊನೆಯ ಪಕ್ಷ ಒಂದು ಕಿಲೋಮೀಟರು ದೂರದಲ್ಲಿದ್ದ ಆ ಬಾವಿಯಿಂದ ದೊಡ್ಡ ಗಡಿಗೆಗಳಿಗೆ ನೀರು ತುಂಬಿಸಿಕೊಂಡು ಅಡ್ಡೆಗೆ ತೂಗುಹಾಕಿಕೊಂಡು ಬಾಬಾ ನಡೆದು ತರುತ್ತಿದ್ದರು. ದಿನಕ್ಕೆ ಆರು ಸಾರಿ ಹೀಗೆ ಹೊತ್ತು ತರಬೇಕಾಗಿತ್ತು. ಇಡೀ ಹಳ್ಳಿಗೆ ಅದೊಂದೇ ಸಿಹಿನೀರಿನ ಬಾವಿ. ನೀರು ಬಹಳ ಆಳದಲ್ಲಿದ್ದುದರಿಂದ ಸೇದಿ ಗಡಿಗೆಗೆ ತುಂಬಿಕೊಳ್ಳುವುದು, ಹೊತ್ತು ತರುವುದು ಅವರಿಗೆ ವಿಪರೀತ ಆಯಾಸವುಂಟುಮಾಡುತ್ತಿದ್ದಿರಬೇಕು. "ಮನೆಗೆ ಬೇಕಾದಷ್ಟು ನೀರು ಒದಗಿಸುವಷ್ಟರಿಂದಾಗಿ ಬೇರೆ ಯಾವ ಚಟುವಟಿಕೆಗೂ ನನಗೆ ಸಮಯವೇ ಇರುತ್ತಿರಲಿಲ್ಲ" ಎನ್ನುತ್ತಾರೆ ಬಾಬಾ. ಅವರನ್ನು ಬಾಲಕನಾಗಿದ್ದಾಗಲೇ ಪ್ರೀತಿಸಿ ಮೆಚ್ಚಿ ಗೌರವಿಸಿದ ಉಪಾಧ್ಯಾಯರು ಮೆಹಬೂಬ್ ಖಾನ್ ಅವರನ್ನು ನಾನು ಸಂಧಿಸಲು ಸಾಧ್ಯವಾಯಿತು. ಮುಂದೊಂದು ದಿನ ಬಾಬಾ ವಿಶ್ವಗುರುವಾಗುವರೆಂದು ಅವರು ಕಣಿ ನುಡಿದಿದ್ದರು.

ಬಾಬಾ ತಮ್ಮ ಅಣ್ಣನೊಂದಿಗೆ ಇದ್ದ ಮನೆ ಈಗ ಬಿದ್ದು ಹೋಗಿ ಮಣ್ಣುಗುಪ್ಪೆಗಳ ರಾಶಿಯಾಗಿದೆ. ಅವುಗಳ ನಡುವೆಯೇ ಹೇಗೋ ಎಡೆ ಮಾಡಿಕೊಂಡು ನುಗ್ಗಿದೆವು. ತಾವು ಶಿರ್ಡಿಸಾಯಿ ಅವತಾರವೆಂದು ಘೋಷಿಸಿದ ತರುವಾಯ ಪ್ರತಿ ಗುರುವಾರ ಕುಳಿತುಕೊಳ್ಳುತ್ತಿದ್ದ ಪವಿತ್ರ ಸ್ಥಳದಲ್ಲಿ ಭಕ್ತಿಯಿಂದ ನಿಂತುಕೊಂಡೆವು. ಅಲ್ಲಿ ನಿಂತು ಭಕ್ತಿ ಗೌರವಗಳಿಂದ ತುಂಬಿ ಹೋಗಿದ್ದಾಗಲೇ ಹಳ್ಳಿಯ ವೃದ್ಧರೊಬ್ಬರು ಆ ಕಾಲದ ಒಂದು ಘಟನೆಯನ್ನು ನಮಗೆ ವಿವರಿಸಿದರು. "ಒಂದು ರಾತ್ರಿ ಕೆಲವು ಹೆಂಗಸರು ಎತ್ತಿನ ಬಂಡಿಯಲ್ಲಿ ಕುಳಿತು ಸಿನಿಮಾ ನೋಡಲು ಉರವಕೊಂಡಕ್ಕೆ ಬಂದರು. ಗಾಡಿಯಲ್ಲಿ ಎಲ್ಲ ಒತ್ತಾಗಿ ಕುಳಿತುಕೊಂಡಿದ್ದರು. ಕತ್ತಲು ಕವಿದಿದ್ದುದರ ಲಾಭ ಪಡೆದು ಒಬ್ಬ ಹೆಂಗಸು ಇನ್ನೊಬ್ಬಳ ತಲೆಯಿಂದ ಒಂದು ಚಿನ್ನದ ನಗವನ್ನು ಹಾರಿಸಿಬಿಟ್ಟಳು. ಇದು ಗೊತ್ತಾದದ್ದು ಉರವಕೊಂಡಕ್ಕೆ ಬಂದು ಎಲ್ಲರೂ ಗಾಡಿಯಿಂದ ಇಳಿದಾಗಲೇ. ಆದರೆ ಅವರಲ್ಲಿ ಯಾರಿಗೂ ಪರಸ್ಪರ ಅನುಮಾನ ಬರಲೇ ಇಲ್ಲ, ಎಲ್ಲರೂ ಅಷ್ಟು ಮಟ್ಟಿಗೆ ಪರಿಚಿತರು. ನಗ ಸಡಿಲವಾಗಿ ದಾರಿಯಲ್ಲಿ ಗಾಡಿ ಕುಲುಕಿದಾಗ ಎಲ್ಲೋ ಕೆಳಕ್ಕೆ ಬಿದ್ದು ಹೋಗಿರಬೇಕು ಎಂದು ಯಾರೋ ಸೂಚಿಸಿದರು. ಇನ್ನೊಬ್ಬರು ಆ ಹೆಂಗಸು ಆ ನಗವನ್ನು ಹಾಕಿಕೊಂಡೇ ಬಂದಿದ್ದಳೊ ಚೆನ್ನಾಗಿ ನೆನಪು ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದರು. ಆಗ ಒಬ್ಬ ಮುದುಕ "ಇಲ್ಲೊಬ್ಬ ಪವಾಡದ ಹುಡುಗನಿದ್ದಾನೆ, ಅವನನ್ನು ಕೇಳೋಣ. ಅವನು ನಮ್ಮ ತೆಲುಗು ಉಪಾಧ್ಯಾಯರ ತಮ್ಮ" ಎಂದನು. ಎಲ್ಲರೂ ಬಾಬಾ ಇದ್ದಲ್ಲಿಗೆ ಬಂದರು. ತಂಡವನ್ನು ನೋಡಿದೊಡನೆ ಬಾಬಾ "ಹೆ ! ಜಾನಕಮ್ಮ ! ಮೊದಲು ನಗವನ್ನು ಹಿಂದಕ್ಕೆ ಕೊಡು!" ಎಂದು ಬಿಟ್ಟರು. ಪಾಪ ಚಕಿತಳಾದ ಜಾನಕಮ್ಮ ಬಾಬಾ ಆಜ್ಞೆ ಮಾಡಿದ ಹಾಗೆಯೇ ಮಾಡಿದಳು. ನಾಚಿಕೆ ಅಪಮಾನದಿಂದ ಅವಳ ತಲೆ ತಗ್ಗಿ ಹೋಗಿತ್ತು. ಬಾಬಾ ಇತರರಿಗೆ ಹೇಳಿದರು, "ಹೋಗಿ, ಅವಳನ್ನು ನಿಮ್ಮ ಜೊತೆ ಸಿನಿಮಾಕ್ಕೆ ಕರೆದುಕೊಂಡು ಹೋಗಿ. ಪಶ್ಚಾತ್ತಾಪವೇ ಸಾಕಷ್ಟು ಶಿಕ್ಷೆಯಾಗಿದೆ. ಈ ತಪ್ಪನ್ನು ನೀವೆಲ್ಲ ಮರೆತು ಬಿಡಿ. ಇಲ್ಲಿ ನಿಮ್ಮದೂ ತಪ್ಪಿದೆ. ದುರ್ಬಲ ಮನಸ್ಸಿನ ಈ ಹೆಂಗಸಿಗೆ ಆಸೆ ಹುಟ್ಟುವ ಹಾಗೆ ಮಾಡಿದಿರಲ್ಲ. ಅವಳು ಮತ್ತೆ ಹೀಗೆ ಮಾಡುವುದಿಲ್ಲ. ನಾನು ಅವಳನ್ನು ಆಶೀರ್ವದಿಸಿದ್ದೇನೆ."

## ತೂಗು ಕುರ್ಚಿ

ತಮ್ಮ ಬಾಲ್ಯ ಹಾಗೂ ತಾರುಣ್ಯದಲ್ಲಿ ಕಡುಬಡತನ ಮತ್ತು ಸಂಕಷ್ಟಗಳನ್ನು ಮೌನವಾಗಿ ಯಾರನ್ನೂ ಆದಕ್ಕಾಗಿ ದೂರದೆ ಹೇಗೆ ತಾವು ಅನುಭವಿಸದರೆಂದು ಬಾಬಾ ವಿದ್ಯಾರ್ಥಿಗಳಿಗೆ ಹೇಳಿದರು. ಮನೆಯಲ್ಲಿ ಒಂದು ತೂಗು ಕುರ್ಚಿಯಿತ್ತು. ಒಂದು ಸಂಜೆ ಅವರು ಅದರ ಮೇಲೆ ಕುಳಿತಿದ್ದರು. ಅವರ ಅಣ್ಣನ ಭಾವ ಮೈದುನನು ಇವರು ಕುರ್ಚಿಯ ಮೇಲೆ ಕುಳಿತು ಹಿಂದಕ್ಕೂ ಮುಂದಕ್ಕೂ ತೂಗಿಕೊಳ್ಳುತ್ತಿದ್ದುದನ್ನು ಕಂಡು ಕುಪಿತನಾದನು. " ಆ ಅಮೂಲ್ಯವಾದ ಕುರ್ಚಿಯ ಮೇಲೆ ಕುಳಿತು ಮಹಾರಾಜನ ಹಾಗೆ ಹಿಂದಕ್ಕೂ ಮುಂದಕ್ಕೂ ತೂಗಿಕೊಳ್ಳಲು ನಿನಗೆ ಯಾರು ಅನುಮತಿ ಕೊಟ್ಟರು? ಎದ್ದೇಳು, ಮೊದಲು ಇಲ್ಲಿಂದ ಆಚೆಗೆ ಹೋಗು !" ಎಂದು ಗರ್ಜಿಸಿದನು. ಬಾಬಾ ಉತ್ತರ ಕೊಟ್ಟರು " ನಾನು ಬೆಳ್ಳಿಯ ಕುರ್ಚಿಯ ಮೇಲೆ ಕುಳಿತು ಮಹಾರಾಜನಾಗುವ ದಿನ ಹತ್ತಿರ ಬರುತ್ತಿದೆ. ಅದನ್ನು ನೀನೇ ನೋಡುತ್ತೀಯೆ." ಈ ಉತ್ತರದಿಂದ ಆತನ ಕೋಪ ಇನ್ನೂ ಹೆಚ್ಚಿತು. ಆದರೆ ಅವರಿಗೆ ಇನ್ನೇನೂ ಹಿಂಸೆಯನ್ನು ಮಾಡಲಿಲ್ಲ. ಸುಮಾರು ಏಳು ವರ್ಷಗಳ ನಂತರ ಚಿಂಚೋಳಿಯ ಮಹಾರಾಣಿಯು ತನ್ನ ಸ್ವಾಮಿಯು ಮರದ ಕುರ್ಚಿಯ ಮೇಲೆ ಕುಳಿತುಕೊಳ್ಳುವುದನ್ನು ನೋಡಲಾರದೆ ಅವರಿಗಾಗಿ ಒಂದು ಬೆಳ್ಳಿಯ ಕುರ್ಚಿಯನ್ನು ಮಾಡಿಸಿ ತಂದಳು. ಆದರೆ ಸ್ವಾಮಿ ಅದರ ಕಟ್ಟು ಬಿಚ್ಚಲು ಅನುಮತಿ ಕೊಡಲಿಲ್ಲ. ಶಿವರಾತ್ರಿ, ದಸರಾ ಅಂತಹ ವಿಶೇಷ ಸಂದರ್ಭಗಳಲ್ಲೂ ಅದನ್ನು ಹೊರಕ್ಕೆ ತೆಗೆಯಲಿಲ್ಲ. ಸ್ವಾಮಿಯ ಹುಟ್ಟಿದ ಹಬ್ಬದ ಸಂದರ್ಭದಲ್ಲಿ ಅಣ್ಣನ ಭಾವಮೈದುನನು ಪುಟ್ಟಪರ್ತಿಗೆ ಬಂದನು. ಆಗ ಬಾಬಾ ಎಲ್ಲರನ್ನೂ ಬಿಟ್ಟು ಆತನನ್ನು ಆ ಕುರ್ಚಿಯ ಕಟ್ಟನ್ನು ಬಿಡಿಸಿ ಕುರ್ಚಿಯನ್ನು ಪ್ರಶಾಂತಿ ಮಂದಿರದ ವೇದಿಕೆಯ ಮೇಲೆ ತಂದಿರಿಸುವಂತೆ ಹೇಳಿದರು. ಸಾಮೂಹಿಕ ಭಜನೆಗಳಿಗಾಗಿ ಅದು ಆಗ ಸಜ್ಜುಗೊಂಡಿತ್ತು. ಆ ಭಾವಮೈದುನನು ಪಶ್ಚಾತ್ತಾಪದ ಕಣ್ಣೀರಿಟ್ಟನು. ತನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದನು. ಬಾಬಾ ಅವರು ದುಃಖಿಸಬೇಡವೆಂದು ಸಾಂತ್ವನ ಹೇಳಿದರು. ಬಹುಶಃ ಬಾಬಾ ಅವರು ತೀಕ್ಷ್ಣ ಪ್ರತಿಕ್ರಿಯೆ ತೋರಿಸಿದ್ದು ಇದೊಂದೇ ಸಂದರ್ಭದಲ್ಲಿ ಎಂದು ಕಾಣುತ್ತದೆ. ಏಕೆಂದರೆ ಸಾಮಾನ್ಯವಾಗಿ ಅವರು ಇತರರ ಕೋಪವನ್ನು ಅನ್ಯಾದೃಶವಾದ ಅಲಕ್ಷ್ಯದಿಂದಲೂ ಸಂಯಮದಿಂದಲೂ ಸಹಿಸಿಕೊಳ್ಳುತ್ತಾರೆ. ತಾನು ಯಾವ ಕುಟುಂಬದಲ್ಲಿ ಹುಟ್ಟಿದರೋ ಆ ಕುಟುಂಬದ ಗೌರವಘನತೆಗಳನ್ನು ರಕ್ಷಿಸಲು, ಇತರರ ಲೇವಡಿ, ಅಪಹಾಸ್ಯಗಳು ತಟ್ಟದಂತೆ ಕಾಪಾಡಲು ತಾವು ಸದಾ ಜಾಗೃತರಾಗಿದ್ದುದಾಗಿ ಬಾಬಾ ವಿದ್ಯಾರ್ಥಿಗಳಿಗೆ ಹೇಳಿದರು.

ಬಾಬಾ ತಮ್ಮ ಬಟ್ಟೆಬರೆಗಳನ್ನೂ ಇತರ ಸಾಮಾಗ್ರಿಗಳನ್ನೂ ತಂದುಕೊಳ್ಳುತ್ತಿದ್ದ ಕೋಟಿ ಸುಬ್ಬಣ್ಣನವರ ಜನತಾ ಸ್ಟೋರ್ಸ್ ಇನ್ನೂ ಇದ್ದುದನ್ನು ನಾನು ನೋಡಿದೆ. ಹಾಡುಗಳನ್ನೂ ಘೋಷವಾಕ್ಯಗಳನ್ನೂ ರಚಿಸಿಕೊಟ್ಟು ಅವುಗಳಿಗೆ ಬದಲಾಗಿ ಅಂಗಡಿಯಿಂದ ಬಾಬಾ ತಮಗೆ ಅಗತ್ಯವಾದ ಸಾಮಾಗ್ರಿಗಳನ್ನು ತರುತ್ತಿದ್ದರು. ಈಗ ಸುಬ್ಬಣ್ಣನವರ ಮೊಮ್ಮಗ ಅಂಗಡಿ ನಡೆಸುತ್ತಿದ್ದಾರೆ. ಸುಬ್ಬಣ್ಣನವರೊಮ್ಮೆ ತಮ್ಮ ಅಂಗಡಿಯ ಶಿಶು ಆಹಾರಗಳು ಹಾಗೂ ಆಯುರ್ವೇದ ಔಷಧಿಗಳ

ಮಾರಾಟವನ್ನು ಹೆಚ್ಚಿಸಲು ಬಾಬಾ ಅವರ ನೆರವು ಕೋರಿದರು. ಬಾಬಾ ಒಪ್ಪಿಕೊಂಡರು. ಅದಕ್ಕೆ ಪ್ರತಿಯಾಗಿ ತಾವು ಕೊಂಡುಕೊಳ್ಳಲು ಸಾಧ್ಯವಿಲ್ಲದಿದ್ದ ಆದರೆ ತಮಗೆ ಅತ್ಯಂತ ಅವಶ್ಯಕವಾಗಿದ್ದ ವಸ್ತುಗಳನ್ನು ಪಡೆದರು. ಬಾಬಾ ಅವರು ರಚಿಸಿಕೊಟ್ಟ ಪುಟ್ಟ ಘೋಷಣೆಗಳು ಮತ್ತು ಹಾಡುಗಳ ಪ್ರಚಾರ ಮೌಲ್ಯ ಬಹಳ ಹೆಚ್ಚಿನದಾಗಿತ್ತು. ಆ ಹಾಡುಗಳನ್ನು ಅನೇಕ ಹುಡುಗರು ಕೈಯಲ್ಲಿ ಪ್ರಚಾರ ಫಲಕಗಳನ್ನು ಹಿಡಿದುಕೊಂಡು ಸಾಮೂಹಿಕವಾಗಿ ಹಾಡುತ್ತಾ ಬೀದಿಗಳಲ್ಲಿ ತಿರುಗಿದಾಗ ಆ ವಸ್ತುವು ಕ್ಷಣಾರ್ಧದಲ್ಲಿ ಮಾರಾಟವಾಗಿ ಮುಗಿದು ಹೋಗುತ್ತಿತ್ತು ಎಂದು ಸುಬ್ಬಣ್ಣನವರ ಸಮಕಾಲೀನರಾಗಿದ್ದವರು ನನಗೆ ಹೇಳಿದರು. ಬಾಬಾ ಅವರ ತಂದೆ ವೆಂಕಮರಾಜು ಸುಬ್ಬಣ್ಣನವರಿಗೆ ಕೃತಜ್ಞತೆ ಹೇಳಿದರು. ಏಕೆಂದರೆ ಸುಬ್ಬಣ್ಣನವರು ಬಾಬಾ ಅವರಿಗೆ ಸಹಾಯ ಮಾಡುತ್ತಿದ್ದುದರಿಂದ ಅವರು ಕೆಲವಾದರೂ ಬಟ್ಟೆಗಳನ್ನು, ಕೆಲವು ನೋಟ್‌ಪುಸ್ತಕಗಳನ್ನು ಪಡೆಯುವುದು ಸಾಧ್ಯವಾಯಿತು ಎಂದು ಅವರ ಭಾವನೆ. ಯಾವುದೇ ಒಂದು ಹೊಸ ಪದಾರ್ಥವನ್ನು ಉರವಕೊಂಡದ ಜನರಿಗೆ ಪರಿಚಯ ಮಾಡಿ ಕೊಡಬೇಕಾಗಿದ್ದಾಗ (ನಿದರ್ಶನಕ್ಕೆ ಮದರಾಸಿನ ಡಿ. ಗೋಪಾಲಾಚಾರ್ಯ ಅವರು "ಬಾಲಾಮೃತ") ಹುಡುಗರ ತಂಡದ ಈ ಬೀದಿ ಸಂಗೀತದ ನೆರವಿನಿಂದ ಸುಬ್ಬಣ್ಣನವರು ಅದನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದರು. ಊರಿನಲ್ಲಿ ಪ್ರತಿವಾರ ಸಂತೆ ಸೇರುತ್ತಿದ್ದ ಅಂತಹ ದಿನಗಳಲ್ಲೂ ಸುಬ್ಬಣ್ಣನವರು ಪ್ರಚಾರ ಫಲಕಗಳು ಮತ್ತು 'ಸಂಗೀತ ತಂಡ'ದ ನೆರವಿನಿಂದ ಸಮೃದ್ಧವಾದ ವ್ಯಾಪಾರ ಗಿಟ್ಟಿಸುತ್ತಿದ್ದರು.

## ಅನುಭವಿ ಸಲಹೆಗಾರ

ಸ್ವಾಮಿ ಹೇಳಿದರು, ಬಾಲಕನಾಗಿದ್ದಾಗಲೇ ಸಮಾಜದ ಅಸ್ತವ್ಯಸ್ತತೆಗಳು, ದೋಷಗಳು, ದುರಾಭ್ಯಾಸಗಳು ಮತ್ತು ಲೋಪಗಳನ್ನು ತಿದ್ದುವುದರಲ್ಲಿ ಅವರಿಗೆ ಕಾಳಜಿಯಿತ್ತು. ಕವಿತೆಗಳನ್ನೂ, ನಾಟಕಗಳನ್ನೂ ರಚಿಸಿ ಅದರಲ್ಲಿ ವ್ಯಂಗ್ಯ ವಿಡಂಬನೆಗಳ ಮೂಲಕ ಅವರು ಅದನ್ನು ಸಾಧಿಸುತ್ತಿದ್ದರು. 'ಚೆಪ್ಪಿನಟ್ಟು ಚೇಸ್ತಾರಾ' (ಆಡಿದಂತೆ ಮಾಡುತ್ತಾರೆಯೆ) ಎನ್ನುವ ನಾಟಕವು ಅವರ ಶೈಕ್ಷಣಿಕ ಪ್ರಯೋಗಗಳಿಗೆ ಒಂದು ಒಳ್ಳೆಯ ನಿದರ್ಶನ. ಮಕ್ಕಳೂ ವಿದ್ಯಾರ್ಥಿಗಳೂ ಸಲೀಸಾಗಿ ಅರಗಿಸಿಕೊಂಡು ಕಲಿತುಬಿಡುವ ವಂಚನೆ ಎಂಬ ದುರ್ಗುಣಕ್ಕೆ ಪ್ರೇರಣೆ ತಂದೆ ತಾಯಿ ಮತ್ತು ಉಪಾಧ್ಯಾಯರು. ಅವರ ಈ ದುರ್ಗುಣವನ್ನು ಈ ನಾಟಕ ಬಯಲಿಗೆಳೆಯಿತು. ಅದೇ ರೀತಿ ಇಂದು ಬಾಬಾ ನಮ್ಮ ಮನಸ್ಸು, ಮಾತು, ಕೃತಿ ಮೂರನ್ನೂ ಹೊಂದಾಣಿಕೆಗೊಳಿಸಿಕೊಳ್ಳುವಂತೆ ಬುದ್ಧಿವಾದ ಹೇಳುತ್ತಾರೆ. ಅವರು ಪುಟ್ಟಪರ್ತಿಯಲ್ಲಿ ರಜೆಯ ದಿನಗಳನ್ನು ಕಳೆಯುವಾಗ ಜಾನಪದ ಗೀತೆಗಳಲ್ಲಿ ಮದ್ಯಪಾನ, ನಿರಕ್ಷರತೆ, ಹಳ್ಳಿಗರು ಬೇಜವಾಬ್ದಾರಿಯಿಂದ ಸಾಲಿಗರಾಗುವುದು-ಈ ದೋಷಗಳನ್ನು ಕುರಿತು ದೀರ್ಘವಾದ ವಿಡಂಬನ ಹಾಡುಗಳನ್ನು ಬಾಬಾ ಮಕ್ಕಳಿಗೆ ಕಲಿಸಿಕೊಡುತ್ತಿದ್ದರು. ಆಮೇಲೆ ಗುಂಪು ಗುಂಪಾಗಿ ಮನೆಗಳ ಮುಂದೆ ನಿಂತು ಮಕ್ಕಳು ಇವುಗಳನ್ನು ಹಾಡುತ್ತಿದ್ದರು. ತಮ್ಮ ದೋಷಗಳನ್ನು ಹೀಗೆ ಮೂದಲಿಸುವುದನ್ನು ಸಹಿಸದೆ ಕೆಲವು ಗೃಹಸ್ಥರು ಕುಪಿತರಾಗುತ್ತಿದ್ದರು. ಆದರೆ ಈ ರೀತಿಯ ಸುಧಾರಣಾ ಕಾರ್ಯವನ್ನು ಮುಂದುವರಿಸುವಂತೆ ಹುಡುಗರಿಗೆ ಪ್ರೋತ್ಸಾಹ ನೀಡುತ್ತಿದ್ದರು. ಗ್ರಾಮದ ಕರಣಿಕರೂ ಸ್ವಾಮಿಯ ಕಟಕಿಗೆ ಹೊರತಾಗಿ ಉಳಿಯಲಿಲ್ಲ. ಅವರಲ್ಲಿ ಒಬ್ಬ ತನ್ನ 'ಹಿಟ್ಲರ್ ಮೀಸೆ"ಯ

ಬಗ್ಗೆ ಗರ್ವ ಪಡುತ್ತಿದ್ದ. ಥಳಥಳನೆ ಹೊಳೆಯುವ ತನ್ನ ಕೈಗಡಿಯಾರದ ಸರಪಣಿ, ಕೊನೆಗೆ ತನ್ನ ಸ್ತ್ರೀಲಂಪಟತೆ, ವಿನೋದದ ಬಗ್ಗೆ ಕೂಡ ಆತನಿಗೆ ಹೆಮ್ಮೆಯಿತ್ತು. ಆತನನ್ನು ಕುರಿತು ಒಂದು ವಿಡಂಬನ ಕವಿತೆಯನ್ನು ತಾವು ಕಟ್ಟಿ ಮಕ್ಕಳು ಅದನ್ನು ಹಾಡಿ ಆತನ ಸೊಕ್ಕು ಇಳಿಯುವಂತೆ ಮಾಡಿದ್ವಾಗಿ ಸ್ವಾಮಿ ವಿದ್ಯಾರ್ಥಿಗಳಿಗೆ ಹೇಳಿದರು. ಆತನ ಮನೆಬಾಗಿಲಿನ ಮುಂದೆ ನಿಂತು ಅವರೆಲ್ಲಾ ಒಟ್ಟಾಗಿ ಜೋರಾಗಿ ಅದನ್ನು ಹಾಡಿದರು ; ಗಂಟಲು ಕಟ್ಟುವವರೆಗೆ ಹಾಡಿದರು. ಇದನ್ನು ಸಹಿಸದ ಆ ಕರಣಿಕನು ಅವರನ್ನು ಹೊಡೆಯಲು ಧಾವಿಸಿ ಬಂದನು. ಆದರೆ ತಂಡವು ಚೆಲ್ಲಾಪಿಲ್ಲಿಯಾಗಿ ಓಡಿ ಬಿಟ್ಟಿತು. ಯಾರನ್ನೂ ಹಿಡಿದುಕೊಳ್ಳಲು ಅವನಿಗೆ ಸಾಧ್ಯವಾಗಲೇ ಇಲ್ಲ. ಹೀಗೆ ಕೂಗುವ ಓಡುವ ಆಟ ಎಲ್ಲಿಯವರೆಗೆ ನಡೆಯಿತೆಂದರೆ ಅವನಿಗೇ ಸಾಕುಬೇಕೆನಿಸಿತು. ಮೂಗಿನ ಕೆಳಗಿದ್ದ ಆ ಭಯಂಕರ ಮೀಸೆಯನ್ನು ಬೋಳಿಸಿದನು. ಮೊಳಕೈಗೆ ಹಾಕಿಕೊಂಡಿದ್ದ ಚರ್ಮದ ಪಟ್ಟಿಯನ್ನು ತೆಗೆದನು ಮತ್ತು ತನ್ನ ರಹಸ್ಯ ಭೇಟಿಗಳನ್ನು ನಿಲ್ಲಿಸಿದನು. ಬಾಬಾ ತೆಲುಗಿನಲ್ಲಿ ಒಂದು ನಾಟಕವನ್ನು ರಚಿಸಿದರು. 'ಹೊಸ ಕಾಲ' ಎಂಬ ಆ ನಾಟಕ ಒಬ್ಬ ಕವಿಯನ್ನು ಕುರಿತದ್ದು. ಅವನು ಬದುಕಿದ್ದಾಗ ಸಮಾಜವು ಆತನನ್ನು ಅಲಕ್ಷಿಸಿತು. ಆದರೆ ಅವನು ಸತ್ತ ಕೆಲವು ವರ್ಷಗಳ ನಂತರ ಅವನ ಮಗನು ಚುನಾವಣೆಯಲ್ಲಿ ಗೆಲ್ಲಲು ಕಾರಣವಾಗುವಷ್ಟು ಪ್ರಚೋದಕವಾದ ಸಾಮಾಗ್ರಿಯನ್ನು ಅವನ ಕವಿತೆ ಒದಗಿಸಿತ್ತು.

ಶಾಲೆಯ ವಾರ್ಷಿಕೋತ್ಸವದ ದಿನ ಅಭಿನಯಿಸಲು 'ಚೆಪ್ಪಿನಟ್ಟು ಚೇಸ್ತಾರಾ' ಎಂಬ ನಾಟಕವನ್ನು ಬರೆಯುವಂತೆ ಸ್ವಾಮಿಯನ್ನು ಪ್ರಚೋದಿಸಿದ ಗುರುಗಳು ತಮ್ಮಿರಾಜು ಅವರ ಮನೆ ಈಗಲೂ ಇದೆ. ಒಂದು ಕಾಲದಲ್ಲಿ ಶೇಷಮರಾಜು ಅವರ ಮನೆಯಾಗಿದ್ದು ಈಗ ಮಣ್ಣುಗುಡ್ಡೆಯಾಗಿರುವ ಸ್ಥಳದ ಎದುರಿಗೆ ಈ ಮನೆ ಭದ್ರವಾಗಿ ನಿಂತಿದೆ. ವಾಸ್ತವವಾಗಿ ಅದು ಮುಮ್ಮಡಿ ಪವಿತ್ರ ಸ್ಥಳ. ಅಲ್ಲಿ ಸ್ವಾಮಿಯು ತಮ್ಮ ಗುರು ಹಾಗೂ ಗುರುಪತ್ನಿಯೊಂದಿಗೆ ಅನೇಕ ಗಂಟೆಗಳ ಕಾಲ ಕಳೆಯುತ್ತಿದ್ದರು. ತಮ್ಮ ವಯಸ್ಸಿನವನೇ ಆದ ಅವರ ಮಗನೊಂದಿಗೆ ಆಟವಾಡುತ್ತಾ ಕಾಲ ಕಳೆಯುತ್ತಿದ್ದರು. ತಮ್ಮ ಹಲವು ದಿವ್ಯಲೀಲೆಗಳನ್ನು ಅವನಿಗೆ ತೋರಿಸಿದ ಸ್ಥಳವದು. ಅವರ ಮನೆಯ ಗೋಡೆಯ ಮೇಲೆ ಸ್ವಾಮಿಯ ಹೆಸರು ಹೇಳಿದೊಡನೆ ದಶಾವತಾರಗಳು ಹಾಗೂ ಗುರುಪತ್ನಿಯು ಪೂಜಿಸುತ್ತಿದ್ದ ಇತರ ದೇವತೆಗಳು ಮತ್ತು ನಂತರ ಚಿತ್ರಗಳು ಮೂಡುತ್ತಿದ್ದುವು. ಈ ಘಟನೆಯನ್ನು ಕುರಿತು ಆಕೆಯು ಮುಂದೆ ಒಂದು ಕವಿತೆ ಬರೆದರು. ಅದು ಮದರಾಸಿನ ಸಾಯಿ ಸಮಾಜವು ಪ್ರಕಟಿಸುತ್ತಿದ್ದ ಮಾಸ ಪತ್ರಿಕೆಯಲ್ಲಿ ಪ್ರಕಟವಾಯಿತು. "ತಾವು ಯಾವುದಕ್ಕಾಗಿ ಬಂದಿದ್ದರೋ ಆ ಉದ್ದೇಶವನ್ನು ನೆರವೇರಿಸಲು" ಸ್ವಾಮಿಯ ಮನೆ ಬಿಟ್ಟು ಹೊರಟಾಗ ಅವರ ಸುತ್ತ ಸುವರ್ಣ ಪ್ರಭೆಯ ಪರಿವೇಷವನ್ನು ಕಂಡು ಅಮರರಾದ ನಾರಾಯಣ ಶಾಸ್ತ್ರಿಯವರ ಮನೆ ಶೇಷಮರಾಜುವಿನ ಮನೆಯ ಪಕ್ಕದಲ್ಲೇ ಇದೆ. ನಾರಾಯಣ ಶಾಸ್ತ್ರಿಗಳಿಗೆ ಒಮ್ಮೆ ತಮ್ಮ ಪಾಂಡಿತ್ಯದ ಬಗೆಗೆ ಗರ್ವ ಇತ್ತು. ಶಾಸ್ತ್ರ ಗ್ರಂಥಗಳಿಗೆ ಅವರು ಮಾಡುತ್ತಿದ್ದ ವ್ಯಾಖ್ಯಾನವನ್ನು ಬಾಲಕ ಬಾಬಾ ಒಮ್ಮೆ ಕೆದಕಿ ಪ್ರಶ್ನೆ ಕೇಳಿ ಶಾಸ್ತ್ರಿಗಳ ಗರ್ವ ಅಡಗುವಂತೆ ಮಾಡಿದರು. ಅರಿಜೋನಾ ವಿಶ್ವವಿದ್ಯಾಲಯದ ಡಾ. ಬಾರೋನೋವ್‌ಸ್ಕಿಯವರು

ವೈಟ್‌ಫೀಲ್ಡಿನ ಬೃಂದಾವನದಲ್ಲಿ ಹಲವು ದಿನಗಳ ಕಾಲ ಬಾಬಾ ಅವರ ಸಿರಿಮುಡಿಯಿಂದ ಹೊಮ್ಮುತ್ತಿದ್ದ ಕಾಂತಿ ಪರಿವೇಷವನ್ನು ಕಂಡುದನ್ನು ನಾನು ಅವರೊಂದಿಗೆ ಮಾತನಾಡಿ ತಿಳಿದುಕೊಂಡಾಗ ಹಿಂದೆ ನಾರಾಯಣ ಶಾಸ್ತ್ರಿಗಳಿಗೆ ಎಂಥ ಆನಂದ ಉಂಟಾಗಿದ್ದಿರಬಹುದು ಎಂದು ಊಹಿಸಿಕೊಳ್ಳುವುದು ಸಾಧ್ಯವಾಯಿತು.

## ಪ್ರಾರ್ಥನೆಗಳನ್ನು ಕಲಿಸಿದರು

ಉರವಕೊಂಡದಲ್ಲಿ ಸ್ವಾಮಿ 'ಕಷ್ಟದ ದಿನ'ಗಳನ್ನು ಕಳೆದುದನ್ನು ವಿದ್ಯಾರ್ಥಿಗಳಿಗೆ ಹೇಳಿದರು. ಶಾಲೆಯಲ್ಲಾಗಲಿ, ಊರಿನಲ್ಲಾಗಲಿ ತುಂಬ ಜನಪ್ರಿಯ ವ್ಯಕ್ತಿಯಾಗಿದ್ದರೂ ಅವರು ಕಷ್ಟಪಡಬೇಕಾಗಿತ್ತು. ತಮ್ಮ ಭಾವನ ಮನೆಗೆ ದಿನವೂ ನೀರು ಹೊತ್ತು ತಂದು ತುಂಬುವುದು ಮತ್ತು ಕಟ್ಟಿಗೆ ಸಂಗ್ರಹಿಸುವುದು ಈ ಕೆಲಸ ಮಾಡಬೇಕಾಗಿತ್ತು. ಸುತ್ತಮುತ್ತ ಇರುವ ಗುಡ್ಡಗಳಲ್ಲಿ ಅಲೆದಾಡಿ ಒಣ್ಣಕಡ್ಡಿಗಳು, ರೆಂಬೆಗಳನ್ನು ಸಂಗ್ರಹಿಸಿ ಹೊರೆ ಕಟ್ಟಿಕೊಂಡು ಎರಡು ಮೂರು ದಿನಗಳಿಗೊಂದು ಸಾರಿ ತಂದು ಹಾಕುತ್ತಿದ್ದರು. ಕುಡಿಯುವ ನೀರಿಗೆ ಆ ಊರಿನಲ್ಲಿದ್ದದ್ದು ಒಂದು ಬಾವಿ. ಅದೂ ಸ್ವಲ್ಪ ದೂರದಲ್ಲಿ. ಅಲ್ಲಿಂದ ನೀರು ಸೇದಿ ಹೊತ್ತು ತರುತ್ತಿದ್ದರು. ಈ ತೆರನಾದ ಆಯಾಸಕರವಾದ ಕೆಲಸಗಳಲ್ಲಿ ತೊಡಗಿರುತ್ತಿದ್ದರೂ ಸ್ವಾಮಿ ಸದಾ ಉಲ್ಲಸಿತರಾಗಿರುತ್ತಿದ್ದರು. ಅವರಲ್ಲಿ ಹಾಸ್ಯ ನಗು ತುಂಬಿ ತುಳುಕುತ್ತಿದ್ದವು. ಅವರು ಪಡುತ್ತಿದ್ದ ಕಷ್ಟವನ್ನು ನೋಡಿ ಮನಸ್ಸು ತಡೆಯದೆ ನೆರೆಯವರು ತಂದೆ ತಾಯಿಗಳಿಗೆ ಪತ್ರ ಬರೆದು ತಮ್ಮನ್ನು ಅಲ್ಲಿಂದ ಕರೆದುಕೊಂಡು ಹೋಗುವಂತೆ ಕೇಳಿ ಎಂದು ಸ್ವಾಮಿಗೆ ಹೇಳಿಕೊಟ್ಟರು. ಬೇಕಾದರೆ ತಾವೇ ಬರೆಯುವುದಾಗಿಯೂ ಕೆಲವರು ಮುಂದೆ ಬಂದರು. ಆದರೆ ಸ್ವಾಮಿ ಪ್ರತಿಯೊಬ್ಬರಿಗೂ ಹೇಳಿಬಿಟ್ಟರು. ತಮ್ಮ ಬಗೆಗೆ ಅವರು ನೊಂದು ಕೊಳ್ಳಬೇಕಾಗಿಲ್ಲ. ತಮ್ಮಿಂದ ಸೇವೆ ಸಲ್ಲುತ್ತಿದೆಯಲ್ಲ ಎಂದು ತಮಗೆ ತುಂಬಾ ಸಂತೋಷವಾಗಿದೆ. "ನಿಮಗೇಕೆ ಚಿಂತೆ? ನಾನು ಸಂತೋಷವಾಗಿದ್ದೇನೆ." ಎನ್ನುತ್ತಿದ್ದರು.

ಶಾಲೆಯಲ್ಲಿ ಪ್ರತಿದಿನ ತರಗತಿಗಳು ಆರಂಭವಾಗುವುದಕ್ಕೆ ಮೊದಲು ಸ್ವಾಮಿ ಯಾವ ವೇದಿಕೆಯ ಮೇಲೆ ನಿಂತು ಸಹವಿದ್ಯಾರ್ಥಿಗಳೆದುರಿಗೆ ಪ್ರಾಥನಾ ಗೀತೆಗಳನ್ನು ಹಾಡುತ್ತಿದ್ದರೋ ಆ ವೇದಿಕೆಯ ಮೇಲೆ ನಾನು ನಿಂತೆ. ಈ ವೇದಿಕೆಯ ಮೇಲಿಂದಲೇ ಒಂದು ಶುಭದಿನ ಸ್ವಾಮಿ ಘೋಷಿಸಿದ್ದು : "ಇನ್ನು ಮುಂದೆ ನಾನು ನಿಮಗೆ ಸಂಬಂಧಿಸಿದವನಲ್ಲ. ಯಾರಿಗೆ ನನ್ನ ಅಗತ್ಯ ಇದೆಯೋ, ಯಾರು ನನ್ನ ಬಳಿಗೆ ಬರುತ್ತಾರೆಯೋ ಅವರಿಗೆ ಸೇರಿದವನು" ಅವರು ಆಡಿದ ಮಾತುಗಳನ್ನು ಅಲ್ಲಿ ನೆರೆದಿದ್ದವರು ಇನ್ನೂ ಅರ್ಥ ಮಾಡಿಕೊಂಡು ಅರಗಿಸಿಕೊಳ್ಳುವುದಕ್ಕೆ ಮೊದಲೇ ಸ್ವಾಮಿ ಮೆಟ್ಟಿಲಿಳಿದು ಬಂದಾಗಿತ್ತು. ಅಲ್ಲಿಂದ ತೆಲುಗು ಅಧ್ಯಾಪಕರಾದ ತಮ್ಮ ಅಣ್ಣ ಇದ್ದ ಮನೆಗೆ ಹೋದರು. ಅಲ್ಲಿ ಪುಸ್ತಕಗಳನ್ನು ಒಂದು ಕಡೆ ಹಾಕಿ ಪಟ್ಟಣದ ಕೊನೆಯಲ್ಲಿದ್ದ ಎಕ್ಸೈಸ್ ಇನ್ಸ್‌ಪೆಕ್ಟರ್ ಆಗಿದ್ದ ಆಂಜನೇಯುಲು ಅವರ ಮನೆಗೆ ಹೋದರು. ಆಂಜನೇಯುಲು ಬಾಬಾರನ್ನು ತುಂಬಾ ಪ್ರೀತಿಸುತ್ತಿದ್ದರು, ಮೆಚ್ಚುತ್ತಿದ್ದರು ಬಹುಶಃ ಸ್ವಾಮಿಯ ಅಗತ್ಯವಿದ್ದ, ಜ್ಞಾನದ ಬೆಳಕು ನೀಡಿ ಉದ್ಧರಿಸಬೇಕೆಂದು ಬಾಬಾರನ್ನು ಬೇಡುತ್ತಿದ್ದ

ವ್ಯಕ್ತಿ ಅವರಾಗಿದ್ದಿರಬಹುದು. ಸ್ವಾಮಿ ಅವರ ಮನೆಯೊಳಕ್ಕೆ ಹೋಗಲಿಲ್ಲ. ಮನೆಯ ಆವರಣದಲ್ಲಿ ಅನೇಕ ಬಂಡೆಗಳು ಮರದ ಕೆಳಗೆ ಬಿದ್ದಿದ್ದವು. ಸುಮಾರಾಗಿ ಮಧ್ಯಮ ಗಾತ್ರದ ಒಂದು ಬಂಡೆಯ ಮೇಲೆ ಸ್ವಾಮಿ ಕುಳಿತರು, ಆಂಜನೇಯುಲು ಅವರ ಮನೆಬಾಗಿಲಿಗೆ ಎದುರಾಗಿ. ಶಾಲೆಯಿಂದ ಅವರನ್ನು ಹಿಂಬಾಲಿಸಿ ಬಂದ ಜನ ಸಮೂಹ ಈಗ ಬಹು ದೊಡ್ಡ ಗುಂಪಾಗಿತ್ತು. ಸ್ವಾಮಿಯ ಸುತ್ತ ಎತ್ತೆತ್ತಲೂ ತಲೆಗಳೇ. ಶಾಲೆಯಿಂದ ಬಂದ ಈ ಅದ್ಭುತ ನಡೆಗೆ ಒಂದು ಜಾಗತಿಕ ಕ್ರಾಂತಿಯ ಮೊದಲ ಸ್ಥ ಎಂಬಂತೆ ಆಂಜನೇಯುಲು ಒಂದು ದರ್ಶನವನ್ನು ಕಂಡಿದ್ದರು. ಹಾಗಾಗಿ ಸ್ವಾಮಿ ಕುಳಿತ ಬಂಡೆಯ ಮೇಲೆ ಒಂದು ಮಂಟಪ ಕಟ್ಟಿಸಿದರು. ಮಿಕ್ಕ ಬಂಡೆಗಳಿಂದ ಪ್ರತ್ಯೇಕಗೊಳಿಸಿ ನೋಡಲು ಅದು ಅಗತ್ಯವಾಗಿತ್ತು. ಇತ್ತೀಚೆಗೆ ಉರವಕೊಂಡದ ಸಜ್ಜನರು ಆ ಸ್ಥಳವನ್ನು ಕೊಂಡು ಅಲ್ಲಿ ಒಂದು ಸಮುದಾಯ ಭವನವನ್ನು ನಿರ್ಮಿಸಿ ತಮ್ಮ ನೇತೃತ್ವದಲ್ಲಿ ಸೇವಾ ಕಾರ್ಯಗಳನ್ನು ಕೈಗೊಳ್ಳಲು ಸ್ವಾಮಿ ಅನುಮತಿ ನೀಡಿದರು.

## ಘೋಷಣೆ

ಆ ಬಂಡೆಯ ಮೇಲೆ ಕುಳಿತು ಸ್ವಾಮಿ ತಮ್ಮ ಭಕ್ತರು ತಮ್ಮ ಕರೆಯುತ್ತಿರುವುದಾಗಿಯೂ ಇನ್ನು ಎಷ್ಟು ಮಾತ್ರಕ್ಕೂ ತಾವು ಒಬ್ಬ ವಿದ್ಯಾರ್ಥಿಯಂತೆ, ಅಥವಾ ರಾಜು ಮನೆತನದ ಒಬ್ಬ ಸದಸ್ಯನಂತೆ ನಟಿಸಲು ಸಾಧ್ಯವಿಲ್ಲವೆಂತಲೂ ಪ್ರಕಟಿಸಿದರು "ನಾನು ನನ್ನ ಕರ್ತವ್ಯವನ್ನು ಪೂರೈಸಬೇಕಾಗಿದೆ" ಎಂದರು. ತಾವು ಶಿರ್ಡಿಯಲ್ಲಿದ್ದಾಗ ಭಾಗಶಃ ಅದನ್ನು ನೆರವೇರಿಸಿದ್ದುದಾಗಿ ನುಡಿದರು. ಆಮೇಲೆ ಭಜನೆಗಳನ್ನು ಹಾಡಿ ಭಗವಂತನ ನಾಮಸ್ಮರಣೆ ಮಾಡಬೇಕೆಂದು ನೆರವಿಗೆ ಕ ಕೊಟ್ಟರು. ಮಾನವರನ್ನು ದುಗುಡ, ದುರಾಸೆಗಳಿಂದ ಬಿಡುಗಡೆ ಮಾಡಬಲ್ಲ ದಿವ್ಯ ಸಂದೇಶ ಸಾರು ಗುರುಗಳ ಗುರುವಾಗಿ ಸ್ವಾಮಿ ಅಲ್ಲಿ ನಿಂತರು. ಅವರು ಹಾಡಿದರು : "ಮಾನಸ ಭಜರೇ ಗುರುಚರಣಮ್, ದುಸ್ತರ ಭವಸಾಗರ ತರಣಮ್" (ಎಲೈ ಮನಸ್ಸೆ, ಗುರುಚರಣಗಳನ್ನು ಭಜಿಸು, ದುಸ್ತರವಾದ ಕ ಭವಸಾಗರವನ್ನು ಅದು ದಾಟಿಸುತ್ತದೆ. ಅವರು ಅಲ್ಲಿ ಉಲ್ಲೇಖಿಸಿದ ಗುರು ಯಾರು ? ಅವರನ್ನು ಆಮೇಲೆ ಬಲ್ಲವರು (ಆಗ ಇದ್ದವರು ಎಲ್ಲೋ ಕೆಲವರು) ಅವು ಸಾಯಿಚರಣಗಳೇ ಎಂದು ತಿಳಿದುಕೊಂಡವರು. ಆ ಪ್ರಾರಂಭಿಕ ದಿನಗಳಲ್ಲೇ ಸ್ವಾಮಿಯು ಭಗವಂತನನ್ನು ಕೂಡಬೇಕಾದರೆ ಮಾನವರೊಂದಿಗೆ ಬೆರೆಯಬೇಕು ಎಂದು ಒತ್ತಿ ಹೇಳುತ್ತಿದ್ದರು. ತಮ್ಮ ಸುತ್ತ ಎಲ್ಲೆಲ್ಲೂ ಅಸಹಾಯಕತೆ ನಿರಾಶೆ, ದುಃಖ, ರೋಗರುಜಿನಗಳಿಂದ ಜನರು ಬಳಲುತ್ತಿರುವುದನ್ನು ಸ್ವಾಮಿ ನೋಡಿದರು. ಅವರ ಅಂತರಂಗದಲ್ಲಿ ಕರುಣೆ ಉಕ್ಕಿ ಹರಿಯಿತು. ದೀಪ ಇನ್ನು ಚಿಮಿಣಿಯ ಒಳಗೆ ಸೀಮಿತವಾಗಿ ಉಳಿಯಲಿಲ್ಲ. ಬೇಗನೇ ಅದು ಉಜ್ವಲವಾಗಿ ಹರಡಲಿತ್ತು. ಪ್ರತಿ ಹೃದಯದಲ್ಲಿ ಮನೆಯಲ್ಲಿ ಶಾಲೆಯಲ್ಲಿ, ಹಳ್ಳಿಯಲ್ಲಿ, ನಗರದಲ್ಲಿ ಎಲ್ಲೆಲ್ಲೂ ಬೆಳಗಲಿತ್ತು. ಮಾನವಾಕಾರ ಧರಿಸಿ ಬಂದ ದೈವದ ಪಾದಗಳನ್ನು ಅಪ್ಪಿ ಮಲಿನತೆ ಕಳೆದುಕೊಳ್ಳಬೇಕೆಂದು ಇಡೀ ಜಗತ್ತಿಗೆ ಕರೆ ನೀಡಿದರು. ಅಂದು ಅಮೋಘ ವೈಭವದೊಂದಿಗೆ ಕಾಣಿಸಿಕೊಂಡ ಅವರ ದಿವ್ಯ ಪಾದಗಳು ಗುಲಾಬಿ ಪಕಳೆಗಳ ಮೇಲೆ

ಮಂಜು ಮುಸುಕಿದ ಪರ್ವತ ಸ್ತರದ ಮೇಲೆ, ಮಳೆಯಿಂದ ನೆನೆದ ಜವುಗಿನಲ್ಲಿ, ಹಿತವಾದ ವಾತಾವರಣದ ಹಾದಿಯಲ್ಲಿ, ಕಡಲ ತಡಿಯ ಮರಳಿನ ಮೇಲೆ ನಡೆಯುತ್ತಿವೆ, ಎಲ್ಲ ನಾಡುಗಳ ದುಃಖಿತರಿಗೆ ಸಾಂತ್ವನವನ್ನು ಒಯ್ಯುತ್ತಾ.

ಉರವಕೊಂಡದಲ್ಲಿದ್ದ ಬಹು ಸ್ವಲ್ಪಕಾಲದಲ್ಲಿ ಬಾಬಾ ಚಿಕ್ಕವರು ದೊಡ್ಡವರೆನ್ನದೆ ಎಲ್ಲರ ಹೃದಯಗಳಲ್ಲಿ ನೆಲೆಸಿದರು. ಅವರ ಕಣ್ಣುಗಳಿಗೆ ನಗೆಯ ಬೆಳಕನ್ನು ತುಂಬಿದರು. ಅವರ ಕಿವಿಗಳನ್ನು ಹಾಡುಗಳಿಂದ ಮುದಗೊಳಿಸಿದರು. ಅವರು ಶಾಲೆಯ ಕಣ್ಮಣಿಯಾಗಿದ್ದರು, ಜನತೆಯ ಹೆಮ್ಮೆಯಾಗಿದ್ದರು, ಪ್ರತಿಯೊಂದು ಕುಟುಂಬವೂ ಅವರ ಅದ್ಭುತ ಶಕ್ತಿಯ ಬಗೆಗೆ, ಅವರ ಪ್ರೇಮ ಅವರ ಜ್ಞಾನಗಳ ಬಗೆಗೆ ಏನಾದರೂ ಹೇಳುವುದಿದ್ದಿತು. ಹಾಗಾಗಿ ಬಾಬಾ ಮನೆಯನ್ನೂ ಶಾಲೆಯನ್ನೂ ತೊರೆದು ತಮ್ಮ ಕರ್ತವ್ಯ ಮತ್ತು ಜಗತ್ತಿನಲ್ಲಿ ತಮಗಾಗಿ ಕಾದಿರುವವರ ಬಗೆಗೆ ಮಾತನಾಡಿದಾಗ, ಅವರ ಸ್ಥೈರ್ಯ ಕುಸಿಯಿತು, ಮಾತಿನಲ್ಲಿ ಹೇಳಲಾಗದ ದುಗುಡದಿಂದ ಅವರ ನಾಲಗೆಯು ಕಟ್ಟಿ ಹೋಯಿತು.

## ಹುಲಿಯ ಚರ್ಮ

ಸ್ವಾಮಿ ಉರವಕೊಂಡದಿಂದ ಹಿಂದಿರುಗಿದ್ದು, ತಾವೇ ಶಿರಡಿಯ ಸಾಯಿಬಾಬಾ ಎಂದು ಪುಟ್ಟಪರ್ತಿಯಲ್ಲಿ ಘೋಷಿಸಿದ್ದು ಅವರಿಗೆ ಇನ್ನೂ ಹದಿನಾಲ್ಕು ವರ್ಷವಾಗಿದ್ದಾಗ, ಆದರೆ ಆ ವೇಳೆಗೆ ಸುತ್ತಮುತ್ತಲ ಹಳ್ಳಿಗಳಲ್ಲಿ (ದೂರ ಅನಂತಪುರ ನಲವತ್ತು ಮೈಲು)ದಲ್ಲಿ ಕೂಡ ಅವರು ಸಾಯಿಬಾಬಾ ಎಂದು ಪ್ರಚಲಿತವಾಗಿದ್ದಿತು.

ಒಂದು ದಿನ ಒಬ್ಬ ಜೀಪ್ ಚಾಲಕನು ನದಿಯನ್ನು ದಾಟಿ ಸ್ವಾಮಿಯನ್ನು ಕಂಡುಹಿಡಿಯಲು ಪುಟ್ಟಪರ್ತಿಯ ರಸ್ತೆಗಳಲ್ಲಿ ನಡೆದು ಬರುತ್ತಿದ್ದನು. ಅವನ ಒಡೆಯ ಒಬ್ಬ ಇಂಗ್ಲಿಷ್ ಸಬ್-ಡಿವಿಜನಲ್ ಅಧಿಕಾರಿ. ಚಿತ್ರಾವತಿ ನದಿಯ ಆಚೆಯ ದಡದಲ್ಲಿ ಶಿಕಾರಿಗೆಂದು ಹೋಗಿದ್ದನು. ಅನಂತಪುರಕ್ಕೆ ಹಿಂದಿರುಗುವಾಗ ಜೀಪು ಕೆಟ್ಟು, ನೇರವಾಗಿ ಪುಟ್ಟಪರ್ತಿ ಗ್ರಾಮದ ಎದುರಿಗೆ ನಿಂತುಬಿಟ್ಟಿತು. ಚಾಲಕನೂ, ಅಧಿಕಾರಿಯೂ ಅದನ್ನು ಸರಿಪಡಿಸಲು ತಮಗೆ ತಿಳಿದುದನ್ನೆಲ್ಲ ಮಾಡಿದರು. ಏನೂ ಫಲವಾಗಲಿಲ್ಲ. ಜೀಪು ಚಲಿಸಲಿಲ್ಲ. ಪುಟ್ಟಪರ್ತಿಯಲ್ಲಿ ಒಬ್ಬ ಹುಡುಗ ಇದ್ದಾನೆ, ಅವನು ವಿಭೂತಿಯನ್ನು ಸೃಷ್ಟಿಸುತ್ತಾನೆ. ಹೌದು, ಅಂಗೈಯನ್ನು ಹಾಗೆ ಆಡಿಸಿ ವಿಭೂತಿ ಸೃಷ್ಟಿಸುತ್ತಾನೆ. ಅದು ಎಲ್ಲ ರೋಗಗಳಿಗೂ ಮದ್ದು, ಜೀಪಿಗೂ ಸಹ ! ಅರ್ಧದಾರಿಯಲ್ಲಿ ನಿಂತು ಹೋಗಬೇಕಾಗಿ ಬಂದ ಇಂಗ್ಲಿಷ್ ಅಧಿಕಾರಿ ಒಪ್ಪಿಕೊಂಡು ಚಾಲಕನನ್ನು ಪುಟ್ಟಪರ್ತಿಗೆ ಕಳಿಸಿ ತಾನು ಜೀಪಿನಲ್ಲಿ ಕುಳಿತನು. ಕೊನೆಗೊಮ್ಮೆ ಚಾಲಕನಿಗೆ ಬಾಬಾ ಸಿಕ್ಕಿದರು. ಆದರೆ ಅವನನ್ನು ನೋಡಿದೊಡನೆ "ನಾನೇ ಜೀಪಿನ ಬಳಿಗೆ ಬರುತ್ತೇನೆ" ಎಂದು ಅವರು ಹೇಳಿದ್ದು ಕೇಳಿ ದಂಗಾದನು. ಇಬ್ಬರೂ ಮರಳುಹಾಸಿನ ಮೇಲೆ ನಡೆದು ಹೊಳೆ ಹಾದು ರಸ್ತೆಯನ್ನು ಸೇರಿದರು. ಜೀಪಿನೊಳಗೆ ಇಣುಕಿ ನೋಡಿದರು. ಅಧಿಕಾರಿಯು ಆಗಷ್ಟೆ ಎರಡು ಗಂಟೆಗಳ ಹಿಂದೆ ಗುಂಡು ಹಾರಿಸಿ ಕೊಂದಿದ್ದ ಹುಲಿಯ ದೇಹವನ್ನು ಜೀಪಿನಲ್ಲಿ ಅವರು ಕಂಡರು. ಜೀವಿಗಳನ್ನು

ಕುರಿತು ಅವರಿಗೆ ಅಪಾರ ಕರುಣೆ. ಪ್ರಾಣಿಗಳನ್ನು ಕೊಲ್ಲುವುದು ಹಿಂಸಿಸುವುದು ಅವರಿಗೆ ಎಷ್ಟು ಮಾತ್ರಕ್ಕೂ ಸೇರುತ್ತಿರಲಿಲ್ಲ. "ನಾನೇ ಈ ಸ್ಥಳದಲ್ಲಿ ಜೀಪನ್ನು ನಿಲ್ಲಿಸಿದೆ. ಏಕೆ ಗೊತ್ತೆ ? ಅದೊಂದು ತಾಯಿ. ಅದರ ಮೂರು ಸಣ್ಣ ಮರಿಗಳು ಇದೇ ಸಮಯದಲ್ಲಿ ಅತ್ತು ಕಿರಿಚುತ್ತಿವೆ. ತಾಯಿಗಾಗಿ ಗೋಳಾಡುತ್ತಿವೆ. ಹಿಂದಕ್ಕೆ ಹೋಗು, ಆ ಮರಿಗಳನ್ನು ಹಿಡಿದುಕೊಂಡು ಅವುಗಳನ್ನು ಚೆನ್ನಾಗಿ ನೋಡಿಕೊಳ್ಳುವ ಯಾವುದಾದರೂ ಒಂದು ಮೃಗಾಲಯಕ್ಕೆ ಕೊಡು. ಮತ್ತೆ ವನ್ಯಪ್ರಾಣಿಗಳನ್ನು ಕೊಲ್ಲಬೇಡ, ಅವು ನಿನಗೆ ಯಾವ ಕೆಡುಕನ್ನೂ ಮಾಡಿಲ್ಲವಲ್ಲ, ನೀನೇಕೆ ಅವುಗಳನ್ನು ಬಳಸಿಕೊಂಡು ಬಲೆ ಹಾಕಿ ಹಿಡಿದು, ಕೊಂದು ಹಿಂಸಿಸುತ್ತೀಯೆ ? ಅದಕ್ಕೆ ಬದಲು ನಿನ್ನಲ್ಲಿರುವ ಇನ್ನೂ ಉತ್ತಮ ಉಪಕರಣ ಕ್ಯಾಮರಾದಿಂದ ಅವುಗಳನ್ನು ಷೂಟ್‌ಮಾಡು, ಚಿತ್ರ ತೆಗೆ. ಅದರಿಂದ ಅವಕ್ಕೆ ಹಿಂಸೆಯಾಗುವುದಿಲ್ಲ" ಇಂಗ್ಲಿಷ್ ಮನುಷ್ಯನಿಗೆ ಕಣ್ಣು ತೆರೆಯಿತು. ಅಂದಿನಿಂದ ಮುಂದಕ್ಕೆ ಅವನು ಬಂದೂಕು ಹಿಡಿಯಲಿಲ್ಲ. ವನ್ಯಪ್ರಾಣಿಗಳನ್ನು ಕ್ಯಾಮರಾದಿಂದ ಷೂಟ್ ಮಾಡುವುದು ಹೆಚ್ಚು ಸವಾಲಿನ ಹಾಗೂ ಸಾತ್ವಿಕವಾದ ಕೆಲಸ ಎಂದು ಅವನು ಕಂಡುಕೊಂಡನು. ತಬ್ಬಲಿ ಮರಿಗಳನ್ನು ಅವನು ಹಿಡಿದು ಮೃಗಾಲಯಕ್ಕೆ ಒಪ್ಪಿಸಿದನು. ತಾನು ಕೊಂದ ಹುಲಿಯ ಚರ್ಮವು ಪರಿಷ್ಕೃತವಾಗಿ ಬಂದಾಗ ಅದನ್ನು ಪುಟ್ಟಪರ್ತಿಗೆ ತೆಗೆದುಕೊಂಡು ಬಂದನು. ಆ ಸಮಯದಲ್ಲಿ ಪ್ರಶಾಂತಿ ಮಂದಿರದ ನಿರ್ಮಾಣ ನಡೆದಿತ್ತು. ಬಾಬಾ ಅವರನ್ನು ಸಂಧಿಸಿ ಹುಲಿಚರ್ಮವನ್ನು ಅವರ ಪಾದಗಳ ಬಳಿ ಇರಿಸಿದನು. ಕೊಡಗಿನ ಸಾಕಮ್ಮ ಅದರ ಮೇಲೆ ಬಾಬಾ ಯೋಗಮುದ್ರೆಯಲ್ಲಿ ಜಪಸರವನ್ನು ಹಿಡಿದು ಕುಳಿತುಕೊಳ್ಳಬೇಕೆಂದು ಬೇಡಿದರು. ಅಲ್ಲೊಬ್ಬ ಛಾಯಾಚಿತ್ರಕಾರನೂ ಸಿದ್ಧವಾಗಿಯೇ ಇದ್ದನು. ಬಾಬಾ ಒಪ್ಪಿದರು. ಎಂದೂ ಅವರು ಧ್ಯಾನ ಮಾಡುತ್ತಾ ಕುಳಿತಿರಲಿಲ್ಲ. ಜಪಸರ ಹಿಡಿದಿರಲಿಲ್ಲ. ಆದರೂ ಅವರ ಬೇಡಿಕೆಯನ್ನು ಬಾಬಾ ಈಡೇರಿಸಿದರು.

## ಅವರನ್ನು ಕುರಿತು ಪುಸ್ತಕ

ಶ್ರೀಮತಿ ನಾಗಮಣಿ ಪೂರ್ಣಯ್ಯ ತೆಲುಗಿನಲ್ಲಿ ಒಂದು ಪುಸ್ತಕ ಬರೆದಿದ್ದಾರೆ. ಆಮೇಲೆ ಅದು ಇಂಗ್ಲಿಷಿಗೂ ಅನುವಾದಗೊಂಡು ಪ್ರಕಟವಾಗಿದೆ. ಅದರ ಹೆಸರು 'ಭಗವಾನ್ ಸತ್ಯ ಸಾಯಿಬಾಬಾ ಅವರ ದಿವ್ಯಲೀಲೆಗಳು' (Divine Leelas of Bhagawan Sathya Sai Baba). ಪುಸ್ತಕದ ಮುನ್ನುಡಿಯಲ್ಲಿ ಆಕೆ "ಅವರ ದಿವ್ಯಲೀಲಾ ಶಕ್ತಿಯನ್ನು ನೋಡುವ ಪ್ರತಿಯೊಂದು ಅವಕಾಶವನ್ನು ನಾನು ಉಪಯೋಗಿಸಿಕೊಂಡಿದ್ದೇನೆ" ಎಂದು ಹೇಳಿದ್ದಾರೆ. ಪುಸ್ತಕವು 140 ಪವಾಡಗಳನ್ನು ವರ್ಣಿಸುತ್ತದೆ. ಅವುಗಳಲ್ಲಿ "115 ಪವಾಡಗಳನ್ನು ಆನಂದ ತುಂದಿಲಳಾಗಿ ನಾನೇ ಸ್ವತಃ ನೋಡಿದ್ದೇನೆ" ಎಂದಿದ್ದಾರೆ. ನಾಗಮಣಿ ಅಮ್ಮ ದಕ್ಷಿಣ ಭಾರತೀಯ ರೈಲ್ವೆಯಲ್ಲಿ ಚೀಫ್ ಕಮರ್ಷಿಯಲ್ ಸೂಪರಿಂಟೆಂಡೆಂಟ್ ಆಗಿದ್ದ ಪೂರ್ಣಯ್ಯನವರ ಪತ್ನಿ. ಆಕೆ ಪುಸ್ತಕದಲ್ಲಿ ದಾಖಲು ಮಾಡಿರುವ ಪವಾಡಗಳೆಲ್ಲ ನಡೆದುದು 'ಹಳೆಯ' ಮಂದಿರ ಎಂದು ಈಗ ಕರೆಯುವ ಕಟ್ಟಡದಲ್ಲಿ. ಸ್ವಾಮಿಯ ಪ್ರಸಿದ್ಧ ಘೋಷಣೆ ನಡೆದ ತರುಣದಲ್ಲಿ. ಈಗ ಪ್ರಶಾಂತಿ ಮಂದಿರ ಎಂದು ಕರೆಯುವ ಹೊಸ ಮಂದಿರವನ್ನು 1950ರಲ್ಲಿ ಉದ್ಘಾಟಿಸಿದಾಗ ಹಳ್ಳಿಯಲ್ಲಿದ್ದ ಮಂದಿರವು 'ಹಳೆಯ'ದಾಯಿತು

ಪವಾಡಗಳಲ್ಲಿ ಹಲವು ಸ್ವಾಮಿಯು ವಿಭೂತಿಯನ್ನು ಸೃಷ್ಟಿಸಿ ರೋಗಗಳನ್ನು ಗುಣಪಡಿಸಿದ್ದು, ಅವರ ಆದೇಶದಂತೆ ಪ್ರವಾಹವು ಹಿಂದಕ್ಕೆ ಸರಿದು ಹೋದದ್ದು ಮುಂತಾದುವು ಇವೆ. ಬಾಬಾ ಆಕೆಗೆ ಒಮ್ಮೆ ಹೇಳಿದರು "ನೀನು ನನ್ನಲ್ಲಿ ಇಟ್ಟಿರುವ ಶ್ರದ್ಧೆ ನಂಬಿಕೆಗಳಿಂದ ಮಾತ್ರವೇ ನೀನು ಕುಳಿತಿದ್ದ ಬಸ್ಸು ಏರುವ ಪ್ರವಾಹದಲ್ಲಿ ಕೊಚ್ಚಿಹೋಗದೆ ಸುರಕ್ಷಿತವಾಗಿ ನದಿಯನ್ನು ಹಾದು ಬರಲು ಸಾಧ್ಯವಾಯಿತು". ಭಕ್ತರು ಧರಿಸಲು ತುಳಸಿ ಹಾರಗಳು, ಉಂಗುರಗಳು ಮತ್ತು ಪದಕಗಳನ್ನು ಸ್ವಾಮಿ ಸೃಷ್ಟಿಸಿಕೊಡುತ್ತಿದ್ದರು. ಶಸ್ತ್ರಚಿಕಿತ್ಸೆಗಳನ್ನೂ ಸ್ವಾಮಿ ಮಾಡಿದರು. "ಒಂದು ದಿನ ಸ್ವಾಮಿಯು ಬಾಳೆಹಣ್ಣಿನ ಸಿಪ್ಪೆಯಂಥದೇನನ್ನೋ ಗೋಡೆಯಿಂದಾಚೆಗೆ ಎಸೆಯುವುದನ್ನು ನೋಡಿದೆ," ನಾಗಮಣಿ ಅಮ್ಮ ವಿವರಿಸುತ್ತಾರೆ. "ಆಮೇಲೆ ಅವರು ನನ್ನ ಬಳಿಗೆ ಬಂದು ಕೈತೊಳೆಯಲು ನೀರು ಕೇಳಿದರು. ಅವರ ಕೈ ರಕ್ತದಿಂದ ಕೆಂಪಾಗಿತ್ತು. "ಆ ಮನುಷ್ಯನನ್ನು ಗುಣಪಡಿಸಬೇಕೆಂದು ನೀನು ಕೋರಿದ್ದೆಯಲ್ಲ, ಅವನಿಗೆ ಈಗ ತಾನೆ ಶಸ್ತ್ರಚಿಕಿತ್ಸೆ ಮಾಡಿದೆ" ಎಂದರು. ಆ ವ್ಯಕ್ತಿಯ ಬಗೆಗೆ ಕಾಳಜಿಯಿಂದ ಇಡೀ ರಾತ್ರಿ ನನಗೆ ನಿದ್ದೆ ಮಾಡಲಾಗಲಿಲ್ಲ. ಯಾವುದೇ ಮತ್ತು ಬರಿಸುವ ಔಷಧವಿಲ್ಲದೆ ಪ್ರಜ್ಞಾಸ್ಥಿತಿಯಲ್ಲೇ ಅವನಿಗೆ ಸ್ವಾಮಿ ಶಸ್ತ್ರ ಚಿಕಿತ್ಸೆ ಮಾಡಿದ್ದರು. ಪಕ್ಕದ ಕೊಠಡಿಯಲ್ಲಿ ಅವನು ಎಷ್ಟು ನೋವಿನಿಂದ ನರಳುತ್ತಿರಬಹುದೆಂದು ಯೋಚಿಸಿ ತುಂಬ ಕಸಿವಿಸಿಗೊಂಡೆ. ಇಡೀ ರಾತ್ರಿ ಎಚ್ಚರಾಗಿದ್ದೆ. ಬೆಳಗಾಗುತ್ತಲೇ ಸ್ವಾಮಿ ನನ್ನನ್ನು ಕರೆದು ರೋಗಿಗೆ ಒಂದಷ್ಟು ಹತ್ತಿ ತಂದು ಕೊಡಲು ಹೇಳಿದರು. "ಹೋಗು, ಈಗಲೇ ಹತ್ತಿಯನ್ನು ಕೊಡು" ಎಂದು ಆಜ್ಞೆ ಮಾಡಿದರು. ನಾನು ಬಾಗಿಲಲ್ಲಿ ಕ್ಷಣ ತಡೆದು ಒಳಗೆ ಹೋಗಿ ನೋಡಿದರೆ ರೋಗಿಯು ತಟ್ಟೆ ತುಂಬಾ ಇಡ್ಲಿಗಳನ್ನು ತುಂಬಿಕೊಂಡು ಚಟ್ನಿ ಹಾಕಿಕೊಂಡು ಸುಖವಾಗಿ ಮೆಲ್ಲುತ್ತಿದ್ದಾನೆ ! ಸ್ವಾಮಿ ನನ್ನ ಹಿಂದೆ ನಿಂತಿದ್ದರು. "ಇದು ಒಬ್ಬ ವೈದ್ಯ ಮಾಡಿದ ಶಸ್ತ್ರ ಚಿಕಿತ್ಸೆಯಲ್ಲ. ನಾನು ಮಾಡಿದ್ದೇನೆ. ಆದ್ದರಿಂದ ಅವನಿಗೆ ಯಾತನೆಯೇ ಆಗಿಲ್ಲ. ಅವನಿಗೆ ವಿಶ್ರಾಂತಿ ಬೇಕಿಲ್ಲ, ವಿಶೇಷ ಪಥ್ಯ ಅಗತ್ಯವಿಲ್ಲ. ಅವನಿಗೆ ಏನು ಬೇಕೋ ಅದನ್ನು ತಿನ್ನಬಹುದು." ಹೊಟ್ಟೆಯ ಮೇಲೆ ಉದ್ದವಾದ ಒಂದು ಗುರುತು ಕಾಣಿಸಿತು, ಆದರೆ ಹೊಲಿಗೆಯೇ ಇರಲಿಲ್ಲ. ಸ್ವಾಮಿ ಹೇಳಿದರು :"ನಾನು ಸೃಷ್ಟಿಸಿ ಇವನ ಹುಬ್ಬಿಗೆ ಹಚ್ಚಿದ ವಿಭೂತಿ ಅರಿವಳಿಕೆಯಾಗಿ ಕೆಲಸ ಮಾಡಿತು. ಶಸ್ತ್ರಚಿಕಿತ್ಸೆಗಾಗಿ ಒಂದು ತ್ರಿಶೂಲವನ್ನು ಚಾಕುವನ್ನೂ ಸೃಷ್ಟಿಸಿದೆ. ಎಲ್ಲ ಮುಗಿದ ಮೇಲೆ ವಿಭೂತಿಯನ್ನು ಹಚ್ಚಿದೆ, ಅಷ್ಟೆ". ಇನ್ನೊಂದು ದಿನ ಸ್ವಾಮಿಯನ್ನು ಪರೀಕ್ಷಿಸಬೇಕೆಂದು ನಾಲ್ಕು ಜನರು ಪ್ರಶಾಂತಿ ನಿಲಯಕ್ಕೆ ಬಂದರು" ನಾಗಮಣಿ ಪೂರ್ಣಯ್ಯ ಮುಂದುವರಿಸಿದ್ದಾರೆ. "ಅವರು ಮೂರು ಮೈಲು ಆಚೆ ಬುಕ್ಕಪಟ್ಟಣವನ್ನು ತಲುಪಿದಾಗ ತಾವು ಕೈಗೆ ಕಟ್ಟಿಕೊಂಡಿದ್ದ ಕೈಗಡಿಯಾರಗಳನ್ನು ಅದಲು ಬದಲು ಮಾಡಿಕೊಂಡರು. ತಾವು ಮಾಡಿದ್ದು ಸ್ವಾಮಿಗೆ ತಿಳಿಯುತ್ತದೆಯೋ ನೋಡೋಣ ಎಂದು ಅವರ ವಿಚಾರ. "ಅವರು ದೇವರಾಗಿದ್ದರೆ ಇದು ತಿಳಿಯಲೇಬೇಕಲ್ಲ" ಎಂದು ಯೋಚಿಸಿದರು. ಸ್ವಾಮಿ ಅವರನ್ನು ಕರೆದು ಹೇಳಿದರು : "ನೀವು ಏಕೆ ಬಂದಿದ್ದೀರಿ ಎಂದು ನನಗೆ ತಿಳಿದಿದೆ. ದಾರಿಯಲ್ಲಿ ನೀವು ಏನು ಮಾತನಾಡಿಕೊಂಡು ಬಂದಿರಿ ಎಂದೂ ಗೊತ್ತು. ನೀನು ಒಬ್ಬರು

ಇನ್ನೊಬ್ಬರ ವಾಚು ಕಟ್ಟಿಕೊಂಡಿದ್ದೀರಿ. ನನ್ನನ್ನು ಪರೀಕ್ಷೆ ಮಾಡಲು ನೀವು ಬಂದಿದ್ದೀರಿ. ಆದು ಇದು ಭಕ್ತರಿಗಾಗಿ ಇರುವ ಸ್ಥಳ. ಎಲ್ಲಿಂದ ಬಂದಿರೋ ಅಲ್ಲಿಗೆ ನೀವು ಹಿಂದಿರುಗಿ ಹೋಗಬಹುದು.'

## ಅವರು ಹಾಡಿಸಿದ ಹಾಡು

ಬಾಬಾ ಭಜನೆ ಹಾಡುವುದನ್ನು ಪ್ರೋತ್ಸಾಹಿಸಿದರು. ಹಳ್ಳಿಯಲ್ಲಿ ಅವನತಿ ಹೊಂದುತ್ತಿದ್ದ ಭಜನ ಮಂಡಳಿಗಳನ್ನು ಪುನಶ್ಚೇತನಗೊಳಿಸಿದರು. ಅಷ್ಟೇ ಅಲ್ಲ, ಅವರೇ ಭಜನೆಗಳನ್ನೂ ನಾಮಾವಳಿಗಳನ್ನೂ ರಚಿಸಿದರು. ಹೊಸ ಹೊಸ ಹಾಡುಗಳನ್ನು ಕಟ್ಟಿಕೊಟ್ಟರು. ಮೊದಲಿನ ವರ್ಷಗಳಲ್ಲಿ ಅವರೇ ಕೆಲವನ್ನು ಬರೆದರು. ಅಂಥದೊಂದು ಹಾಡಿನಲ್ಲಿ ಸಾಯಿಧರ್ಮ ಎಂಬ ಸಾಧದ ನಾಲ್ಕು ಆಧಾರ ಸ್ತಂಭಗಳನ್ನು ಮೊದಲ ಬಾರಿಗೆ ಗುರುತಿಸಿದ್ದಾರೆ. ಅದನ್ನು ರಚಿಸಿದಾಗ ಅವರಿಗೆ ಹದಿನೇಳು ವರ್ಷ ವಯಸ್ಸು. ಸತ್ಯ, ಧರ್ಮ, ಶಾಂತಿ ಮತ್ತು ಪ್ರೇಮಗಳ ಹಿಡಿದು ಯಾತ್ರಿಯ ಬದುಕಿನ ಪಥ ಸಾಗಲಿ ಹೆಜ್ಜೆ ಹೆಜ್ಜೆಯಾಗಿ. ನಿನ್ನ ಕರ್ತವ್ಯವೇನಿದ್ದರೂ ಪ್ರಯತ್ನ, ಪರಿಶ್ರಮವಷ್ಟೇ ; ಆಟದಲ್ಲಿ ಗೆಲ್ಲುವುದೋ ಸೋಲುವುದೋ ಅದು ಭಗವಂತನಿಚ್ಛೆಯಷ್ಟೇ. ಮನದ ತುಂಬ ದೇವನಿರಲಿ ; ಅವನೊಳಗೆ ಪೂರ್ಣ ಶ್ರದ್ಧೆಯಿರಲಿ ; ಅದು ಕಷ್ಟ ಸಂಕಟಗಳಿಂದ ನಿನ್ನ ಬಿಡುಗಡೆಗೊಳಿಸುವುದು.

ಜನಕ ಮಹಾರಾಜನಾಗಿದ್ದ, ಆದರೆ ದಿವ್ಯಾತ್ಮನಾಗಿದ್ದ. ರಾಜ್ಯವನ್ನೂ ಆಳಿದ, ಮೋಕ್ಷವನ್ನೂ ಗೆದ್ದ.

ಅತಿಮಾನುಷ ಶಕ್ತಿಗಳಿಗಾಗಿ ಹಂಬಲಿಸುವೆಯೇಕೆ,
ಓ ಮನುಜ, ನಂಬು.
ಅವು ನಿನ್ನಹಂಕಾರವನ್ನು ಕೊಬ್ಬಿಸಿ, ವಿವೇಕದ ಕಣ್ಣ ಮರೆಸುವುವು.
ಈ ಜಾಡರಿಯದ ಕಾಡಿನಲಿ ನಡೆವಾಗ
ಭಗವಂತನ ನಾಮವೊಂದೇ ನಿನಗೆ ದಾರಿ ದೀಪ.
ನಿನ್ನ ಹೃದಯವೊಂದು ಅಮೂಲ್ಯ ಕ್ಷೇತ್ರ
ಮನದಿಂದದನು ಹರಗು, ಸದ್ಗುಣಗಳಿಗೆ
ನೇಗಿಲಕಟ್ಟು, ಅವನು ಹುರಿದುಂಬಿಸಲು
ಬುದ್ಧಿಯ ಚಾಟಿಯನು ಬಳಸು
ಪ್ರೇಮ ಮತ್ತು ಬೆಳಕಿನ ಬೆಳಸು ಸಂಗ್ರಹಿಸು.

# ಪ್ರೇಮ ನಡೆದಾಡಿದೆ

## ಕಾಲೇಜುಗಳು ಯಾಕಾಗಿ ?

ಈ ಕಥನವನ್ನು ಸತ್ಯಂ ಶಿವಂ ಸುಂದರಂ ಮೂರನೆಯ ಭಾಗದವರೆಗೆ ಹೇಳಿದಾಗ ಅವತಾರ ಪುರುಷನು ಈ ಜಗತ್ತನ್ನು ನಲವತ್ತೈದು ವರ್ಷಗಳ ಕಾಲ ಬೆಳಗಿದ್ದನು. ಅವರ ಜೀವನ ಚರಿತ್ರೆಗೆ ಯಾವ ಹೆಸರನ್ನಿಡಬೇಕೆಂದು ಚಿಂತಿಸುತ್ತಿದ್ದಾಗ ನನ್ನ ಪ್ರಜ್ಞೆಗೆ ಹೊಳೆದದ್ದು 'ಸತ್ಯಂ ಶಿವಂ ಸುಂದರಂ' ಎಂಬುದು. ಈಗ ಸ್ವಾಮಿ ವಿವೇಕಾನಂದರು ನುಡಿದ ಒಂದು ಭವಿಷ್ಯವಾಣಿ ನೆನಪಾಗುತ್ತದೆ. ಭಕ್ತಿಯೋಗವನ್ನು ಕುರಿತು ಪ್ರವಚನ ಮಾಡುತ್ತಾ ಅವರು ಹೇಳಿದರು : "ಅತ್ಯುನ್ನತ ಜ್ಞಾನವೂ ಅತ್ಯುನ್ನತ ಅರಿವೂ ಆದ ಧರ್ಮವನ್ನು ಯಾರೂ ಬೆಲೆಗೆ ಕೊಳ್ಳಲೂ ಸಾಧ್ಯವಿಲ್ಲ, ಅದನ್ನು ಪುಸ್ತಕಗಳಿಂದ ಸಂಪಾದಿಸುವುದೂ ಸಾಧ್ಯವಿಲ್ಲ. ಎಲ್ಲ ದಿಕ್ಕುಗಳಿಗೂ ತಿರುಗಿ ನೋಡಬಹುದು, ಹಿಮಾಲಯದಲ್ಲಿ ಶೋಧನೆ ಮಾಡಬಹುದು, ಆಲ್ಪ್ಸ್ ಮತ್ತು ಕಾಕಸಸ್ ಪರ್ವತ ಶ್ರೇಣಿಗಳನ್ನು ಅಳೆಯಬಹುದು, ಸಾಗರದ ತಳವನ್ನು ಅರಸಬಹುದು, ಜಗತ್ತಿನ ಮೂಲೆ ಮೊಡಕಗಳನ್ನೆಲ್ಲಾ ಹುಡುಕಬಹುದು ಅದು ಟಿಬೆಟ್ ಆಗಲಿ, ಗೋಬಿ ಮರುಭೂಮಿಯಾಗಲಿ- ಎಲ್ಲೆಲ್ಲಿ ಹುಡುಕಿದರೂ ನಿಮ್ಮ ಹೃದಯ ಅದನ್ನು ಪಡೆಯಲು ಸಿದ್ಧವಾಗುವವರೆಗೆ, ನಿಮ್ಮ ಗುರು ದೊರಕುವವರೆಗೆ ಅದು ನಿಮಗೆ ಸಿಕ್ಕುವುದಿಲ್ಲ. ಹಾಗೆ ದೈವ ನಿಯಮಿತ ಗುರುವು ಬಂದಾಗ ಶಿಶುಸಹಜ ನಂಬುಗೆಯಿಂದ, ಸರಳತೆಯಿಂದ ಅವನನ್ನು ಸೇವೆ ಮಾಡಿ. ಆತನ ಪ್ರಭಾವಕ್ಕೆ ನಿಮ್ಮ ಎದೆಯನ್ನು ಮುಕ್ತವಾಗಿ ತೆರೆದಿಡಿ, ಅದರಲ್ಲಿ ಭಗವಂತನ ಆವಿರ್ಭಾವವನ್ನು ಗುರುತಿಸಿ. ಹೀಗೆ ಪ್ರೇಮ, ಭಕ್ತಿಗಳಿಂದ ಸತ್ಯವನ್ನು ಅನ್ವೇಷಿಸಲು ಬಂದವನಿಗೆ ಸತ್ಯನಾಥನು ಸತ್ಯ, ಶಿವ ಮತ್ತು ಸುಂದರಗಳ ಬಗೆಗೆ ಅತ್ಯದ್ಭುತ ಅಂಶಗಳನ್ನು ತೋರಿಸಿಕೊಡುತ್ತಾನೆ". ಸತ್ಯಸಾಯಿ ಅವತಾರವನ್ನು ಅರಿಯದೆಯೇ ಈ ಭಾಗವನ್ನು ಭಾರತೀಯ ಭಾಷೆಗಳಿಗೆ ಭಾಷಾಂತರ ಮಾಡಿದ ವಿದ್ವಾಂಸರು ಇದನ್ನು ಸತ್ಯವನ್ನು ಸತ್ಯಂ ಎಂದೂ, ಒಳಿತನ್ನು ಶಿವಂ ಎಂದೂ, ಸೌಂದರ್ಯವನ್ನು ಸುಂದರಂ ಎಂದೂ ಅನುವಾದಿಸಿದ್ದಾರೆ. ಭಗವಂತನನ್ನು ಸತ್ಯನಾಥ ಎಂದು ಅನುವಾದ ಮಾಡಿರುವುದು ಅತ್ಯುತ್ತಮವಾಗಿದೆ. ಮಾನವ ಜೀವಿಗಳ ಬಗೆಗೆ ಬಾಬಾ ಅತ್ಯಂತ ಅದ್ಭುತವಾದ ಒಂದು ಅಂಶವನ್ನು ಪ್ರಕಟಪಡಿಸಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯ ಅಂತರಂಗವೂ ಸತ್ಯಂ, ಶಿವಂ, ಸುಂದರಂ ಆಗಿದೆ. ಇದರ ಅರಿವೇ ಮೋಕ್ಷದಾಯಕವಾಗಬಲ್ಲುದು. ನನಗೆ ಈ ಸತ್ಯದ ಅರಿವಿರಲಿಲ್ಲ. ವಿವೇಕಾನಂದರೇ ನನ್ನ ಸದ್ಗುರುವಿನ ಬಳಿಗೆ, ಸತ್ಯನಾಥನ ಬಳಿಗೆ ನಡೆಸಿರಬೇಕು.

ಅನಂತಪುರ ಜಿಲ್ಲೆಯ ಮುಖ್ಯಸ್ಥಳ. ಪ್ರಶಾಂತಿ ನಿಲಯವು ಅದರ ಒಂದು ಭಾಗವೇ. ಬಾಬಾ ಅನಂತಪುರಕ್ಕೆ ಒಂದು ಮಹಿಳೆಯರ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜನ್ನು ಅನುಗ್ರಹಿಸಿದರು. ಅದು ಈ ನಾಡಿನಲ್ಲಿರುವ ನೂರಾರು ಕಾಲೇಜುಗಳಂತೆ ಇನ್ನೊಂದಾಗಿರಬೇಕೆಂಬುದಕ್ಕಾಗಿಯಲ್ಲ. ಕಾಲೇಜಿನ ಆವರಣಕ್ಕೆ ಬರುವ ಹೆಣ್ಣುಮಕ್ಕಳು ಭಾರತೀಯ ಸಂಸ್ಕೃತಿ ಪರಂಪರೆಯನ್ನು ಗೌರವಿಸುವ ಮಕ್ಕಳಾಗಿ, ಈ ನಾಡಿನ ಹಳ್ಳಿಗಳಲ್ಲಿರುವ ತಮ್ಮ ಬಂಧುಗಳಿಗೆ ಹೆಚ್ಚು ಹೆಚ್ಚು ಸೇವೆಗೈಯುವ ಆಸಕ್ತಿ ಬೆಳೆಸಿಕೊಳ್ಳುವ

ಸೋದರಿಯರಾಗಿ, ಸರಳತೆ ಮತ್ತು ಪ್ರಾಮಾಣಿಕತೆ ತುಂಬಿದ ಪತ್ನಿಯರಾಗಿ, ತಮ್ಮ ಮಕ್ಕಳ ಹೃದಯದಲ್ಲಿ ಸೇವೆ ಮತ್ತು ಆಧ್ಯಾತ್ಮಿಕ ಶಿಸ್ತಿನ ಆದರ್ಶಗಳನ್ನು ಉದ್ದೀಪಿಸುವ ಕೌಶಲವುಳ್ಳ ತಾಯಂದಿರಾಗಿ ರೂಪಿಸುವ ಧ್ಯೇಯದಿಂದ ಆ ಕಾಲೇಜು ಸ್ಥಾಪಿತವಾಯಿತು. ಬಹು ಸ್ವಲ್ಪದರಲ್ಲೇ ಅನಂತಪುರದ ಜನತೆಗೆ ಭಗವಾನರು ಇನ್ನೊಂದು ಉಡುಗೊರೆಯನ್ನೂ ನೀಡಿದರು. ಅದು ಉನ್ನತ ಬದುಕಿಗೆ ಸಾಧಕವಾಗಬಲ್ಲ ಒಂದು ಕಲ್ಯಾಣ ಮಂಟಪ. "ಯಾವಾಗ ಪ್ರೇಮವು ಮನಸ್ಸನ್ನು ಚಾಲಿಸಬಲ್ಲ ಸನ್ನೆಗೋಲಾಗುತ್ತದೆಯೋ ಆಗ ಒಳಿತು ಮಾತ್ರವೇ ಫಲಿಸುತ್ತದೆ. ನಾನು ಬಂದಿರುವುದೇ ಮಾನವ ಜನಾಂಗದಲ್ಲಿ ಪ್ರೇಮವನ್ನು ಸಂಸ್ಥಾಪಿಸುವ ಸಲುವಾಗಿ ; ಸಣ್ಣತನ ಮತ್ತು ಸ್ವಾರ್ಥಗಳನ್ನು ತೊಳೆದು ಅದನ್ನು ಶುಚಿಪಡಿಸುವ ಸಲುವಾಗಿ" ಎಂದು ಕಟ್ಟಡವನ್ನು ಉದ್ಘಾಟಿಸುತ್ತಾ ಬಾಬಾ ಘೋಷಿಸಿದರು. ಮಂಟಪವನ್ನು ಒಂದು ಸಮುದಾಯ ಭವನವಾಗಿ ಉಪಯೋಗಿಸಲಾಗುತ್ತಿದೆ. ಕೆಲವು ವರ್ಷಗಳ ಅನಂತರ ಬಾಬಾ ಮತ್ತೆ ಅಲ್ಲಿಗೆ ಬಂದರು. ಭಕ್ತರು ಸೇರಿ ಅಲ್ಲಿಯ ನಾಲ್ವರು ಹರಿಜನರ ವಿವಾಹ ಮಹೋತ್ಸವ ನಡೆಸಿದರು. ಬಾಬಾ ಆ ಸಂದರ್ಭಕ್ಕೆ ಬಂದು ನೂತನ ದಂಪತಿಗಳನ್ನು ಆಶೀರ್ವದಿಸಿ ಸಂತೋಷಪಡಿಸಿದರು. ಪ್ರತಿಯೊಬ್ಬ ವಧುವಿಗಾಗಿ ಒಂದೊಂದು ತಾಳಿಬೊಟ್ಟನ್ನೂ ಪ್ರತಿಯೊಬ್ಬ ವರನಿಗೂ ಒಂದೊಂದು ಚಿನ್ನದುಂಗುರವನ್ನು ಸೃಷ್ಟಿಸಿಕೊಟ್ಟರು. ತಾಳಿಯನ್ನು ವರನು ವಧುವಿನ ಕೊರಳಿಗೆ ಕೊಟ್ಟಿದರೆ, ವಧುವು ಉಂಗುರವನ್ನು ವರನಿಗೆ ತೊಡಿಸಿದಳು. ಎಲ್ಲ ಹರಿಜನ ಕುಟುಂಬಗಳಿಗೂ ಸುಗ್ರಾಸ ಭೋಜನ. ಭಕ್ತರು ಆ ಔತಣದಲ್ಲಿ ಭಾಗವಹಿಸಿದ್ದು ಮಾತ್ರವಲ್ಲ ಸ್ವತಃ ಭಗವಾನರೇ ಸೇರಿಕೊಂಡರು.

## ಎಪ್ಪತ್ತು ಮನೆಗಳು

1971ರ ಆಗಸ್ಟ್ ತಿಂಗಳಲ್ಲಿ ಪ್ರಶಾಂತಿ ನಿಲಯದಲ್ಲಿ ಸಾವಿರಾರು ಜನರು ಸೇರಿದ್ದರು. ಶ್ರೀ ಕೃಷ್ಣ ಜನ್ಮೋತ್ಸವದ ಶುಭಸಂದರ್ಭದಲ್ಲಿ ಪೂಜೆ ಸಲ್ಲಿಸಲು ನೆರೆದಿದ್ದ ಆ ನೆರವಿಯನ್ನುದ್ದೇಶಿಸಿ ಬಾಬಾ ಘೋಷಿಸಿದರು : "ಇಂದು ಮಾನವ ಜನಾಂಗವು ವಿನಾಶದ ಅಂಚಿನಲ್ಲಿ ನಿಂತಿದೆ ಎಂದು ಜನರು ಹೇಳುತ್ತಾರೆ. ವಂಚನೆ, ವಿದ್ವೇಷ ಮೊದಲಾದ ದುಷ್ಟ ಶಕ್ತಿಗಳು ಅತ್ಯಂತ ವೇಗವಾಗಿ ಭೂಖಂಡಗಳನ್ನು ಆವರಿಸಿಕೊಳ್ಳುತ್ತಿವೆ ; ಪ್ರತಿಯೊಂದು ರಾಷ್ಟ್ರದ ಬೀದಿಗಳಲ್ಲಿ ಕಾತರ ಕಳವಳ ಭೀತಿಗಳು ತಾಂಡವವಾಡುತ್ತಿವೆ ಎಂದು ಅವರು ಹೇಳುತ್ತಾರೆ. ಇದನ್ನು ನನಗೆ ಹೇಳಬೇಕಾದ ಅಗತ್ಯವಿಲ್ಲ; ಏಕೆಂದರೆ ನಾನು ಇಲ್ಲಿಗೆ ಬಂದಿರುವುದೇ ಆ ಕಾರಣಕ್ಕಾಗಿ. ಜಗತ್ತು ವಿನಾಶದ ಅಂಚಿಗೆ ಬಂದು ನಿಂತಿರುವಾಗ ಮಾನವನ ಹೃದಯದಲ್ಲಿ ಭೋರ್ಗರೆಯುತ್ತಿರುವ ಬಿರುಗಾಳಿಯನ್ನು ಶಾಂತಗೊಳಿಸಲೆಂದೇ ಭಗವಂತನ ಅವತಾರವಾಗುವುದು."

ಸೆಪ್ಟೆಂಬರಿನಲ್ಲಿ ನಡೆದ ದಸರಾ ಮಹೋತ್ಸವವಾದರೂ ನೆರೆದ ಅಪಾರ ಜನ ಸಮೂಹಕ್ಕೆ ಯಾವ ಉದ್ದೇಶಕ್ಕಾಗಿ ಅಲ್ಲಿ ನೆರೆದಿತ್ತೋ ಆ ಪ್ರಯೋಜನವನ್ನು ಪಡೆದುಕೊಳ್ಳಲು ಒಳ್ಳೆಯ ಅವಕಾಶ ಒದಗಿಸಿತು. ವೈದಿಕ ಸಂಸ್ಕೃತಿಯಲ್ಲಿ ಅನುಭಾವಿಕ ಸಾಂಕೇತಿಕತೆಯನ್ನು ಕುರಿತು ಭಗವಂತನ ದಿವ್ಯಪ್ರವಚನಗಳ ಒಂದು ಸರಣಿ ಲಭ್ಯವಾಯಿತು. ಪರಮಾತ್ಮನನ್ನು ದರ್ಶಿಸುವ ಸಲುವಾಗಿ ಆತ್ಮವನ್ನು ಆಹುತಿ ಕೊಡುವ ಅತ್ಯಗತ್ಯ ಕರ್ತವ್ಯವನ್ನು ಯಜ್ಞವು ನೆನಪಿಗೆ ತಂದುಕೊಡುತ್ತದೆ ಎಂದು ಬಾಬಾ

ವಿವರಿಸಿದರು. ದೇಹವೇ ಯಜ್ಞವೇದಿಕೆ ; ನಾವು ಜೀವಿಸಿರುವ ಈ ಜಗತ್ತೇ ಆಹುತಿ ; ಭಕ್ತಿ ಮತ್ತು ಜ್ಞಾನಗಳು ಆಹುತಿಯನ್ನು ಸ್ವೀಕರಿಸುವ, ಪರಿವರ್ತಿಸುವ ಮತ್ತು ಪವಿತ್ರಗೊಳಿಸುವ ಯಜ್ಞಾಗ್ನಿಗಳು ; ಪುರುಷನು ಪುರುಷೋತ್ತಮತ್ವಕ್ಕೆ ಏರುವುದೇ ಯಜ್ಞದ ಫಲ. ಭಗವಾನರು ಮುಂದುವರಿದು ಹೇಳಿದರು : "ಈ ವರ್ಷದ ದಸರಾ ನಿಲಯದ ಇತಿಹಾಸದಲ್ಲಿ ಹೊಸತೊಂದು ಅಧ್ಯಾಯವನ್ನು ತೆರೆಯುತ್ತದೆ. ದೈವಿಕತೆಯನ್ನು ಗುರುತಿಸುವ ಎನ್ನುವುದೀಗ ಅದರ ತಿರುಳು. ದೈವಕ್ಕಾಗಿ ಹಂಬಲಿಸಿ, ಸಾಧನೆಯ ಮೂಲಕ ಅದನ್ನು ನಿಮ್ಮಲ್ಲೇ ಕಂಡುಕೊಳ್ಳಲು ಶ್ರಮಿಸಿ. ಈ ಆವರಣವು ಇದಕ್ಕಾಗಿಯೇ ಅರ್ಪಿತವಾಗಿದೆ." ಪ್ರಾರ್ಥನಾ ಮಂದಿರಕ್ಕೆ ಒಂದು ಹೊಸ ಮುಖಮಂಟಪವನ್ನು ಸೇರಿಸಲಾಗಿತ್ತು. ಅದನ್ನು ವಿಸ್ತರಿಸಿ ಬೆಳ್ಳಿಯ ಬಾಗಿಲುಗಳನ್ನು ಜೋಡಿಸಲಾಗಿತ್ತು. ಸಾಂಪ್ರದಾಯಕವಾದ ದೇವಾಲಯ ಶಿಲ್ಪಕೃತಿಗಳಿಂದ, ಚಿನ್ನದ ಕುಸುರಿ ಕೆಲಸಗಳಿಂದ ಕೂಡಿದ ಅಲಂಕಾರಿಕ ಗುಮ್ಮಟಗಳಿಂದ ಶೋಭಿಸುತ್ತಿತ್ತು. ಮಂದಿರವು ಅವತಾರ ಪುರುಷನ ಇರುವಿಕೆಯನ್ನು ಘೋಷಿಸುತ್ತಿತ್ತು. ಅಲ್ಲಿಯ ನಿವಾಸಿಗಳು ಮತ್ತು ಸಂದರ್ಶಕರು ಅಲ್ಲಿನ ದೈವೀಸನ್ನಿಧಿಯನ್ನು ಅರಿತು ಆ ಪವಿತ್ರ ವಾತಾವರಣದಲ್ಲಿ ದೊರಕುವ ಆಧ್ಯಾತ್ಮಿಕ ಉನ್ನತಿಗೆ ಹೊಂದಿಕೊಳ್ಳುವ ಹಾಗೆ ತಮ್ಮ ದೈನಂದಿನ ಚಟುವಟಿಕೆಗಳನ್ನು ರೂಪಿಸಿಕೊಳ್ಳಬೇಕಾಗಿತ್ತು. ಸಾಧನೆಯಲ್ಲಿ ತಮ್ಮ ದಿನಗಳನ್ನು ಕಳೆಯಬೇಕೆಂದು ಉತ್ಕಟವಾಗಿ ಬಯಸಿದ ಭಕ್ತರಿಗೆ ನೀಡಲಾದ ಎಪ್ಪತ್ತಕ್ಕೂ ಹೆಚ್ಚು ಫ್ಲಾಟುಗಳನ್ನು ಬಾಬಾ ದಿವ್ಯಸನ್ನಿಧಿಯಿಂದ ಪವಿತ್ರಗೊಳಿಸಿದರು. ಆ ಮನೆಗಳ ನಿವಾಸಿಗಳು ಭಾರತದ ಬೇರೆ ಬೇರೆ ಭಾಗಗಳಿಂದಲೂ ವಿದೇಶಗಳಿಂದರೂ ಬಂದಿದ್ದರು. ಅವರು ಬೇರೆ ಬೇರೆ ಧರ್ಮಗಳಿಗೆ ಸೇರಿದ್ದವರು, ಬೇರೆ ಬೇರೆ ಭಾಷೆಗಳನ್ನು ಆಡುತ್ತಿದ್ದವರು. ಭಗವಾನರು ಅವರೆಲ್ಲರ ಮೇಲೂ ಕೃಪೆಯನ್ನು ವರ್ಷಿಸಿದರು. ಅವರು ಹೇಳಿದರು : "ಇರುವುದು ಒಂದೇ ಜಾತಿ, ಅದು ಮಾನವ ಜಾತಿ ; ಒಂದೇ ಧರ್ಮ, ಪ್ರೇಮ ; ಒಂದೇ ಭಾಷೆ, ಹೃದಯದ ಭಾಷೆ ; ಭಗವಂತ ಒಬ್ಬನೇ, ಅವನು ಸರ್ವಾಂತರ್ಯಾಮಿ". ಈಗ ಫ್ಲಾಟುಗಳ ಸಂಖ್ಯೆ 300ಕ್ಕೆ ಏರಿದೆ. ಪ್ರತಿವರ್ಷವೂ ತಮ್ಮ ಬದುಕನ್ನು ಕೊನೆಯ ಪಕ್ಷ ಪ್ರತಿವರ್ಷ ಕೆಲವು ತಿಂಗಳನ್ನು ಈ ನಿಶ್ಯಬ್ದದ, ಆತ್ಮ ಸಾಕ್ಷಾತ್ಕಾರದ ವಾತಾರವಣದಲ್ಲಿ ಕಳೆದು ದೈವೇಚ್ಛೆಗೆ ಶರಣಾಗತರಾಗಲು ಬರುವ ಭಕ್ತರ ಸಂಖ್ಯೆ ವೇಗವಾಗಿ ವರ್ಧಿಸುತ್ತಿದೆ.

## ಮೇಲೆದ್ದ ಶಿವಂ

ಅಕ್ಟೋಬರ್. ಭಗವಾನರು ಹೈದರಾಬಾದಿಗೆ ಬಂದರು. ನಾಗರಿಕರನ್ನು ನಗರ ಸಂಕೀರ್ತನೆಯಲ್ಲಿ ಪಾಲುಗೊಳ್ಳಲು ಪ್ರೇರೇಪಿಸಿದರು. ಅವರು ತಮ್ಮ ಮಕ್ಕಳಿಗೆ ಸಾಧನೆಯ ಮೂಲ ಪಾಠಗಳನ್ನು ಹೇಳಿಕೊಡುವಂತೆ ಪ್ರೋತ್ಸಾಹಿಸಿದರು. ವಿದ್ಯಾವಂತರಾದವರಲ್ಲಿದ್ದ ಕೆಳಮಟ್ಟದ ವಿಚಾರಗಳನ್ನೂ ಆದರ್ಶಗಳನ್ನೂ ಪರಿವರ್ತಿಸಿದರು. ವೇದ ವಿದ್ವಾಂಸರ ಅಕಾಡೆಮಿಯಲ್ಲಿ ನೀಡಿದ ಅವರ ಪ್ರವಚನಗಳಿಂದಾಗಿ ಆಧ್ಯಾತ್ಮಿಕ ಪಿಪಾಸುಗಳು ತಮ್ಮ ಸಾಮರ್ಥ್ಯವನ್ನೂ, ಉಪಯುಕ್ತತೆಯನ್ನೂ ಹೆಚ್ಚಿಸಿಕೊಂಡರು. 1971ರ ಅಕ್ಟೋಬರ್ 25ರಂದು ಆಂಧ್ರದ ರಾಜಧಾನಿ ಹೈದರಾಬಾದಿನಲ್ಲಿ ಲಿಂಗಾಕೃತಿಯ ದೇವಾಲಯಕ್ಕೆ ಶಂಕುಸ್ಥಾಪನೆ ಮಾಡಿದರು. "ಈ ದಿನ ನಾನು ಈ ದೇವಾಲಯವನ್ನು

ಸಂಪ್ರೋಕ್ಷಿಸಿ ಪವಿತ್ರಗೊಳಿಸುತ್ತಿದ್ದೇನೆ. ಇನ್ನು ಮುಂದೆ ಭಕ್ತರು ನನ್ನನ್ನು ಹಿಂಬಾಲಿಸಿಕೊಂಡು ಸ್ಥಳದಿಂದ ಸ್ಥಳಕ್ಕೆ ತಿರುಗುವ ಬದಲು ಇಲ್ಲಿ ಸೇರಬಹುದು, ಇಲ್ಲಿ ದರ್ಶನ ಆಗಿಯೇ ತೀರುತ್ತದೆ' ಎಂದರು ಅವರು. ಮುಂಬಯಿಯ ಧರ್ಮಕ್ಷೇತ್ರದಲ್ಲಿ ದೇವಾಲಯವನ್ನು 'ಸತ್ಯಂ' ಎಂದು ಕರೆಯಲಾಗಿ ಸರಣಿಯಲ್ಲಿ 'ಶಿವಂ' ಎರಡನೆಯದು. ಕೊನೆಯದಾಗಿ ಮದರಾಸಿನಲ್ಲಿ 'ಸುಂದರಂ' ನಿರ್ಮಾಣಗೊಂಡಿತು. ಈ ಮೂರರಲ್ಲಿ "ಸತ್ಯಂ ಕಾಲುಗಳಿದ್ದಂತೆ, ಶಿವಂ ದೇಹವಿದ್ದಂತೆ ಮತ್ತು ಸುಂದರಂ ಶಿರಸ್ಸು ಇದ್ದಂತೆ ಸತ್ಯದ ಮೇಲೆ ನಾವು ನಿಲ್ಲುತ್ತೇವೆ, ಶಿವದಂತೆ ನಡೆದು ಕೊಳ್ಳುತ್ತೇವೆ, ಸುಂದರವನ್ನು ಆಲೋಚಿಸುತ್ತೇವೆ ಸತ್ಯದಲ್ಲಿ ಹುಟ್ಟುತ್ತೇವೆ, ಒಳಿತಿನಲ್ಲಿ ಬೆಳೆದು ಸೌಂದರ್ಯದಲ್ಲಿ ಲೀನವಾಗುತ್ತೇವೆ." 1973ರ ಏಪ್ರಿಲ್‌ನ ತೆಲುಗು ನೂತನ ವರ್ಷಾರಂಭದ ದಿನ 'ಶಿವಂ' ಮಂದಿರವನ್ನು ಭಗವಾನರು ಉದ್ಘಾಟಿಸಿದರು. ಅದೊಂದು ವಾಸ್ತುಶಿಲ್ಪ ರತ್ನ. ಏಕೈಕದಿಂದ ಮೂಡಿ ಅದರಲ್ಲೇ ಲೀನವಾಗುವ ವಿಶ್ವಾತ್ಮಕ ಸಂದೇಶವನ್ನು ಬೀರುವಂತೆ ಈ ಕಟ್ಟಡವನ್ನು ನಿರ್ಮಿಸಲಾಗಿದೆ. ಹದಿನೆಂಟು ತಿಂಗಳಲ್ಲಿ ಇದರ ನಿರ್ಮಾಣ ಪೂರ್ಣಗೊಂಡಿತು. ಇಡೀ ಕಟ್ಟಡವೇ ಒಂದು ಭವ್ಯವಾದ ಲಿಂಗಾಕಾರದಲ್ಲಿದೆ. ಅದರ ಪೀಠಭಾಗವಾಗಿ ಒಂದು ದೊಡ್ಡ ಸಭಾ ಮಂಟಪದಲ್ಲಿ ನಿರಂತರವಾಗಿ ಪೂಜೆಮಾಡಲು ಬಯಸುವ ಭಕ್ತರಿಗಾಗಿ ಎಂದು ಬಾಬಾ ಒಂದು ಲಿಂಗವನ್ನು ಸೃಷ್ಟಿಸಿ ಅಲ್ಲಿ ಪ್ರತಿಷ್ಠೆ ಮಾಡಿದರು. ಅಲ್ಲಿಂದ ಏಳುದಿನಗಳ ಕಾಲ ಬೃಹತ್ ಜನಸಭೆಯು ಮೈಯೆಲ್ಲ ಕಿವಿಯಾಗಿ ಭಗವಾನರೇ ಆಗಿರುವ ಶಿವನ ಮತ್ತು ಲಿಂಗದ ಮಹಿಮೆಯನ್ನು ಆಲಿಸಿತು. ಶಿವಪುರಾಣದಲ್ಲಿ ಉಕ್ತವಾಗಿರುವ ಶೈವ ವೈಭವನ್ನು ಕೇಳಿ ಸಂತೋಷಪಟ್ಟಿತು. ಈ ಘಟನೆಯಿಂದ ಒಂದು ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಕ್ರಾಂತಿಯ ಉದಯವಾಯಿತು : 'ಶಿವಂ' ಅದಕ್ಕೆ ಸ್ಫೂರ್ತಿಯ ಸೆಲೆಯಾಯಿತು.

1971ರ ವರ್ಧಂತಿ ಸಮಾರಂಭಗಳಲ್ಲಿ ಭಗವಾನರು ವಿವರಿಸಿದರು : "ಜೀವನ ಎನ್ನುವುದು ಒಂದು ಸವಾಲು ; ಅದನ್ನು ಎದುರಿಸಿ. ಜೀವನ ಪ್ರೇಮವೇ ಆಗಿದೆ ; ಅದನ್ನು ಹಂಚಿಕೊಳ್ಳಿ. ಜೀವನ ಒಂದು ಆಟ ಅದನ್ನು ಆಡಿರಿ'. ಸಾವಿರಾರು ಜನರು ಇದು ಅರ್ಥಮಾಡಿಕೊಂಡು ಅದರಂತೆ ನಡೆಯುತ್ತಿರುವ ದಿವ್ಯ ಸಂದೇಶ ಇದು. ಪ್ರತಿಯೊಬ್ಬ ಜೀವಿಗೂ ಮೂರು ಕೋಶಗಳಿವೆ ಎಂದು ಅವರು ಹೇಳಿದರು. ಸ್ಥೂಲ ದೇಹ, ಸೂಕ್ಷ್ಮ ದೇಹ ಮತ್ತು ಕಾರಣ ದೇಹಗಳು ಅವು. ಬುದ್ಧಿವಂತ ಸ್ಥೂಲದೇಹದ ಒಡೆಯ, ಹಾಗೆಯೇ ಬುದ್ಧಿ ಸೂಕ್ಷ್ಮದೇಹಕ್ಕೆ ಒಡೆಯ. ಈ ಉತ್ಸವದ ಪ್ರತಿದಿನದ ಜಾಗರೂಕತೆಯಿಂದ ನಡವಳಿಕೆಗಳನ್ನು ಆಲಿಸಿದವರು ಆತ್ಮ ಸಂಯಮನ, ಆತ್ಮ ಜ್ಞಾನ, ಸಾಕ್ಷಾತ್ಕಾರದ ಕಡೆಗೆ ಕೆಲವು ಹೆಜ್ಜೆಗಳನ್ನು ಮುಂದಿಡಲು ಸಾಧ್ಯವಾಯಿತು. ಈ ಹಬ್ಬವಾದ ಸನಿಹದಲ್ಲೇ ಕ್ರಿಸ್‌ಮಸ್ ಬಂದಿತು. ಸರ್ವವ್ಯಾಪಿಯಾದ ಕ್ರಿಸ್ತನ ಬಗೆಗೆ ಭಗವಾನರು ತಮ್ಮ ಪ್ರವಚನದಲ್ಲಿ ಒತ್ತಿ ಹೇಳಿದರು : "ಕ್ರಿಸ್ತನಲ್ಲಿ ಎಲ್ಲರೂ ಒಂದಾಗಿದ್ದಾರೆ ಮತ್ತು ಎಲ್ಲರಲ್ಲೂ ಒಬ್ಬನೇ ಕ್ರಿಸ್ತನಿದ್ದಾನೆ."

## ಸಮ್ಮೇಳನವು ನಡೆಯಿತು

ಶ್ರೀ ಸತ್ಯಸಾಯಿ ಸೇವಾ ಸಂಸ್ಥೆಗಳ ಎಂಟನೆಯ ಅಖಿಲ ಭಾರತ ಸಮ್ಮೇಳನವು ಮದರಾಸ್ ಅಬಟ್ಸಬರಿಯಲ್ಲಿ 1971 ಡಿಸೆಂಬರ್ ಕೊನೆಯವಾರ ನಡೆಯಿತು. ಅದು ರಾಷ್ಟ್ರವು ಪಾಕಿಸ್ತಾನದೊಂದಿ

ಯುದ್ಧದಲ್ಲಿ ತೊಡಗಿದ್ದ ಸಮಯ. ಆದರೂ ಬಾಬಾ ಸಮ್ಮೇಳನದ ವ್ಯವಸ್ಥಾಪಕರಿಗೆ ಉತ್ಸಾಹ ತುಂಬಿ ಸಿದ್ಧತೆಯನ್ನು ಮುಂದುವರಿಸಬೇಕೆಂದು ಹೇಳಿದರು. ಆ ವೇಳೆಗೆ ಯುದ್ಧವು ಮುಗಿದಿರುತ್ತದೆ ಎಂದು ಅವರು ಭರವಸೆ ಕೊಟ್ಟರು. "ಪಾಕೀಸ್ತಾನದ ಪೂರ್ವ-ಪಶ್ಚಿಮಾರ್ಧಗಳ ನಡುವೆ ನಡೆದ ಸಿವಿಲ್‌ವಾರ್‌ನಿಂದಾಗಿ ಭಯಗ್ರಸ್ಥರಾದ ಮಿಲಿಯಗಟ್ಟಲೆ ಜನ ಭಾರತದಲ್ಲಿ ಆಶ್ರಯ ಪಡೆದರು. ಅತೀವ ಯಾತನೆಯ ಸಮಯದಲ್ಲಿ ನಾವು ಅವರಿಗೆ ನೆರವಾಗಬೇಕೆಂದು ಅವರು ಹಂಬಲಿಸಿದರು. ನಮ್ಮ ಸಂಪ್ರದಾಯ ಮತ್ತು ಪರಂಪರೆಗೆ ತಕ್ಕುದಾದ ರೀತಿಯಲ್ಲಿ ನಾವು ಬೇಕಾದಷ್ಟು ತ್ಯಾಗ ಮಾಡಿ ಅವರಿಗೆ ಅನ್ನ ವಸತಿ ನೀಡಿ, ಪರಿಸ್ಥಿತಿ ಉತ್ತಮಗೊಂಡು ಅವರು ಕ್ಷೇಮವಾಗಿ ಶಾಂತಿಯಲ್ಲಿ ಬದುಕಿರಲು ಸಾಧ್ಯವೆಂದು ಭರವಸೆ ಬಂದ ಮೇಲೆ ಅವರ ಸ್ಥಳಗಳಿಗೆ ಕಳಿಸಿಕೊಟ್ಟೆವು. ನಾವು ರಾಜ್ಯವನ್ನು ವಿಸ್ತರಿಸುವುದಕ್ಕಾಗಲಿ, ಯಾರನ್ನೇ ಆಗಲಿ ಅಂಕೆಗೆ ತರುವುದಕ್ಕಾಗಲಿ, ಹಿಂಸಿಸುವುದಕ್ಕಾಗಲಿ ಇಚ್ಛಿಸುವುದಿಲ್ಲ", ಎಂದರು ಬಾಬಾ ಘರ್ಷಣೆ ಕೊನೆಗೊಂಡ ಮೇಲೆ. ಅವರ ಸಂಕಲ್ಪ ಈಡೇರಿತು. ಭಾರತಕ್ಕೆ ಅಚ್ಚರಿಯಾಗುವಂತೆ ಪಾಕೀಸ್ತಾನವು ಶರಣಾಯಿತು. ಇದು ನಡೆದದ್ದು ಸಮ್ಮೇಳನಕ್ಕೆ ಒಂದೇ ಒಂದು ವಾರಕ್ಕೆ ಮೊದಲು. ಭಾರತದ ಎಲ್ಲೆಡೆಗಳಿಂದ ಬಂದ 3,000ಕ್ಕೂ ಹೆಚ್ಚು ಪ್ರತಿನಿಧಿಗಳು ಮದರಾಸಿನಲ್ಲಿ ಸೇರಿದ ಸಮ್ಮೇಳನವದು.

ಭಾರತದ ಹೊರಗಿನಿಂದಲೂ ಅನೇಕರು ಬಂದಿದ್ದರು. ಅಮೆರಿಕದಿಂದ ಕೋವಾನ್ ದಂಪತಿ - ವಾಲ್ಟರ್ ಮತ್ತು ಎಲ್ಸೀ, ಡಾ. ಜಾನ್ ಹಿಸ್ಲಪ್ ಮತ್ತು ಅನೇಕ ಇತರರು ಬಂದರು. ಕೋವಾನ್ ದಂಪತಿಗಳು 1972ರ ಏಪ್ರಿಲ್‌ನಲ್ಲಿ ಹಿಂದಿರುಗಿ ಹೋದರು. "ಮಿತ್ರರು ಮತ್ತು ಸಹ ಅನ್ವೇಷಕರು ', (Friends and Fellow Seekers) ಎಂಬ ಒಂದು ಕೂಟದಲ್ಲಿ ಮಾತನಾಡುತ್ತಾ ಎಲ್ಸೀ ಹೇಳಿದರು : "ನಾವು ಭಾರತದಿಂದ ಬಂದಿದ್ದೇವೆ. ಸಂಭವಿಸಬಹುದಾದ ಅತ್ಯದ್ಭುತವಾದ ಅನುಭವವನ್ನು ತುಂಬಿಕೊಂಡು ನಾನು, ನನ್ನ ಪತಿ ಇಲ್ಲಿಗೆ ಹಿಂದಿರುಗಿ ಬಂದಿದ್ದೇವೆ. ಅದೆಂಥ ಅದ್ಭುತವೆಂದರೆ ನಿಮ್ಮಲ್ಲಿ ಅನೇಕರು ಅದನ್ನು ನಂಬಲಾರಿರಿ. ಏಕೆಂದರೆ ಈ ಭಗವತ್ಪುರುಷನ ಮಹಾತ್ಮೆಯನ್ನೂ ಅಗಾಧ ಸಾಮರ್ಥ್ಯವನ್ನೂ ನಮ್ಮಲ್ಲಿ ಯಾರೂ ಅರ್ಥಮಾಡಿಕೊಳ್ಳಲಾರೆವು. ಭಗವಂತನು ಭೂಮಿಯ ಮೇಲೆ ನಡೆದಾಡುತ್ತಿದ್ದಾನೆ. ಮಾತ್ರವಲ್ಲ ನೆಲದಿಂದ ಮುಗಿಲವರೆಗೆ ಎಲ್ಲ ಸ್ತರದ ಸಮಸ್ತ ಜೀವಿಗಳನ್ನು ಪಾಲಿಸುತ್ತಿದ್ದಾನೆ. ಮದರಾಸಿನಲ್ಲಿ ವಾಲ್ಟರ್ ಸತ್ತರು. ಸಾಯಿಬಾಬಾ ಮತ್ತೆ ಅವನನ್ನು ಬದುಕಿಸಿದರು." ವಾಲ್ಟರ್ ಕೋವಾನ್ ಅದನ್ನು ಸಮರ್ಥಿಸಿದರು : "ಮದರಾಸಿನ ಕೊನ್ನೆಮರಾ ಹೊಟೇಲಿನಲ್ಲಿ, ಅಲ್ಲಿಗೆ ಹೋದ ಎರಡು ದಿನಗಳ ನಂತರ ತೀವ್ರ ರೂಪದ ನ್ಯುಮೋನಿಯಾ ರೋಗ ತಗುಲಿ ನಾನು ಹಾಸಿಗೆ ಹಿಡಿದೆ. ಉಸಿರಾಡಲು ತೊಂದರೆ ಪಡುತ್ತಿದ್ದೆ. ಇದ್ದಕ್ಕಿದ್ದಂತೆ ದೇಹದ ಹೋರಾಟವೆಲ್ಲ ಮುಗಿದು ಹೋಯಿತು. ನಾನು ಸತ್ತಿದ್ದೆ."

ಸಮ್ಮೇಳನದ ವೇಳೆ ಭಗವಾನರು ತಮ್ಮ ಭಕ್ತ ಪ್ರತಿನಿಧಿಗಳು ತಮ್ಮ ಬಗೆಗೆ ತಾಳಿರುವ ಪ್ರೇಮವನ್ನು ಅವರಷ್ಟು ಅದೃಷ್ಟಶಾಲಿಗಳಲ್ಲದವರ ಸೇವೆಯಾಗಿ ಪರಿವರ್ತಿಸಬೇಕು ಎಂದು ಕರೆ ನೀಡಿದರು. ತಾವು ಯಾರನ್ನು ದೇವರೆಂದು ಭಕ್ತಿಯಿಂದ ಗೌರವಿಸುತ್ತಾರೋ ಅದೇ ಭಗವಂತನ

ಭಾಗವೇ ಆಗಿರುವ ಆ ಜನರೊಂದಿಗೆ ತಮ್ಮ ಸಂಪತ್ತು, ಶಕ್ತಿ, ಕೌಶಲಗಳನ್ನು ಹಂಚಿಕೊಳ್ಳಬೇಕು ಎಂದರು. ಸೇವಾಕಾರ್ಯವೆನ್ನುವುದು ಯಾಂತ್ರಿಕ ನಡವಳಿಕೆಯಾಗಬಾರದು. ಪ್ರದರ್ಶನಕ್ಕಾಗಿ ಸೇವೆ ಮಾಡತಕ್ಕದಲ್ಲ. ಹಾಗೆಯೇ ಬಾಯ್ತುಂಬ ಅಯ್ಯೋ ಪಾಪ ಎಂದು ಕರುಣೆ ಸೂಸುವುದರಿಂದ ಯಾವ ಪ್ರಯೋಜನವೂ ಇಲ್ಲ. "ಎಲ್ಲರೂ ಒಬ್ಬರಿಗಾಗಿ, ಒಬ್ಬರು ಎಲ್ಲರಿಗಾಗಿ" ಎಂಬ ಆದರ್ಶದ ಕಡೆಗೆ ಸಮಾಜವು ಮುನ್ನಡೆಯಬೇಕು. ಧಾರ್ಮಿಕ ಉತ್ಸವವನ್ನು ತಿರಸ್ಕರಿಸುವ, ಸಾಧುಸಂತರನ್ನು ಅಪಮಾನಿಸುವ, ದೇವರನ್ನು ನಿರಾಕರಿಸುವ, ಆ ಮೂಲಕ ಮನುಷ್ಯನಲ್ಲಿರುವ ಶ್ರದ್ಧೆ, ಧರ್ಮ ಪ್ರಜ್ಞೆ ಪ್ರಾಮಾಣಿಕತೆಗಳನ್ನು ಕುಂಠಿತಗೊಳಿಸುವ ವ್ಯಕ್ತಿಗಳನ್ನೂ ಸಂಸ್ಥೆಗಳನ್ನೂ ಭಗವಾನರು ಕಟುವಾಗಿ ಖಂಡಿಸಿದರು. ಮಾನವನು ಜ್ಞಾನದ ಅಗಾಧ ಕ್ಷೇತ್ರಗಳಲ್ಲಿ ಪ್ರಭುತ್ವ ಸಂಪಾದಿಸಿದ್ದಾನೆ, ಆದರೂ ಅವನು ತನ್ನನ್ನೇ ತಾನು ತಿಳಿದುಕೊಂಡಿಲ್ಲ. ಕಾಲುಗಳು ಬಲಯುತವಾಗಿದ್ದರೂ ಅವನು ಕುಂಟುತ್ತಿದ್ದಾನೆ; ಅಂತರಂಗವು ಸುದೃಢವಾಗಿದ್ದರೂ ಹುಚ್ಚನಾಗಿದ್ದಾನೆ ; ಕಿವಿಗಳು ಅತ್ಯಂತ ಚುರುಕಾಗಿದ್ದರೂ ಕಿವುಡಾಗಿದ್ದಾನೆ. ಈ ವೈಪರೀತ್ಯದ ಕಡೆಗೆ ಅವನ ಗಮನ ಸೆಳೆಯಬೇಕಾದ, ಅವನ ನಡವಳಿಕೆಯಲ್ಲಿ ಆತ್ಮವಿಶ್ವಾಸ ಮೂಡಿಸಬೇಕಾದ ಸಮಯ ಬಂದಿದೆ - ಎಂದರು. ಪ್ರತಿನಿಧಿಗಳು ಸಮ್ಮೇಳನ ಮುಗಿಸಿ ತಮ್ಮ ತಮ್ಮ ಸ್ಥಳಗಳಿಗೆ ಮರಳುವ ಮೊದಲು ಅವರೆಲ್ಲರೂ ಪಾಕೀಸ್ತಾನದ ಬಗೆಗೆ ತಾಳಿದ್ದಿರಬಹುದಾದ ಎಲ್ಲ ಅನಿಚ್ಛೆ ಅಥವಾ ಅಪನಂಬಿಕೆ ಭಾವನೆಗಳ ಕುರುಹುಗಳನ್ನು ಈಗ ತಾವು ಅನುಭವಿಸಿರುವ ವಿಶ್ವಪ್ರೇಮವಾರಿಧಿಯಲ್ಲಿ ಮುಳುಗಿಸಿಡಬೇಕು ಎಂದು ನಿರ್ದೇಶಿಸಿದರು. "ನಿಮ್ಮ ಪ್ರೇಮದ ಬೆಚ್ಚನೆಯ ತೆಕ್ಕೆಯೊಳಕ್ಕೆ ಸಮಸ್ತ ಮಾನವ ಜನಾಂಗವನ್ನು ಸ್ವಾಗತಿಸಿರಿ" ಎಂದು ಕರೆಯಿತ್ತರು.

1972ರ ನೂತನ ವರ್ಷಾರಂಭದ ದಿನದಂದು ಪ್ರಶಾಂತಿ ನಿಲಯದ ನಿವಾಸಿಗಳಿಗೆ ಬರೆದ ಒಂದು ಪತ್ರದಲ್ಲಿ ಬಾಬಾ ಮದರಾಸು ಸಮ್ಮೇಳನದ ವಿಷಯವಾಗಿ ಬರೆಯುತ್ತಾ ಹೇಳಿದರು : "ಸಮ್ಮೇಳನದ ಗೋಷ್ಠಿಗಳು ಎಲ್ಲರಿಗೂ ಆನಂದ ನೀಡಿದವು. ಆದರೆ ಆತ್ಮದ ಅಗತ್ಯಗಳಿಗಿಂತ ಹೆಚ್ಚಾಗಿ ನಾಲಿಗೆ ಮತ್ತು ಹೊಟ್ಟೆಯ ಅಗತ್ಯಗಳನ್ನು ಪೂರೈಸುವ ಕಡೆಗೆ ಹೆಚ್ಚಿನ ಸಮಯ ಮತ್ತು ಗಮನ ನೀಡಲಾಯಿತು. ಆತ್ಮದ ಹಸಿವಿರುವವರಿಗೆ ಈ ಹಂಬಲಗಳೆಲ್ಲಾ ಕ್ಷುಲ್ಲಕವಾಗುತ್ತವೆ. ಆಹಾರ, ಔತಣ ಮೊದಲಾದವನ್ನು ಮಂದವಾದ ಸ್ತರದಲ್ಲೇ ಉಳಿಸಿಕೊಳ್ಳುವುದು ಯಾವಾಗಲೂ ಶ್ರೇಯಸ್ಕರ. ಮದರಾಸಿನಲ್ಲಿ ಅದು ನಡೆಯಲಿಲ್ಲ." ಮೌಲ್ಯಗಳ ಪ್ರಾಧಾನ್ಯದ ವಿಷಯದಲ್ಲಿ ಬಾಬಾ ಎಂದಿಗೂ ರಾಜಿ ಮಾಡಿಕೊಳ್ಳುವವರಲ್ಲ. ಅವರು ವಿವರಿಸಿದರು "ಭೌತಿಕ ಸುಖಭೋಗಗಳಿಗೆ ಹೆಚ್ಚು ಒತ್ತು ಕೊಟ್ಟಾಗ ಆನಂದವು ತಪ್ಪಿಸಿಕೊಂಡು ಹೋಗಿಬಿಡುತ್ತದೆ. ಗೊಡ್ಡು ಹರಟೆ, ಹೊಟ್ಟೆ ಬಾಕತನ, ಸಂಚು ಮಾಡುವುದು, ಚಾಡಿಕೋರತನ, ಕೀಳು ಪ್ರಚಾರ, ಇತರರನ್ನು ಅವಹೇಳನ ಮಾಡುವುದು, ಸುಮ್ಮನೆ ಇತರರನ್ನು ಹೊಗಳುತ್ತಿರುವುದು - ಇವೆಲ್ಲ ಬಹುಕಾಲದಿಂದ ಬೇರು ಬಿಟ್ಟಿರುವ ಶತ್ರುಗಳು. ಈ ದುಷ್ಟಪ್ರವೃತ್ತಿಗಳನ್ನು ನಿವಾರಿಸಿಕೊಂಡವರು ಮಾತ್ರವೇ ಸ್ವಾಮಿಯ ಕೃಪೆಯನ್ನು ಗಳಿಸಬಲ್ಲರು. ಈ ಹೊಸವರ್ಷದಲ್ಲಿ ನೀವು ಆ ಕೃಪೆಯನ್ನು ಗಳಿಸುವಂತಾಗಲಿ. ಹಳೆಯ ಸವೆದ ಮಾರ್ಗಗಳನ್ನು ತ್ಯಜಿಸಿ ಸನಾತನ ಧರ್ಮ (ಹಿಂದು ಧರ್ಮ)ವು ಹಾಕಿಕೊಟ್ಟಿರುವ ನೂತನ ಪಥದಲ್ಲಿ ನಡೆಯಲು ಇಂದೇ ದೃಢ ಸಂಕಲ್ಪ ಮಾಡಿರಿ."

## ಬಾಲಕರಿಗಾಗಿ ಒಂದು ಕಾಲೇಜು

ವೈಟ್‌ಫೀಲ್ಡ್ ಬಳಿ ಬೃಂದಾವನಕ್ಕೆ ಸೇರಿದಂತೆ ಇದ್ದ ವಿಶಾಲವಾದ ನೆಲದಲ್ಲಿ 1972 ಮಾರ್ಚಿ 16ರಂದು ಸತ್ಯಸಾಯಿ ಕಾಲೇಜಿಗೆ ಶಂಕುಸ್ಥಾಪನೆ ಮಾಡಲಾಯಿತು. ಅಪೂರ್ವ ವಾಸ್ತುಶಿಲ್ಪ ರತ್ನವೆಂಬಂತೆ ಈ ಕಟ್ಟಡವನ್ನು ಭಗವಾನರು ವಿನ್ಯಾಸಗೊಳಿಸಿದ್ದರು. ಅನಂತಪುರದ ಮಹಿಳಾ ಕಾಲೇಜಿನ ಕಟ್ಟಡದಷ್ಟೇ ಭವ್ಯವಾಗಿ ಕಟ್ಟಿದ್ದರು. ಜ್ಞಾನದ ಅಪೂರ್ವ ಭಂಡಾರವಾಗುವಂತೆ, ನಿಂತ ನೆಲವನ್ನೇ ಶಾಂತಿ, ಸಮೃದ್ಧಿಗಳ ನೆಲೆಯಾಗುವಂತೆ ಪರಿವರ್ತಿಸುವ ಭರವಸೆ ಕೊಡುವಂತೆ ಅದನ್ನು ರೂಪಿಸಲಾಗಿತ್ತು. "ಇಂದು ಶಿಕ್ಷಣ ವ್ಯವಸ್ಥೆಯು ಹದಗೆಟ್ಟಿರುವುದಕ್ಕೆ ಪಾಲಕರು, ರಾಜಕಾರಣಿಗಳು, ಶಿಕ್ಷಕರು ಎಲ್ಲರೂ ಕಾರಣರಾಗಿದ್ದಾರೆ"ಎಂದರು ಬಾಬಾ. "ಆಧುನಿಕ ಜೀವನದ ಮಿಕ್ಕೆಲ್ಲ ಕ್ಷೇತ್ರಗಳಲ್ಲಿನಂತೆಯೇ ಶಿಕ್ಷಣ ಕ್ಷೇತ್ರದಲ್ಲೂ ಎರವಲು ಆದರ್ಶಗಳು, ಆಮದು ಮಾಡಿಕೊಂಡ ವ್ಯವಸ್ಥೆಗಳು, ಚಂಚಲವಾದ ನಿಷ್ಠೆಗಳು ತಮ್ಮೊಟ್ಟಿಗೆ ಅನಾಹುತವನ್ನೇ ತಂದೊಡ್ಡಿವೆ. ಪ್ರತಿಯೊಬ್ಬನೂ ಸಲಹೆ ಕೊಡುವುದರಲ್ಲಿ ಅಥವಾ ಟೀಕಿಸುವುದರಲ್ಲಿ ನಿರತನಾಗಿದ್ದಾನೆ ; ಆದರೆ ಮಾದರಿಯಾಗುವಂತೆ ವಾಸ್ತವವಾಗಿ ಕೆಲಸ ಮಾಡುವುದಕ್ಕೆ ಯಾರೂ ಸಿದ್ಧರಾಗಿಲ್ಲ. ಈ ಕಾಲೇಜಿನಲ್ಲಿ ಓದಿದ ವಿದ್ಯಾರ್ಥಿಗಳು ಮುಂದೆ ಜನನಾಯಕರಾದಾಗ, ಶಿಕ್ಷಕರಾದಾಗ, ಜೀವನದ ವಿಕ್ಷುಬ್ಧ ಸಾಗರದ ಮೇಲೆ ದೋಣಿಯಲ್ಲಿ ನೆಮ್ಮದಿಯಾಗಿ ಕುಳಿತು ಸಂತೋಷವಾಗಿ ಯಾನ ಮಾಡುವ ಜನರ ಸಂಖ್ಯೆ ಹೆಚ್ಚಾಗುತ್ತದೆ. ಅನ್ಯಾಯ, ಅಸತ್ಯ, ಅಧರ್ಮಗಳನ್ನು ಅವಮಾನ ಕಾರಕವಾದ ಸಾಮಾಜಿಕ ಕೆಡುಕುಗಳು ಎಂದು ಪರಿಗಣಿಸಲಾಗುತ್ತದೆ. ಈಗಿನಂತೆ ಅವುಗಳನ್ನು ಸಹಿಸುವುದೂ ಇಲ್ಲ, ಮೆಚ್ಚುವುದೂ ಇಲ್ಲ. ಸತ್ಯ, ನ್ಯಾಯ, ಪ್ರೇಮಗಳು ಬಹು ಬೇಗನೆ ಈ ಜಗತ್ತಿನಲ್ಲಿ ನೆಲೆಗೊಳ್ಳುತ್ತವೆ. ಶಿಕ್ಷಣದ ಪುನರ್ ವ್ಯವಸ್ಥೆಯು ಈ ಗುರಿಯ ಸಾಧನೆಗಾಗಿ ಇರುವ ಒಂದು ದಾರಿ" ಎಂದು ಬಾಬಾ ಘೋಷಿಸಿದರು.

## ದೆಹಲಿಯಲ್ಲಿ ಅವರ ಜನ

1972 ಮಾರ್ಚಿ 25ರಂದು ಹತ್ತುದಿನದ ವಾಸ್ತವ್ಯಕ್ಕಾಗಿ ಭಗವಾನರು ದೆಹಲಿಗೆ ಬಂದರು. ಬೃಹತ್ ಜನಸ್ತೋಮದೆದುರು ಮಾತನಾಡುವಾಗ ಅನೇಕ ವೇಳೆ ಬಾಬಾ 'ನಿಮ್ಮ ಆನಂದವನ್ನು ಹಂಚಿಕೊಳ್ಳಲು ಹಾಗೆಯೇ ನನ್ನ ಆನಂದವನ್ನು ನೀವು ಹಂಚಿಕೊಳ್ಳುವುದನ್ನು ನೋಡಲು ನನಗೆ ತುಂಬ ಸಂತೋಷವಾಗುತ್ತದೆ" ಎಂಬ ಮಾತಿನಿಂದ ಪ್ರಾರಂಭ ಮಾಡುವರು. ಆ ಹತ್ತು ದಿನಗಳೂ ನಿರಂತರ ಆನಂದಾನುಭವ ಅವರ್ಣನೀಯ ದೈವಿಕ ಸಂತೋಷಗಳಲ್ಲಿ ಕಳೆದುವು. ಪ್ರಶಾಂತಿ ನಿಲಯಕ್ಕೆ ಹಿಂದಿರುಗಿದ ನಂತರ ತಮ್ಮ ದೆಹಲಿ ಭೇಟಿಯನ್ನು ಕುರಿತು ಭಕ್ತರ ಒಂದು ಕೂಡುಹದಲ್ಲಿ ಮಾತನಾಡುವಾಗ ಹೀಗೆ ಹೇಳಿದರು "ದೆಹಲಿಯು ನನ್ನ ಜನರ ಹಂಬಲಿಕೆ, ಮೊರೆ ಎಷ್ಟು ಮಟ್ಟಿಗೆ ಹೃದಯಸ್ಪರ್ಶಿಯಾಗಿದ್ದಿತೆಂದರೆ ನನಗೆ ಇಳಿದು ಬರಲು ಸುಮಾರು ಅರ್ಧ ಗಂಟೆ ಬೇಕಾಯಿತು. ನನ್ನ ವಸತಿಯ ಮುಂದೆ ಲಕ್ಷಾಂತರ ಜನರು ನೆರೆಯುತ್ತಿದ್ದರು. ಹಗಲು ರಾತ್ರಿಯೆನ್ನದೆ ಎಲ್ಲ ಸಮಯದಲ್ಲೂ ದರ್ಶನಕ್ಕಾಗಿ ಕಾತರಿಸುತ್ತಿದ್ದರು. ಒಂದು ಗುಂಪು ಮುಂದಕ್ಕೆ ಹೋದ ಹೊರತು

ಇನ್ನೊಂದು ಗುಂಪು ಬಂದು ದರ್ಶನ ಪಡೆಯಲು ಆಸ್ಪದವಿರಲಿಲ್ಲ. ಬೃಹತ್ ಜನಸ್ತೋಮವು ದರ್ಶನ ಪಡೆಯಲೆಂದು ನಾನು ಮನೆಯ ಮಾಳಿಗೆಯನ್ನೇರಿ ನಿಂತುಕೊಳ್ಳಬೇಕಾಯಿತು. ದರ್ಶನವು ನೀಡುವ ಆನಂದದಿಂದ ಆಕರ್ಷಿತರಾಗಿ ಮೀರತ್, ಜಲಂಧರ್, ಪಟಿಯಾಲಾ ಮತ್ತಿತರ ದೂರದ ಊರುಗಳಿಂದೆಲ್ಲ ಜನ ತಂಡೋಪತಂಡವಾಗಿ ಬರುತ್ತಿದ್ದರು, ಭಜನೆಗೂ ಪ್ರವಚನಗಳಿಗೂ ನೆರೆಯುತ್ತಿದ್ದರು. ಏಪ್ರಿಲ್ 1ನೆಯ ತಾರೀಖು ಮಧ್ಯಾಹ್ನ ಬಿಸಿಲಿನ ಸಮಯದಲ್ಲಿ, ನಾನು ಕುರುಕ್ಷೇತ್ರಕ್ಕೆ ಹೋಗಲು ಒಪ್ಪಿದೆ. ಏಕೆಂದರೆ ದೆಹಲಿಯ ಜನರಿಗೆ ದರ್ಶನವನ್ನು ವಂಚಿಸಲು ನನಗೆ ಇಚ್ಛೆಯಾಗಲಿಲ್ಲ. ಅಲ್ಲಿ ಗುಲ್ಜಾರಿಲಾಲ್ ನಂದಾ ಅವರು ಸಾಧುಗಳ ಮತ್ತು ವಿದ್ಯಾರ್ಥಿಗಳ ಒಂದು ಸಭೆಯನ್ನು ಏರ್ಪಡಿಸಿದ್ದರು. ಆದರೆ ಎಂದಿನಿಂದಲೂ ಉಪದೇಶದ ಸ್ಥಳವಾಗಿರುವ ಕುರುಕ್ಷೇತ್ರದ ಬಯಲಿನಲ್ಲಿ ಮೂರು ಲಕ್ಷ ಜನ ನನಗಾಗಿ ಕಾದಿದ್ದರು. ವ್ಯವಸ್ಥೆ ಮತ್ತು ಶ್ರೇಣಿ ವ್ಯವಸ್ಥೆಗಳು ಹೇಗೆ ಹಾನಿಕಾರ ಪ್ರಭಾವ ಹೊಂದಿವೆ ಎಂದು ನಾನು ಸನ್ಯಾಸಿಗಳನ್ನುದ್ದೇಶಿಸಿ ಹೇಳಿದೆ. ರಾಜಕೀಯ ವ್ಯವಹಾರಗಳಲ್ಲಿ ಸಿಕ್ಕಿಕೊಂಡು ರೋಗಗ್ರಸ್ಥವಾಗದಂತೆ ದೂರವಿರಬೇಕು ಎಂದು ಅವರಿಗೆ ಸೂಚಿಸಿದೆ." ಕುರುಕ್ಷೇತ್ರ ಸಭೆಯನ್ನು ಕಣ್ಣಾರೆ ಕಂಡ ಭೋಗೇಂದ್ರನಾಥ ಜೋಶಿ ಬರೆಯುತ್ತಾರೆ : "ಬಾಬಾ ಕಾಣಿಸಿಕೊಳ್ಳುವವರೆಗೆ ಸಾವಿರಾರು ಜನ ವಿದ್ಯಾರ್ಥಿಗಳು ಗೊಂದಲದಲ್ಲಿದ್ದರು, ಅಸಹನೆ ಅಶಾಂತಿಗಳಿಂದ ಕುದಿಯುತ್ತಿದ್ದರು. ಅವರನ್ನು ನಿಯಂತ್ರಿಸುವುದು ಬಹಳ ಕಷ್ಟವಾಗಿತ್ತು. ಆದರೆ ಬಾಬಾ ವೇದಿಕೆಯನ್ನು ಏರಿ ಬಂದು ಒಂದು ಸಾರಿ ಸುತ್ತ ಕಣ್ಣು ಹಾಯಿಸಿದೊಡನೆ ಹುಚ್ಚೆದ್ದ ಉದ್ವೇಗಗಳು ಶಾಂತವಾದುವು ; ಕಿರಿಕಿರಿಯುಂಟುಮಾಡುತ್ತಿದ್ದ ಆ ಯುವ ಸಮುದಾಯವು ತಟಕ್ಕನೆ ಶಾಂತಿಯ ಸೇನೆಯಾಗಿ ಮಾರ್ಪಾಟು ಹೊಂದಿಬಿಟ್ಟಿತು."

ದೆಹಲಿಯ ಜನಸ್ತೋಮದಲ್ಲಿ ತುಂಬಿರುವ ಭಕ್ತಿ ಭಾವವನ್ನು ನೋಡಿ ಪ್ರಭಾವಿತನಾದ ಅಮೇರಿಕದ ರಾಯಭಾರಿ ಪ್ರೊಫೆಸರ್ ಕೀಟಿಂಗ್ ಹೇಳಿದರು : "ಪುಸ್ತಕಗಳನ್ನು ಅಧ್ಯಯನ ಮಾಡುವುದರಿಂದ ಭಾರತೀಯ ಸಂಸ್ಕೃತಿಯ ಪೂರ್ಣ ಸ್ವರೂಪವನ್ನು ನಾನು ಅರ್ಥ ಮಾಡಿಕೊಳ್ಳಲಾರೆ ಅಥವಾ ಈ ನಾಡಿನ ಶಾಸ್ತ್ರ ಕೃತಿಗಳ ಅಧಿಕೃತತೆಯ ಬಗೆಗೆ ಪ್ರಮಾಣಿಸಲಾರೆ. ಆದರೆ ಈ ದೇಶದ ರಾಜಧಾನಿಯಲ್ಲಿ ಇಪ್ಪತ್ತನೆಯ ಶತಮಾನದ ಏಳನೆ ದಶಕದಲ್ಲಿ ಇಂಥದೊಂದು ಅದ್ಭುತ ಘಟನೆಯನ್ನು ನೋಡುತ್ತಿದ್ದೇನೆ. ಶ್ರದ್ಧಾಳುಗಳಾದ ಐದು ಲಕ್ಷ ಜನ ಗಂಡಸರು, ಹೆಂಗಸು ಈ ಐದು ಅಡಿ ಎತ್ತರದ ವ್ಯಕ್ತಿಯ ಒಂದು ಕ್ಷಣದರ್ಶನವನ್ನಾದರೂ ಪಡೆಯಬೇಕೆಂದು ಇಲ್ಲಿ ಸೇರಿದ್ದಾರೆ. ಇದರಿಂದ ಈ ಪ್ರಾಚೀನ ಜನತೆಯ ನಾಡಿಮಿಡಿತವನ್ನು ಆಲಿಸಬಲ್ಲೆ ಎಂದು ನನಗನ್ನಿಸುತ್ತದೆ." ಆಗ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯ ಪತ್ರಿಕೆಯ ಸಂಪಾದಕರಾಗಿದ್ದ ಖುಷವಂತ್‌ಸಿಂಗ್, ದೆಹಲಿಯ ಗಲಿಬಿಲಿಯನ್ನು ಮೌನ ಸ್ತಬ್ಧತೆಗೊಳಪಡಿಸಿದ ಈ ವಿಶಿಷ್ಟ ಭಕ್ತಿಯನ್ನು ಕುರಿತು ಹೀಗೆ ಬರೆದರು : " ದೆಹಲಿಯಲ್ಲಿ ರಸ್ತೆಗಳಿಗೆ ಪಕ್ಕದ ಅಂಚುಕಟ್ಟು ಮಿಕ್ಕೆಲ್ಲ ನಗರಗಳಿಗಿಂತ ಅಗಲವಾಗಿರುವುದರಿಂದಾಗಿ ಇಲ್ಲಿ ವಾಹನ ಸಂಚಾರ ಸ್ಥಗಿತವಾಗುವುದು ಬಹಳ ವಿರಳವಾದ ಘಟನೆ. ಆದರೆ ಇಲ್ಲಿ ಸಂಚಾರ ಸ್ಥಗಿತಗೊಂಡಿರುವುದನ್ನು ನೋಡುತ್ತಿದ್ದೇನೆ. ಶ್ರೀ ಸತ್ಯಸಾಯಿಬಾಬಾ ತಂಗಿರುವ ಮನೆಯೇ ಕೇಂದ್ರವಾಗಿ ಸುತ್ತ ಎರಡು ಮೈಲಿಯಷ್ಟು ದೂರದವರೆಗೆ ಎಲ್ಲೆಲ್ಲೂ ಎಲ್ಲ ರಸ್ತೆಗಳಲ್ಲೂ ಕಾರುಗಳು, ಬಸ್ಸುಗಳು

ಇಡಿಕಿರಿದಿವೆ." ಅದು ಬೆಳಕು ಮತ್ತು ಪ್ರೇಮಗಳಿಗಾಗಿ ಹಂಬಲಿಸುವುದರ ಸಹಜ ಅಭಿವ್ಯಕ್ತಿ ಎಂದು ಬಾಬಾ ವಿವರಿಸಿದರು. ಸಾಮಾನ್ಯವಾಗಿ ಪತ್ರಕರ್ತರು ಬಳಸುವ 'ವಿಜಯ ಪ್ರವೇಶ' 'ದೆಹಲಿಗೆ ಧಾಳಿಯಿಟ್ಟರು' ಎಂಬ ಪದಗಳನ್ನು ಖುಷವಂತ್‌ಸಿಂಗ್ ಒಪ್ಪುತ್ತಿರಲಿಲ್ಲ. ಏರಿಯಲ್ ತನ್ನ ಅಂಕಣ ಬರಹದಲ್ಲಿ ಉಪಯೋಗಿಸಿದ 'ಆಕ್ರಮಣ ಮಾಡಿದರು' ಎಂಬ ಪದವೂ ಅವರಿಗೆ ಸಮ್ಮತಿಯಿರಲಿಲ್ಲ. ಏರಿಯಲ್ ಬರೆದಿದ್ದರು : "ಭಾರತದ ಅತ್ಯಂತ ಪ್ರಸಿದ್ಧ ಅನುಭವಿಗಳು ಮತ್ತು ದಾರ್ಶನಿಕರಲ್ಲಿ ಒಬ್ಬರಾದ ಶ್ರೀ ಸತ್ಯಸಾಯಿ ಬಾಬಾ ಕಳೆದ ವಾರ ದೆಹಲಿಗೆ ಧಾಳಿಯಿಟ್ಟರು. ಎಲ್ಲಾ ವರ್ಗದ ಎಲ್ಲಾ ಬಗೆಯ ಜನಕೋಟಿ ಅವರಿಗೆ ಅತ್ಯದ್ಭುತವಾದ ಸ್ವಾಗತ ನೀಡಿತು. ಎಂಥ ಭಾವಪರವಶ ಸ್ವಾಗತವೆಂದರೆ ಅನೇಕ ವರ್ಷಗಳಿಂದ ಏರಿಯಲ್ ಅಂಥದನ್ನು ಕಂಡಿರಲಿಲ್ಲ.:

ಪ್ರಶಾಂತಿ ನಿಲಯದಲ್ಲಿ ಬಾಬಾ ಹೇಳಿದರು : "ಒಂದು ಸಂಜೆ ಮೀರತ್ತಿಗೆ ಹೋದೆವೆ. ಜನಸಮೂಹ ಎಷ್ಟು ದೊಡ್ಡದಿತ್ತು. ಎಷ್ಟು ಒತ್ತಾಗಿ ಅವರು ಕೂಡಿದ್ದರು ಎಂದರೆ ವೇದಿಕೆಯ ಬಳಿಯಿಂದ ಸುಮಾರು ಒಂದು ಮೈಲು ದೂರ ಕಾರು ಹೋಗಲು ಸಾಧ್ಯವೇ ಆಗಲಿಲ್ಲ. ದೆಹಲಿಗೆ ಹಿಂದಿರುಗಬೇಕೆಂದೂ ನನಗೆ ಸಲಹೆಯೂ ಬಂದಿತು. ಆದರೆ ಆ ಜನಸ್ತೋಮದ ಹಂಬಲದ ಕರೆ ನನ್ನನ್ನು ಸೆಳೆಯಿತು. ವೇದಿಕೆಯ ಮೇಲೆ ಕಾಣಿಸಿಕೊಂಡೆ. ಕೆಲವು ಭಜನ ಗೀತೆಗಳನ್ನು ಹಾಡಿದೆ. ಅಖಂಡ ಜನಸ್ತೋಮವು ಅದನ್ನು ಸಾಲು ಸಾಲಾಗಿ ನಾನು ಹೇಳಿಕೊಟ್ಟಂತೆ ಒಟ್ಟಾಗಿ ಹಾಡಿದರು. ಅವರ ತೃಷ್ಣೆಯು ಪ್ರಾಮಾಣಿಕವಾದುದೆಂದು ನನಗೆ ತೃಪ್ತಿಯುಂಟಾಯಿತು. ಹೇಗೆ ರಹಸ್ಯವಾಗಿ ವೇದಿಕೆಯನ್ನು ಹತ್ತಿ ಬಂದಿದ್ದೆನೋ ಅಷ್ಟೇ ರಹಸ್ಯವಾಗಿ ಅಲ್ಲಿಂದ ಇಳಿದು ಕಾರಿಗೆ ಬಂದುಬಿಟ್ಟೆನು. ಆರೇಳು ವರ್ಷಗಳಿಂದಲೂ ನಾನು, ಮಿಲಿಯಗಟ್ಟಲೆ ಜನರು ಸೇರಿ ಅವತಾರಪುರುಷನ ಉಪದೇಶಗಳನ್ನಾಲಿಸಿ ಪ್ರಯೋಜನ ಪಡೆಯುವ ದಿನವು ಸಮೀಪದಲ್ಲೇ ಇದೆ ಎಂದು ನಿಮಗೆ ಹೇಳುತ್ತಲೇ ಬಂದಿದ್ದೇನೆ. ಇಂದು ನಿಮಗೆ ಸಾಧ್ಯವಾದಷ್ಟು ಹೆಚ್ಚಾಗಿ ಉಪದೇಶ, ಆನಂದಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಿರಿ. ಆಮೇಲೆ ಆ ಮಧುರ ನೆನಪುಗಳನ್ನು ನೆನೆದು ಮೆಲುಕು ಹಾಕಿ ಸಂತೋಷಪಡುತ್ತಿರಬಹುದು".

ಲಕ್ಷಾಂತರ ಜನರಿಗೆ ಹೇಗೋ ಹಾಗೆ ಬಾಬಾ ಅವರಿಗೂ ಪ್ರತಿಕ್ಷಣವೂ ಪ್ರೇಮ, ಬೆಳಕು, ಆನಂದ. ಈ ದೈವೀ ಪ್ರೇಮವನ್ನು ಸಂಕೇತಿಸುವ ಒಂದು ಘಟನೆಯನ್ನು ದಿ ನ್ಯೂಸ್ ಕ್ರಾನಿಕಲ್ ವರದಿ ಮಾಡಿತು. "ಇಂಡಿಯಾಗೇಟ್ ಬಳಿ ಬಾಬಾ ಅವರ ಕಾರು ವೇಗವಾಗಿ ಹೋಗುತ್ತಿತ್ತು. ಆಗ ಇದ್ದಕ್ಕಿದ್ದಂತೆ ಬಾಬಾ ಕಾರು ನಿಲ್ಲಿಸಲು ಹೇಳಿದರು. ಎಲ್ಲರಿಗೂ ಆಶ್ಚರ್ಯ. ಬಾಬಾ ಕಾರಿನಿಂದ ಇಳಿದರು. ರಸ್ತೆಯನ್ನು ದಾಟಿದರು. ಚಿಂದಿ ಬಟ್ಟೆಗಳನ್ನು ಹಾಕಿಕೊಂಡು ಕಾಲುದಾರಿಯ ಮೇಲೆ ಕುಳಿತಿದ್ದ ಒಬ್ಬ ವ್ಯಕ್ತಿಯ ಬಳಿಗೆ ಹೋಗಿ ಬಗ್ಗಿ ನಿಂತರು. ಒಂದು ಉಂಗುರವನ್ನು ಸೃಷ್ಟಿ ಮಾಡಿ ಆತನ ಕೈ ಹಿಡಿದು ಒಂದು ಬೆರಳಿಗೆ ಅದನ್ನು ತೊಡಿಸಿ, ಸಂತೋಷವಾಗಿ ಕಾರಿಗೆ ಹಿಂದಿರುಗಿದರು. "ಅಶೋಕ್ ಕುಮಾರ್ ಎಂಬ ಸ್ಕೂಟರ್ ಡ್ರೈವರ್ ಪ್ರಯಾಣಿಕರಿಂದ ದುಬಾರಿ ಹಣ ವಸೂಲು ಮಾಡುತ್ತಿದ್ದನು. ಬಾಬಾ ಅವರ ದರ್ಶನ ದೊರೆತೊಡನೆ ತನ್ನ ದುರಭ್ಯಾಸವನ್ನು ನಿಲ್ಲಿಸಿದನು. ಭಗವಂತನ ದರ್ಶನ ಅವನ

ಹೃದಯದಿಂದ ದುರಾಸೆಯನ್ನು ತೊಳೆದಿತ್ತು. ಅವನೊಂದಿಗೆ ನ್ಯೂಸ್‌ವೀಕ್ ಪತ್ರಿಕೆಯ ರಾಮಾನುಜಮ್ ಕೂಡ ಬಾಬಾ ಅವರ ಈ ಪ್ರೇಮವನ್ನು ಕಂಡರು. ಉಲ್ಲೇಖಿಸಬೇಕಾದ ಇನ್ನೊಂದು ಘಟನೆ ಬಾಬಾ ಅಮೆರಿಕದ ರಾಯಭಾರಿ ಕಚೇರಿಯಲ್ಲಿ ಪ್ರೊ. ಕೀಟಿಂಗ್ ಅವರೊಟ್ಟಿಗೆ ಇದ್ದಾಗ ನಡೆಯಿತು. ಅವರು ಒಂದು ಉಂಗುರವನ್ನು ಸೃಷ್ಟಿಸಿ ರಾಯಭಾರಿಯ ಬೆರಳಿಗಿಟ್ಟರು. ಆದರೆ ಅದು ಅಳತೆಗಿಂತ ದೊಡ್ಡದಾಗಿದ್ದುದರಿಂದ ರಾಯಭಾರಿಗೆ ಅಷ್ಟು ಹಿತವೆನಿಸಲಿಲ್ಲ. ಅವರ ಮುಜುಗರವನ್ನು ಗಮನಿಸಿದ ಬಾಬಾ, ಚಹಾ ಸೇವಿಸಲು ಮೇಜಿನ ಮುಂದೆ ಕುಳಿತಾಗ ಹೇಳಿದರು, "ದೊಡ್ಡದಾಗಿದೆಯಲ್ಲವೆ ? ಯೋಚಿಸಬೇಡಿ. ಅದು ಗುತ್ತನಾಗುತ್ತದೆ. ಹೇಗೆ ಎನ್ನುವಿರಾ ? ವಿವರಣೆ ಇಲ್ಲದಂತೆ ಅಂದು ಹೇಗೆ ಬಂದಿಯೋ ಹಾಗೆಯೆ ತನಗೆ ತಾನೆ ಬಿಗಿಯಾಗುತ್ತದೆ." ಚಹ ಸ್ವೀಕಾರದ ನಂತರ ಮೇಲೇರುವಾಗ ಕೀಟಿಂಗ್‌ಗೆ ಗೊತ್ತಾಯಿತು, ಉಂಗುರ 'ಬಿಗಿಯಾಗಿ ಅಳತೆಗೆ ತಕ್ಕುದಾಗಿದೆ" ಎಂದು.

## ಬಾಬಾ ಅವರ ಮೇಲೆ ದಾಳಿ

ಬಾಬಾ ದೆಹಲಿಗೆ ದಾಳಿಯಿಡುವುದರ ಬದಲು, ತಮ್ಮ ಮೇಲೆಯೇ ಜನರು ದಾಳಿಯಿಡಲು ಅವರು ಅವಕಾಶ ಮಾಡಿಕೊಟ್ಟರು ! ರಾಜಧಾನಿಯ ವಿದ್ಯಾ ಪ್ರಮುಖರ ಒಂದು ಕೂಟವನ್ನು ಉದ್ದೇಶಿಸಿ ಕಾಮಾನಿ ಸಭಾಂಗಣದಲ್ಲಿ ಮಾತನಾಡಿದರು. ಮಾಡರ್ನ್ ಸ್ಕೂಲ್ ಆಟದ ಬಯಲಿನಲ್ಲಿ ನೆರೆದ ಒಂದೂವರೆ ಲಕ್ಷ ಜನರ ಬೃಹತ್ ಸಭೆಯನ್ನುದ್ದೇಶಿಸಿ ಭಾಷಣ ಮಾಡಿದರು. ತಾವು ಸೂಚಿಸಿರುವ ಸಾಧನಾ ಮಾರ್ಗದಲ್ಲಿ ಹಲವಾರು ಸೇವಾ ಚಟುವಟಿಕೆಗಳಲ್ಲಿ ತೊಡಗಿದ್ದ ಸೇವಾ ಸಮಿತಿ ಹಾಗೂ ಸೇವಾದಳಗಳ ಸದಸ್ಯರನ್ನು ಉದ್ದೇಶಿಸಿ ಮಾತನಾಡಿದರು.

ಬೃಂದಾವನಕ್ಕೆ ಹಿಂದಿರುಗಿನ ಬಾಬಾ, ಪರದಾಡುತ್ತಿರುವ ಜಗತ್ತಿಗೆ ದೇವರೆಂದರೆ ಸ್ವರ್ಗದಲ್ಲಿ ವಾಸ ಮಾಡುತ್ತಿರುವ ನಿರಂಕುಶ ಪ್ರಭುವಲ್ಲ, ಒಂದು ಜೀವನ ವಿಧಾನ ಎಂದು ಕಲಿಸಿಕೊಡಲು ಹೊಸತೊಂದು ಮಹಾನ್ ಚಳುವಳಿಯನ್ನು ತೊಡಗಲು ನಿರ್ಧರಿಸಿದರು.

## ಬೇಸಿಗೆಯಲ್ಲಿ ಬೆಳಕಿನ ಸೋನೆ

ವಿದ್ಯಾರ್ಥಿಗಳಲ್ಲಿ ವಿನಯ ಮತ್ತು ಗೌರವ ಭಾವನೆಗಳನ್ನು ಮೂಡಿಸುವ ಸಲುವಾಗಿ ಅವರು ಭಾರತೀಯ ಸಂಸ್ಕೃತಿ ಮತ್ತು ಆಧ್ಯಾತ್ಮಗಳನ್ನು ಕುರಿತು ಒಂದು ತಿಂಗಳ ಅವಧಿಯ ಬೇಸಿಗೆ ಶಿಬಿರವನ್ನು ಯೋಜಿಸಿದರು. ಭಾರತದಾದ್ಯಂತ ಎಲ್ಲ ಕಡೆಯ ಕಾಲೇಜುಗಳಿಂದ ಬಂದ ಮುನ್ನೂರು ವಿದ್ಯಾರ್ಥಿಗಳು ಸಾಯಿ ಕಾಲೇಜಿನ ಹಿರಿಯ ವಿದ್ಯಾರ್ಥಿಗಳು ಒಂದು ಕಡೆ ಸೇರಿ ಒಂದು ಶಿಬಿರ ಹಾಕಿದರು. ಆಧ್ಯಾತ್ಮಿಕ ದೃಷ್ಟಿಯಿಂದ ತಯಾರಿಸಿದ ಪಾಠ್ಯ ಪಟ್ಟಿಯಂತೆ ಅಧ್ಯಯನ ಮಾಡಿದರು. ನಮ್ಮ ನೈತಿಕ ಆಧ್ಯಾತ್ಮಿಕ ಸಂಪತ್ತಿನ ಪರಿಚಯ, ಇತ್ಯಾತ್ಮಕ ಜಾತ್ಯತೀತತೆಯ ಗಾಢ ಅಭ್ಯಾಸ, ಎಲ್ಲ ದೇಶಗಳ ಎಲ್ಲ ಪಂಥಗಳ ಹಿರಿಯ ಸಂತರ, ಜ್ಞಾನಿಗಳ ಜೀವನ ಮತ್ತು ಸಂದೇಶಗಳ ಅಧ್ಯಯನ ಇವೆಲ್ಲ ಅದರಲ್ಲಿ ಸೇರಿದ್ದವು. ಎಲ್ಲಕ್ಕಿಂತ ಮಿಗಿಲಾಗಿ ಭಗವಾನರು ತಾವೇ ಲೇಖಕರು, ನಿರ್ಮಾಪಕರು, ನಿರ್ದೇಶಕರು, ಬೋಧಕರು

ಆಗಿದ್ದರು. ಅವರೇ ಭಾಗಿಗಳೂ ಆದರು, ಬೋಧಿಸಿದರು, ಸಮಸ್ತವನ್ನೂ ಒದಗಿಸಿದರು. ಈ ಅಧ್ಯಯನ ಶಿಬಿರದಲ್ಲಿ ಭಾಗವಹಿಸಿದ್ದ ಒಬ್ಬ ವಿದ್ಯಾರ್ಥಿನಿ ಮೀರಾ ಭರಣಿ ಹೇಳಿದರು : "ಪ್ರಕೃತಿಯನ್ನೇ ನಮ್ಮ ಗುರುವಾಗಿ, ಜೀವನವನ್ನೇ ಪಾಠಶಾಲೆಯಾಗಿ, ಸೇವೆಯನ್ನೇ ನಮ್ಮ ಕರ್ತವ್ಯವಾಗಿ ಹೊಂದಿಸಿಕೊಳ್ಳುವುದನ್ನು ನಮಗೆ ಕಲಿಸಿಕೊಡಲಾಯಿತು." ಓನಿತಾ ಬಾಹ್ಲ್ ಎಂಬ ಇನ್ನೊರ್ವ ವಿದ್ಯಾರ್ಥಿನಿ ಹೇಳಿದ್ದು ಹೀಗೆ : "ಅತ್ಯಂತ ಹೆಚ್ಚು ಕಷ್ಟಪಟ್ಟ ಉಪಾಧ್ಯಾಯರೆಂದರೆ ಬಾಬಾ ಅವರೇ. ಶಿಬಿರದಲ್ಲಿ ಪ್ರತಿದಿನವೂ ಸಂಜೆ, ಹಲವು ದಿನ ಬೆಳಗ್ಗೆ ಕೂಡ ಅವರು ನಮ್ಮೊಂದಿಗೆ ಮಾತನಾಡಿದರು. ಹಗಲ ಬಹುಭಾಗ ನಮ್ಮೊಂದಿಗೆ ಕಳೆಯುತ್ತಿದ್ದರು-ಗಮನಿಸುತ್ತಾ ಸಮಾಧಾನ ಕೊಡುತ್ತಾ, ಎಚ್ಚರಿಸುತ್ತಾ, ನಗಿಸುತ್ತಾ, ಬಿಡಿಸಿ ಹೇಳುತ್ತಾ. ದಿನದ ಕಾರ್ಯಕ್ರಮದ ಪ್ರತಿ ವಿವರವನ್ನೂ ಅವರೇ ಸ್ವತಃ ಮೇಲುವಿಚಾರಣೆ ಮಾಡಿದರು. ಬೆಳಗಿನ ಜಾವ ಓಂಕಾರ ಉಚ್ಚಾರಣೆ, ನಗರ ಸಂಕೀರ್ತನೆ, ತರಗತಿಗಳು ಮತ್ತು ದಿನದ ಭಜನೆಗಳು, ಪ್ರತಿ ಭಾನುವಾರ ಪ್ರಶ್ನೋತ್ತರ ಕಾರ್ಯಕ್ರಮ ಬೇರೆ. ನಾವು ಅವರನ್ನು ಕೇಳಿದೆವು : "ಆತ್ಮವು ಎಲ್ಲಿದೆ ?" ಮಾಯೆಯನ್ನು ಗೆಲ್ಲುವುದು ಹೇಗೆ ?" "ಧ್ಯಾನವನ್ನು ಹೇಗೆ ಮಾಡಬೇಕು?" "ಪರಿಣಾಮದ ತೊಡಕಿಲ್ಲದಂತೆ ಕರ್ಮದಲ್ಲಿ ನಿರತನಾಗುವುದು ಹೇಗೆ ?" ಪ್ರಾಣಾಯಾಮವನ್ನು ಅಭ್ಯಾಸ ಮಾಡುವುದು ಹೇಗೆ ?" ಹೀಗೆಲ್ಲಾ ಕೇಳಿದೆವು. ಅಪಾರ ಕರುಣೆ ಸಹಾನುಭೂತಿಗಳಿಂದ ಅವರು ಆಲಿಸಿದರು. ನಮ್ಮೆದುರಿಗಿದ್ದ ಸಮಸ್ಯೆಗಳನ್ನು ಬಿಡಿಸಿದರು. ನಮ್ಮ ಮನಸ್ಸಿನಲ್ಲೆದ್ದ ಸಂದೇಹದ ಅಲೆಗಳನ್ನು ಅದ್ಭುತ ಪ್ರವಚನಗಳ ಮೂಲಕ ಶಾಂತಗೊಳಿಸಿದರು. ಅನುಗ್ರಹದ ಉಡುಗೊರೆ ಸುರಿಸಿ ನಮ್ಮ ಹೃದಯಗಳನ್ನು ತುಂಬಿಬಿಟ್ಟರು. ಭಾಗವಹಿಸಿದ ನಮ್ಮಲ್ಲಿ ಯಾರೊಬ್ಬರೂ ಹಿಂದಿನವರಾಗಿ ಉಳಿಯಲೇ ಇಲ್ಲ."

ದೇಶದ ಎಲ್ಲೆಡೆಗಳಿಂದ ಬಂದಿದ್ದ ವಿದ್ವಾಂಸರ ಶ್ರೇಣಿಯಲ್ಲಿ ಪಂಡಿತರಿದ್ದರು, ಪ್ರಾಧ್ಯಾಪಕರಿದ್ದರು, ಉಪಕುಲಪತಿಗಳು, ಬರಹಗಾರರು, ನ್ಯಾಯಮೂರ್ತಿಗಳು, ಆಡಳಿತಾಧಿಕಾರಿಗಳು, ಕಲಾವಿದರು, ಕವಿಗಳು ಇದ್ದರು. ಈ ಅವಕಾಶವು ತಮಗೆ ದೊರೆತುದಕ್ಕಾಗಿ ಎಲ್ಲರೂ ಆನಂದ ತುಂದಿಲರಾಗಿದ್ದರು, ಕೃತಜ್ಞರಾಗಿದ್ದರು. ದೈವಸಾನಿಧ್ಯದ ಪ್ರಭಾವನ್ನು ಅವರೂ ಅನುಭವಿಸಿದರು, ಆ ವಿಶಿಷ್ಟ ಅನುಭವದಿಂದ ಬೇಕಾದಷ್ಟು ಪ್ರಯೋಜನ ಪಡೆದರು. ಶಿಬಿರದ ಸಮಾರೋಪದಂದು ಭಗವಾನರು ವಿದ್ಯಾರ್ಥಿಗಳಿಗೆ ಹೀಗೆ ಹೇಳಿದರು : "ನೀವೆಲ್ಲ ಇಂದು ಗೆಲುವಾಗಿದ್ದೀರಿ. ಇಲ್ಲಿನ ಶಾಂತಿ ಮತ್ತು ಆತ್ಮಸಂಯಮದ ವಾತಾವರಣದಿಂದ ಸ್ಫೂರ್ತಿ ಹೊಂದಿ, ನಿಮ್ಮ ವ್ಯಕ್ತಿತ್ವದಲ್ಲೇ ನೀವು ಪಡೆದ ದರ್ಶನ, ನೀವು ಗಳಿಸಿಕೊಂಡ ಸೇವಾದೀಕ್ಷೆ, ನಿಮ್ಮೊಳಗೇ ಸಂಕಲ್ಪಿಸಿ ಕೊಂಡಿರುವ ನಿರ್ಣಯಗಳು, ನೀವು ಅರಗಿಸಿಕೊಂಡಿರುವ ಚೈತನ್ಯದಾಯಕವಾದ ಪಾಠ ಪ್ರವಚನಗಳು ಇವುಗಳಿಂದ ನಿಮ್ಮ ವ್ಯಕ್ತಿತ್ವ ಬೆಳಗುತ್ತಿದೆ. ಹಿರಿಯರು ನಿಮ್ಮ ಮೇಲಿನ ಪ್ರೀತಿಯಿಂದ ಏನನ್ನು ಕಲಿಸಿಕೊಟ್ಟಿದ್ದಾರೋ ಅದೆಲ್ಲವನ್ನೂ ಭಕ್ತಿಗೌರವಗಳಿಂದ ಹೃದಯದಲ್ಲಿ ತುಂಬಿರಿಸಿಕೊಳ್ಳಿ. ಗಳಿಸಿಕೊಂಡಿರುವ ಆತ್ಮವಿಶ್ವಾಸದಿಂದಾಗಿ ಧೈರ್ಯದಿಂದ ಸಂತೋಷದಿಂದ ನಿಮ್ಮ ನಿಮ್ಮ ಸ್ಥಳಗಳಿಗೆ ಹಿಂದಿರುಗಿರಿ. ನಿಮ್ಮ ಆನಂದವನ್ನು ನಿಮ್ಮ ತಂದೆ, ತಾಯಿಗಳೊಂದಿಗೆ, ಬಂಧುಗಳು, ಮಿತ್ರರು, ಗೆಳೆಯರೊಂದಿಗೆ,

ಉಪಾಧ್ಯಾಯರೊಂದಿಗೆ ಹಂಚಿಕೊಳ್ಳಿರಿ. ನೀವು ಎಲ್ಲೇ ಇದ್ದರೂ ನಾನು ನಿಮ್ಮೊಂದಿರುತ್ತೇನೆ. ಇನ್ನು ಮುಂದಕ್ಕೆ ಎಂದಿಗೂ ನೀವು ಒಂಟಿಯಾಗಿರುವುದಿಲ್ಲ, ಅಸಹಾಯಕರಾಗಿರುವುದಿಲ್ಲ."

## ತಾಯಿಯ ಪಾತ್ರ ಮುಗಿಯಿತು

ಮೇ 6ನೆಯ ತಾರೀಕು, ಬೇಸಿಗೆ ಶಿಬಿರವು ವೇಗಗತಿಯಲ್ಲಿ ಮುಂದುವರಿದಿದ್ದಾಗ ಭಗವಾನ ತಾಯಿ ಈಶ್ವರಮ್ಮ ಬೃಂದಾವನದಲ್ಲಿಯೇ ತಮ್ಮ ಸುಪುತ್ರ ದಿವ್ಯಾವತಾರಿ ಭಗವಾನರ ಸಮ್ಮುಖದಲ್ಲಿ ಬೆಳಗ್ಗೆ 8.00 ಗಂಟೆಯ ಸುಮಾರಿಗೆ ತಮ್ಮ ಭೌತಿಕ ದೇಹದ ಬಂಧನವನ್ನು ಕಳಚಿ ಬಿಡುಗಡೆ ಹೊಂದಿದರು. ಕೊನೆಯ ಕ್ಷಣದವರೆಗೂ ಆಕೆ ಸಂತುಷ್ಟರಾಗಿದ್ದರು, ಗೆಲುವಾಗಿದ್ದರು. ಹಿಂದಿನ ರಾತ್ರಿಯಷ್ಟೇ ನಾನು ನಮಸ್ಕಾರ ಮಾಡಲು ಹೋದಾಗ ಅವರ ಸುತ್ತ ಮಕ್ಕಳು ತುಂಬಿಕೊಂಡಿದ್ದನ್ನು ನೋಡಿದ್ದೆ. ಪುರಾಣದ ವೀರರ ವಿಷಯವಾಗಿ ಮಕ್ಕಳಿಗೆ ಕತೆಗಳನ್ನು ಹೇಳುತ್ತಿದ್ದರು. ಮಲಗಲು ಹೋಗುವುದಕ್ಕೆ ಮಕ್ಕಳಿಗೆ ಸ್ವಲ್ಪವೂ ಇಷ್ಟವಿಲ್ಲ. ಇನ್ನೊಂದು ಕತೆ ಹೇಳಿ ಎಂದು ಅವರನ್ನು ಕಾಡುತ್ತಿದ್ದರು.

ಮಾತೃದೇವತೆಯ ನಿಧನದಿಂದಾಗಿ ಬಾಬಾ ಅವರ ವರ್ತನೆಯಲ್ಲಿ ಎಳ್ಳಷ್ಟೂ ವ್ಯತ್ಯಾಸ ಕಂಡುಬರಲಿಲ್ಲ. ಪುಟ್ಟಪರ್ತಿಯಲ್ಲಿನ ಸಮಾಧಿಯಲ್ಲಿ ಅವರ ತಂದೆಯ ದೇಹವನ್ನು ಸಮಾಧಿ ಮಾಡಿರುವ ಸ್ಥಳದ ಎಡಭಾಗದ ಅರ್ಧ ಸ್ಥಳ ತಾಯಿಯ ದೇಹದ ಸಮಾಧಿಗೆಂದೇ ಮೀಸಲಾಗಿಡಲಾಗಿತ್ತು. ಬಾಬಾ ಅವರು ಕೆಲವು ಸ್ವಯಂಸೇವಕರೊಟ್ಟಿಗೆ ಆ ಪವಿತ್ರ ದೇಹವನ್ನು ಪುಟ್ಟಪರ್ತಿಗೆ ಕಳಿಸಿಕೊಟ್ಟರು. ಅದೇ ದಿನ ಸಂಜೆ ಆ ಸ್ಥಳದಲ್ಲಿ ದೇಹವನ್ನು ಸಮಾಧಿ ಮಾಡಲಾಯಿತು. ದಿಢೀರನೆ ಬಂದೆರಗಿದ ಈ ಸಾವಿನ ಸುದ್ದಿಯಿಂದ ಇಡೀ ಹಳ್ಳಿಗೆ ಮಂಕು ಕವಿಯಿತು. ಪ್ರಶಾಂತಿ ನಿಲಯದ ನಿವಾಸಿಗಳಾದರೋ ತಮ್ಮ ಪ್ರೇಮಮಾತೆಯ ಅಗಲಿಕೆಗಾಗಿ ಗೋಳಾಡಿದರು. ಮಹಿಳಾ ಭಕ್ತರಂತೂ ತಾವು ತಬ್ಬಲಿಗಳಾಗಿ ಬಿಟ್ಟೆವೆಂದು ದುಃಖಿಸಿದರು. ಶೋಕಸಂತ್ರಪ್ತರ ಮೆರವಣಿಗೆಯ ಮುಂಚೂಣಿಯಲ್ಲಿ ನಡೆದು ಅವರು ಭಜನೆಗಳನ್ನು ಹಾಡಿ ಈ ನಷ್ಟವನ್ನು ಸಹಿಸಿಕೊಳ್ಳಲು ತಮಗೆ ಶಕ್ತಿ ನೀಡೆಂದು ಭಗವಂತನನ್ನು ಹಂಬಲಿಸಿ ಬೇಡಿದರು. ಈ ಕಡೆ ಬೃಂದಾವನಲ್ಲಿ ಬೇಸಿಗೆ ಶಿಬಿರದ ಪ್ರತಿಯೊಂದು ಕಾರ್ಯಕ್ರಮವೂ ಚಾಚು ತಪ್ಪದೆ ನಡೆದಿತ್ತು. ಕರ್ತವ್ಯ (Duty), ಶ್ರದ್ಧೆ (Devotion), ಶಿಸ್ತು (Discipline) ಈ ತ್ರಿವಳಿಯನ್ನು ಬಾಬಾ ಯಾವಾಗಲೂ ಒತ್ತಿ ಹೇಳುತ್ತಾರೆ. ನಡೆದ ಘಟನೆ ಗೊತ್ತಿದ್ದು ಎಲ್ಲೋ ಕೆಲವರಿಗೆ ಮಾತ್ರ. ಅವರಿಗೂ ಕೂಡ ಬಾಬಾರ ನಿರ್ದಿಷ್ಟ ಅನುಮತಿಯಿಲ್ಲದೆ ಸುದ್ದಿಯನ್ನು ಹರಡುವ ಸುತರಾಂ ಧೈರ್ಯವಾಗಲಿಲ್ಲ. ಏಕೆಂದರೆ ಬಾಬಾ ಹೇಳುವುದೇನು ? ಸಾವು ನಾಟಕದ ಪರದೆ ಕೆಳಕ್ಕೆ ಬಿದ್ದ ಹಾಗೆ. ಅನಂತದ ಸದಾ ಜಾಗರೂಕತೆಯಲ್ಲಿ ಮಿಟಿಕಿಸಿದ ಒಂದು ಕಣ್ಣು ಮಿಟುಕು ಇಷ್ಟೆ. ಆತ್ಮವು ತನ್ನ ಮೂಲವಾದ ದೈವದತ್ತ ನಡೆಸುವ ಅಖಂಡ ಯಾತ್ರೆಯಲ್ಲಿ ಇಡುವ ಒಂದು ಹೆಜ್ಜೆ. ಪುಟ್ಟಪರ್ತಿಯಲ್ಲಿ ತಂದೆ ವಿಧಿವಶರಾದಾಗಲೂ ಅಷ್ಟೆ. ಆ ಘಟನೆಯು ಪ್ರಶಾಂತಿ ನಿಲಯದ ಸಾಮಾನ್ಯ ಕಾರ್ಯಕ್ರಮವನ್ನು ಎಳ್ಳಷ್ಟೂ ವಿಚಲಿತಗೊಳಿಸಲಿಲ್ಲ. ಶ್ರದ್ಧೆ ಎಂಬ ನದಿಯ ಎರಡು ದಂಡೆಗಳು ಕರ್ತವ್ಯ ಮತ್ತು ಶಿಸ್ತು ಎಂಬ ಮಾತಿನಂತೆ ಬಾಬಾ ನಡೆಯುವುದನ್ನು ಅಂದು, ಮೇ ಆರನೆಯ ತಾರೀಕಿನಂದು ನಾವೇ ಕಣ್ಣಾರೆ ನೋಡಿದೆವು.

ಜುಲೈ 20ರಂದು ತಾರೀಕು ಬಾಬಾ ಪುಟ್ಟಪರ್ತಿ ಗ್ರಾಮದಲ್ಲಿ ಈಶ್ವರಮ್ಮ ಪ್ರೌಢಶಾಲೆಯನ್ನು ಉದ್ಘಾಟಿಸಿದರು. ಸಹಸ್ರಾರು ಜನ ಗ್ರಾಮೀಣ ಹಾಗೂ ನಾಗರಿಕ ಸ್ತ್ರೀಯರ ಮಕ್ಕಳ ಹೃದಯಗಳಲ್ಲಿ ಸುಪ್ತವಾಗಿದ್ದ ಒಳ್ಳೆಯತನವನ್ನು ಈಶ್ವರಮ್ಮ ಹೊರಕ್ಕೆ ಪ್ರಕಟವಾಗುವಂತೆ ಮಾಡಿದರು. ತಾಯಿಯ ಯಾವ ವಿಶ್ವ ಪ್ರೇಮದಿಂದ ಇದು ಸಾಧ್ಯವಾಯಿತೋ ಅದಕ್ಕೆ ಅತ್ಯಂತ ಸೂಕ್ತವಾದ ಸ್ಮಾರಕವಾಗಿ ಈ ಪ್ರೌಢಶಾಲೆಯು ಪ್ರಾರಂಭಗೊಂಡಿತು. "ಯಾವಾಗ ಈ ಹಳ್ಳಿಯ ಮಕ್ಕಳು ಹೆಚ್ಚು ಉನ್ನತ ವಿದ್ಯಾಭ್ಯಾಸವನ್ನು ಪಡೆಯುತ್ತಾರೋ ಆಗ ಖಂಡಿತವಾಗಿಯೂ ಇದರ ಉದ್ಧಾರವಾಗುತ್ತದೆ. ಹಳ್ಳಿಯಲ್ಲಿ ವಾಸ ಮಾಡುವ ನೂತನ ಅಧ್ಯಾಪಕರು ಆ ಉನ್ನತ ಶಿಕ್ಷಣವನ್ನು ಗಳಿಸಲು ಬೇಕಾದ ಜ್ಞಾನವನ್ನೂ ಉತ್ಸಾಹವನ್ನೂ ತುಂಬುತ್ತಾರೆ" ಎಂದು ಬಾಬಾ ಘೋಷಿಸಿದರು.

## ಪ್ರೇಮಪುತ್ರರು

ಭಾರತದಾದ್ಯಂತ ಎಲ್ಲ ಕಡೆಗಳಿಂದ ಬಂದ ಸುಮಾರು 3,000 ಜನ ಇದ್ದ ಶ್ರೀ ಸತ್ಯಸಾಯಿ ಸೇವಾದಳದ ಸಮ್ಮೇಳನವು ಪ್ರಶಾಂತಿ ನಿಲಯದಲ್ಲಿ 1972ರ ದಸಾರಕ್ಕೆ ಕೆಲವು ದಿನಗಳ ಮುಂಚೆ ಸೇರಿತು. ಭಗವಾನರು ಅವರನ್ನು ತಮ್ಮ ಪ್ರೇಮ ಪುತ್ರರೆಂದು ಸ್ವಾಗತಿಸಿದರು. ಯುವಜನತೆಯ ಆಧ್ಯಾತ್ಮಿಕ ತೃಷೆಯ ಪುನರುಜ್ಜೀವನದಲ್ಲಿ ಅವರು ನಾಯಕತ್ವ ವಹಿಸಬೇಕು ಎಂದು ಅವರು ಇಚ್ಛಿಸಿದರು. ಅವರು ಸಾಯಿಯಲ್ಲಿ ನಂಬಿಕೆ ಶ್ರದ್ಧೆಯನ್ನು ಹೆಚ್ಚು ಹೆಚ್ಚು ಬೆಳೆಸಿಕೊಳ್ಳಬೇಕು, ಪ್ರತಿಯೊಂದು ದಳವೂ ಅಥವಾ ಹೂವಿನ ರೇಕೂ ಸಜೀವವಾಗಿ, ಸಕ್ರಿಯವಾಗಿ, ವರ್ಣರಂಜಿತವಾಗಿ, ಪರಿಮಳಭರಿತವಾಗಿ ರೂಪುಗೊಳ್ಳಲು ಸಾಧ್ಯವಾಗುವುದು ಅದು ಪುಷ್ಪಕಾಂಡಕ್ಕೆ ಅಂಟಿಕೊಂಡಿದ್ದಾಗ ಮಾತ್ರವೆ. ಸಾಯಿ ಬೋಧನೆಗಳನ್ನು ಅವರು ಆಚರಿಸಬೇಕು, ಆ ಮೂಲಕ ಜಗತ್ತಿಗೆ ತಮ್ಮ ಅರ್ಹತೆಯನ್ನು ಮನಗಾಣಿಸುವ ಉಜ್ವಲ ಮಾದರಿಗಳಾಗುವರು ಎಂದು ಅವರಿಗೆ ಬಾಬಾ ಹೇಳಿ ಕೊಟ್ಟರು. ದಸರಾ ಸಮಯದಲ್ಲಿ ಏಳುದಿನಗಳ ಕಾಲ ನಡೆಯುವ ಯಜ್ಞದಿಂದ ವ್ಯಕ್ತಿ ಕಲಿಯಬೇಕಾದ ಪಾಠವಿದೆ. 'ಯಜ್ಞವೊಂದೇ ಜಯ ನೀಡಬಲ್ಲುದು' ಎಂಬುದೇ ಅದು. ವಿಜಯಕ್ಕೆ ಕಾರಣವಾಗುವುದು ತ್ಯಾಗ ಮಾತ್ರವೇ. ದಸರಾ ಹಬ್ಬದ ಸಮಯದಲ್ಲಿ ಅಕ್ಟೋಬರ್ 17ನೆಯ ತಾರೀಕು ಭಗವಾನರು, ಪೂರ್ವಭಾಗದಲ್ಲಿ ದಿವ್ಯವಾಗಿ ಅಲಂಕರಿಸಿ ಆತ್ಮಾನಂದದಾಯಕವಾದ ವಿಗ್ರಹಗಳಿಂದಲೂ, ಚಿತ್ರಗಳಿಂದಲೂ ಶೋಭಿಸುವ ಪ್ರಶಾಂತಿನಿಲಯದ ಆ ಬೃಹತ್ ಸಭಾಭವನವನ್ನು ದಿವಂಗತ ಪೂರ್ಣಚಂದ್ರ ಕಾಮಾನಿ ಅವರ ನೆನಪಿಗಾಗಿ ಪೂರ್ಣಚಂದ್ರ ಎಂದು ಕರೆಯಲಾಗುವುದು ಎಂದರು. ಆ ಸಭಾ ಭವನದ ಕನಸು ಕಂಡಿದ್ದವರು ಕಾಮಾನಿ ; ಭಗವಾನರ ಕೃಪೆಯಿಂದ ಅದು ನನಸಾಗಿ ಪರಿಣಮಿಸಿತ್ತು.

ಹಿಂದೆಯೆ ನವೆಂಬರ್ ಬಂದಿತು. ಬಾಬಾ ಅವರ ಹುಟ್ಟು ಹಬ್ಬದ ಸಡಗರ. ಪ್ರಶಾಂತಿ ನಿಲಯದಲ್ಲಿ ನೆರೆದ ಸಾವಿರಾರು ಜನರಿಗೆ ಅಮೂಲ್ಯವರಗಳನ್ನು ನೀಡಿದರು. ಬಾಬಾ ದಿವ್ಯದರ್ಶನ ಹಾಗೂ ಭರವಸೆ ಕೊಡುವ, ಕರುಣೆದೋರುವ ಪುನಶ್ಚೇತನಗೊಳಿಸುವ ಮಂದಹಾಸಗಳ ಮೂಲಕ ಎಲ್ಲರನ್ನೂ ತೃಪ್ತಿಪಡಿಸಿದರು. ತಾವೇ ಕೈಯಾರ ಎಲ್ಲರಿಗೂ ಸಿಹಿ ಹಂಚಿದರು. ಹೃದಯದಲ್ಲಿ ನೆಲೆಗೊಳಿಸಿಕೊಳ್ಳಬೇಕಾದ ಆತ್ಮನ ಸಂದೇಶವನ್ನು ನೀಡಿದರು.

## ಮಿಯಾಂವ್ ಕೇಳಿಸಿತು

ನವೆಂಬರ್ 23ನೆಯ ತಾರೀಕು ಘಟಿಸಿದ ಒಂದು ಘಟನೆಯನ್ನು ಸಾಯಿ ಚರಿತ್ರೆಯಲ್ಲಿ ಉಲ್ಲೇಖಿಸಲೇ ಬೇಕು. ಸುಮಾರು ಅರುವತ್ತು ಜನ ಭಕ್ತರು ದೂರದ ಅಸ್ಸಾಮಿನ ರಾಜಧಾನಿ ಗುವಾಹಟಿಯಿಂದ ಬಂದಿದ್ದರು. ಒಂದು ವಿಶೇಷ ರೈಲುಗಾಡಿಯಲ್ಲಿ ಕುಳಿತು ಏಳುದಿನ ಪ್ರಯಾಣ ಮಾಡಿ ಅವರು ಬೆಂಗಳೂರಿಗೆ ಬಂದಿದ್ದರು. ಹಿಂದಿರುಗುವಾಗ ಮತ್ತೆ ಏಳುದಿನಗಳ ಕಷ್ಟಕರ ಪ್ರಯಾಣ ಅವರಿಗೆ ಕಾದಿತ್ತು. ಅವರ ಭಕ್ತಿಯನ್ನು ಬಾಬಾ ಮೆಚ್ಚಿದರು. ಪ್ರಾರ್ಥನಾ ಮಂದಿರದಲ್ಲಿ ಅವರಿಗೆ ದರ್ಶನವಿತ್ತು ಒಂದು ಸಣ್ಣ ಆಧ್ಯಾತ್ಮಿಕ ಪ್ರವಚನ ನೀಡಿದರು. ಪವಿತ್ರ ವಿಭೂತಿಯಿಂದ ಅವರ ಕೈಗಳನ್ನು ತುಂಬಿದರು. ಆ ತಂಡದಲ್ಲಿ ಲಖೀ ಎಂಬ ಹೆಣ್ಣುಮಗಳಿದ್ದಳು. ಅವಳಿಗೆ ಎರಡನೆಯ ಸಾರಿ ಇನ್ನಷ್ಟು ವಿಭೂತಿಯನ್ನು ಕೊಟ್ಟು "ಇದು ಬೆಕ್ಕಿಗೆ" ಎಂದರು.

ಅದು ಮಿಂಕಿ. ಮಳೆಗಾಲದಲ್ಲೊಂದು ದಿನ ತುಂಬಿ ಹರಿಯುತ್ತಿದ್ದ ಚರಂಡಿಯೊಂದರಲ್ಲಿ ಕೊಚ್ಚಿ ಹೋಗುತ್ತಿದ್ದ ಮಿಂಕಿಯನ್ನು ಅವಳು ಎತ್ತಿಕೊಂಡು ಬಂದಳು. ಕಾವು ಕೊಟ್ಟು, ಆಹಾರ ಉಣಿಸಿದಳು. ಆದರೆ ಬೆಕ್ಕಿನ ಮರಿಯನ್ನು ತಂದಿದ್ದು ಲಿಖಿಯ ಅಕ್ಕನಿಗೆ ಸಹಿಸಲಿಲ್ಲ. ಅವಳು ಆ ನಗರದ ಅತಿ ದೊಡ್ಡ ಆಸ್ಪತ್ರೆಯೊಂದರಲ್ಲಿ ನರ್ಸ್. ಬೆಕ್ಕುಗಳೆಂದರೇ ಆಕೆಗೆ ಸ್ವಲ್ಪವೂ ಇಷ್ಟವಾಗುತ್ತಿರಲಿಲ್ಲ. ಈ ಭಯಂಕರ ಪ್ರಾಣಿಯನ್ನು ಮನೆಗೆ ತಂದು ಸಾಗಿಕೊಂಡಿರುವುದಕ್ಕಾಗಿ ಅವಳು ಲಖಿಯನ್ನು ಬಯ್ದಳು. ಒಂದು ರಾತ್ರಿ ಕೆಲವು ಅತಿಥಿಗಳು ಊಟಕ್ಕೆ ಬಂದಿದ್ದಾಗ ಬೆಕ್ಕಿನ ಮರಿಯು ಮೆಲ್ಲಗೆ ಅಡಿಗೆ ಮನೆಗೆ ನುಸುಳಿ ಒಂದು ಮೀನನ್ನು ಕಚ್ಚಿಕೊಂಡು ಓಡಿಬಿಟ್ಟಿತು. ಅಕ್ಕನಿಗೆ ಇದರಿಂದ ಎಂಥ ಕೋಪ ಬಂದಿತೆಂದರೆ ಜಗಳ ತೆಗೆದು ತಂಗಿಯ ಮೇಲೆ ಹರಿಹಾಯ್ದಳು. ಹೀನಾಮಾನವಾಗಿ ಬೈದು ಕೂಗಾಡಿದಳು. ಲಖಿಗೆ ಇದನ್ನುಇನ್ನು ಸಹಿಸುವುದು ಸಾಧ್ಯವಾಗಲಿಲ್ಲ. ಮಿಂಕಿಯ ಕುತ್ತಿಗೆಯನ್ನು ಹಿಡಿದು ಒಂದು ಉದ್ದನೆ ಕೋಲಿನಿಂದ ರಪರಪನೆ ಬಡಿದಳು. ಪಾಪ, ಆ ಬಡ ಪ್ರಾಣಿ ನೋವು ತಡೆಯಲಾರದೆ ನರಳಿತು, ಕಿರಿಚಿತು. ಇದ್ದಕ್ಕಿದ್ದಂತೆ ಮನೆಯ ಬೇರೆ ಬೇರೆ ಕಡೆ ಗೋಡೆಯ ಮೇಲಿದ್ದ ಸಾಯಿಬಾಬಾ ಅವರ ಚಿತ್ರಪಟಗಳು - ಒಟ್ಟು ಹದಿನಾರು ಇದ್ದವು. ಗುರುವಾರದ ಭಜನೆಯ ಸಮಯದಲ್ಲಿ ಹಾಕಿದ್ದ ಹೂಮಾಲೆಗಳು ಹಾಗೆಯೇ ಇದ್ದುವು - ದಿಢೀರನೆ ನೆಲಕ್ಕೆ ಬಿದ್ದುವು ! ಬಂದಿದ್ದ ಅತಿಥಿಗಳೆಲ್ಲ ಮನೆಯಿಂದ ಹೊರಕ್ಕೆ ಅಂಗಳಕ್ಕೆ ಓಡಿಬಿಟ್ಟರು. ಭೂಕಂಪ ಆಗುತ್ತಿದೆ ಎಂದು ಅವರು ಗಾಬರಿಗೊಂಡಿದ್ದರು.

ಆದರೆ ಅಕ್ಕನಿಗೆ ಅಲ್ಲೊಂದು ವಿಚಿತ್ರ ಗಮನಕ್ಕೆ ಬಂದಿತು. ಗೋಡೆಗಳ ಮೇಲೆ ಹಾಕಿದ್ದ ಬಾಬಾ ಅವರ ಪಟಗಳು ಮಾತ್ರ ಕೆಳಕ್ಕೆ ಬಿದ್ದಿದ್ದುವು ; ಮಿಕ್ಕವೆಲ್ಲ ಗೋಡೆಗಳ ಮೇಲೆಯೇ ಮೊದಲಿನಂತೆಯೇ ಇದ್ದುವು ! ಆಗ ಅವಳಿಗೆ ಅದು ಬೆಕ್ಕನ್ನು ರಕ್ಷಿಸುವುದಕ್ಕಾಗಿ ಬಾಬಾ ಸೂಚನೆ ಕೊಡುತ್ತಿದ್ದಾರೆ ಎನಿಸಿತು. ತಂಗಿಗೆ ಕೂಗಿ ಹೇಳಿದರು : "ಲಖೀ, ನಿಲ್ಲಿಸು, ನಿಲ್ಲಿಸು ! ಅದನ್ನು ಕೊಂದು ಬಿಡಬೇಡ! ಬಾಬಾಗೆ ನಮ್ಮ ಮೇಲೆ ಕೋಪ ಬಂದಿದೆ " ಲಖಿಯು ಮಿಂಕಿಯನ್ನು ಮೇಜಿನ ಮೇಲೆ ಇರಿಸಿದಳು. ಅವಳ ದುಃಖವನ್ನು ಕಡಿಮೆಮಾಡಲು ಬೆಕ್ಕು ಪ್ರಯತ್ನಿಸಿತು. ಹೊರಗೆ

ಓಡಿಹೋಗಿದ್ದ ಅತಿಥಿಗಳು ಈಗ ಒಳಕ್ಕೆ ಬಂದಿದ್ದರು. ಬೆಕ್ಕು ಮೊದಲಿನಂತಾಗಲು ಪ್ರಯತ್ನಿಸುತ್ತಿರುವುದನ್ನು ಅವರು ನೋಡಿದರು. ಅದೋ ! ಅಲ್ಲಿ ! ಮಿಂಕಿಯು ಮೈ ಒದರಿದರೆ ಮಧುರವಾದ ಪರಿಮಳವು ಸೂಸುತ್ತಿದ್ದ ವಿಭೂತಿಯು ಮೈಗೂದಲಿನಿಂದ ಹಾರಿತು. ಮೇಜಿನ ಮೇಲೆ ದಟ್ಟವಾಗಿ ಉದುರಿತು ! ಭಗವಾನರು ಮಿಂಕಿಯನ್ನು ಅನುಗ್ರಹಿಸಿದ್ದಾರೆ ಎಂಬುದನ್ನು ಪರಿಮಳವೇ ಘೋಷಿಸಿತು.

ಆರು ತಿಂಗಳಾದ ಮೇಲೆ ನವೆಂಬರ್ 23ರಂದು ಅಸ್ಸಾಮಿನ ಇತರ ಅನೇಕ ಭಕ್ತರ ಜೊತೆಯಲ್ಲಿ ಲಖಿಯು ಪ್ರಶಾಂತಿ ನಿಲಯದ ಪ್ರಾರ್ಥನಾ ಮಂದಿರದಲ್ಲಿದ್ದಾಗ ಭಗವಾನರು ತಮ್ಮ ಅಪಾರವಾದ ಕರುಣೆಯಿಂದ ಅಮೂಲ್ಯ ವಿಭೂತಿ ಪ್ರಸಾದವನ್ನು ಮಿಂಕಿಗಾಗಿ ಕೊಟ್ಟರು. ಎಲ್ಲಿ ಯಾವಾಗ ನಾವು ಪ್ರೀತಿಯ ಮಾರ್ಗವನ್ನು ತೊರೆದಿದ್ದೇವೆ, ಪ್ರೀತಿಯನ್ನು ನಿರಾಕರಿಸಿದ್ದೇವೆ ಎಂಬುದರ ಅತಿ ಸೂಕ್ಷ್ಮ ವಿವರವನ್ನು ಕೂಡ ಭಗವಾನರು ಆ ಕ್ಷಣವೇ ಅರಿತಿರುತ್ತಾರೆ. ನಮ್ಮ ಎಚ್ಚರಿಸುತ್ತಾರೆ. ಅವರ ಅಭಯ ಹಸ್ತವು ಕಾಲದೇಶಗಳ ನಿರ್ಬಂಧವನ್ನು ದಾಟಿ ನಿಂತಿದೆ. ಅವರೆ ಮಾದರಿಯಾಗಿ ನಡೆದುಕೊಂಡು ಸಕಲ ಜೀವಿಗಳಿಗೂ, ಅದು ಮನುಷ್ಯನಾಗಲಿ, ಪ್ರಾಣಿಯಾಗಲಿ, ಪಕ್ಷಿಯಾಗಲಿ, ಸಸ್ಯವಾಗಲಿ ಒಳಿತನ್ನು ಬಯಸಬೇಕು ಎಂದು ನಮಗೆ ಬೋಧಿಸುತ್ತಾರೆ. ಅವರ ಪ್ರೇಮಕ್ಕೆ ಎಲ್ಲೆಯಿಲ್ಲ. ಏಕೆಂದರೆ ಅವರು ಸರ್ವತ್ರ ಇದ್ದಾರೆ.

72ರ ಕ್ರಿಸ್‌ಮಸ್, ವಿಶ್ವ ಕ್ರೈಸ್ತನ ಕಲ್ಪನೆಯನ್ನು ಬಾಬಾ ಇನ್ನಷ್ಟು ವಿಸ್ತರಿಸಿ ಹೇಳಿದರು. ಕ್ರೈಸ್ತ ಪ್ರಜ್ಞೆಯ ಅರ್ಥವನ್ನು ವಿಸ್ತರಿಸಿ, "ನಾನೂ ನನ್ನ ತಂದೆಯೂ ಒಬ್ಬರೇ" ಎಂಬ ಕ್ರಿಸ್ತನ ಘೋಷಣೆಯ ತನಕ ಕೊಂಡೊಯ್ದರು. ಇದೇ ಅತ್ಯುನ್ನತ ಅದ್ವೈತ ಅನುಭವದ ಸಾರ. "ಇದೇ ಯೇಸುಕ್ರಿಸ್ತನ ಸತ್ಯ ಸ್ವರೂಪ ಹಾಗೂ ನಿಮ್ಮ ಒಬ್ಬೊಬ್ಬರ ಸತ್ಯವೂ ಹೌದು. ನೀವೆಲ್ಲರೂ ಮೂಲಭೂತವಾಗಿ ಕ್ರಿಸ್ತರೇ ಆಗಿದ್ದೀರಿ".

1973ರ ಜನವರಿ 5ನೇ ತಾರೀಕು ಬಾಬಾ ಬೆಂಗಳೂರಿನಲ್ಲಿ ಎಎಸ್‌ಸಿ ಸೇನಾ ಸಿಬ್ಬಂದಿಯನ್ನು ಉದ್ದೇಶಿಸಿ ಮಾತನಾಡಿದರು. ಸಶಸ್ತ್ರ ಸೈನ್ಯ ಪಡೆಯ ಸದಸ್ಯರನ್ನು ಕುರಿತು ಮಾತನಾಡುವ ಯಾವುದೇ ಸಂದರ್ಭ ಬಂದರೂ ಅವರು ತಪ್ಪಿಸಿಕೊಳ್ಳುವುದಿಲ್ಲ. ಏಕೆಂದರೆ ಆ ಜನರು ತಾವು ಯಾವ ನಾಡನ್ನು ರಕ್ಷಿಸಲು ಕಂಕಣ ಕಟ್ಟಿ ನಿಂತಿದ್ದಾರೋ ಆ ನಾಡಿನ ವೈಭವವನ್ನು ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕೆಂದು ಬಾಬಾ ಬಯಸುತ್ತಾರೆ. ಅವರ ಹೃದಯಗಳಲ್ಲಿ ಸ್ಫೂರ್ತಿ ಉತ್ಸಾಹಗಳನ್ನು, ಧೈರ್ಯವನ್ನು ತುಂಬುತ್ತಾರೆ. ಎಲ್ಲೇ ಇರಲಿ, ಎಷ್ಟೇ ದೂರದಲ್ಲಿರಲಿ ಅವರಲ್ಲಿ ಒಬ್ಬೊಬ್ಬರ ಜೊತೆಗೂ ತಾನು ಇರುವುದು ಸಾಧ್ಯ, ಇರುತ್ತಾರೆ. ಆದ್ದರಿಂದ ಅವರು ಒಬ್ಬೊಬ್ಬರೂ ಬಾಬಾರನ್ನು ಹಂಬಲಿಸುತ್ತಾರೆ. ಜನವರಿ 14ನೆಯ ತಾರೀಕು ಭಕ್ತರ ಭಾರೀ ಸಮೂಹವೊಂದನ್ನು ಉದ್ದೇಶಿಸಿ ಬಾಬಾ ಬೋಧಿಸಿದರು. "ಭಗವಂತನ ಕರ ಕೌಶಲ್ಯವನ್ನು, ಈ ವಿಶ್ವವೆಂದು ಕರೆಯುವ ಅವನ ಶಕ್ತಿ, ಪ್ರೇಮ, ಬುದ್ಧಿ ಶಕ್ತಿಗಳ ಅಭಿವ್ಯಕ್ತಿಯನ್ನು ನೋಡಿ ಬೆರಗುಗೊಳ್ಳಿರಿ, ಅದನ್ನು ಭಕ್ತಿಯಿಂದ ನೋಡಿರಿ. ಇದೆಂಥ ವಿಶ್ವ ! ಇದರ ವಿಶಾಲ ಭಿತ್ತಿಯ ಮೇಲೆ ನಿರೂಪಿತವಾಗಿವೆ ಅನಂತ ಆಕಾಶ, ಅಗಾಧವಾದ ನೆಬ್ಯೂಲಾಗಳು,

ಗ್ರಹ ನಕ್ಷತ್ರಗಳು, ಉಪಗ್ರಹಗಳು, ಧೂಮಕೇತುಗಳು, ಪಕ್ಷಿಗಳು, ಪ್ರಾಣಿಗಳು, ಕೀಟಗಳು, ಸಸ್ಯಗಳು ಎಲ್ಲ ಯಥೋಚಿತವಾಗಿ ನಿರೂಪಣೆಗೊಂಡಿವೆ. ಅವೆಲ್ಲ ನಿಮಗೆ ಪಾಠ ಕಲಿಸಬಲ್ಲುವು, ನಿಮ್ಮಲ್ಲಿ ಸ್ಫೂರ್ತಿ ತುಂಬಬಲ್ಲುವು."

ಜನವರಿಯಲ್ಲಿ ಬಾಬಾ ಮದರಾಸಿನ ಗಿಂಡಿಗೆ ಹೋದರು. 25 ವರ್ಷಗಳ ಹಿಂದೆ ಶಿರ್ಡಿ ಸಾಯಿಬಾಬಾ ಅವರ ಒಂದು ವಿಗ್ರಹವನ್ನು ಅವರು ಅಲ್ಲಿ ಪ್ರತಿಷ್ಠಾಪಿಸಿದ್ದರು. ಅದೇ ದೇವಾಲಯದಲ್ಲಿ ಒಂದು ಐತಿಹಾಸಿಕ ಸ್ತಂಭವನ್ನು ಅನಾವರಣ ಮಾಡುವುದು ಈ ಭೇಟಿಯ ಉದ್ದೇಶ. ಈ ಸ್ತಂಭದ ತಳಹದಿಯ ಮುಖಗಳಲ್ಲಿ ಮಾನವನ ಪುನರುತ್ಥಾನಕ್ಕೆ ಭಗವಾನರು ನೀಡಿರುವ ಸೂಚನೆಗಳನ್ನು ಕೆತ್ತಲಾಗಿದೆ.

## ಕಕ್ಕರ ಹಳ್ಳದ ಲಿಂಗ

ಪ್ರಶಾಂತಿ ನಿಲಯಕ್ಕೆ ಶಿವರಾತ್ರಿಯ ಸಂದರ್ಭಕ್ಕೆ ಬರುವ ಯಾತ್ರಿಕರಲ್ಲಿ ಅರ್ಧ ಜನರಿಗೂ ಸಾಲುವುದಿಲ್ಲ. ಅಲ್ಲಿರುವ ಷೆಡ್‌ಗಳು. ಆಗ ಅಲ್ಲಿ ಮೂರು ಮಾತ್ರ ಇದ್ದವು. ಆದ್ದರಿಂದ ಭಗವಾನರು ಆ ಸಂದರ್ಭಕ್ಕೆ ಕರ್ನಾಟಕದ ಗಡಿಯಲ್ಲಿರುವ ಬಂಡೀಪುರಕ್ಕೆ ಕಾರಿನಲ್ಲಿ ಒಂದು ಬಿಟ್ಟರು. ಆ ಅರಣ್ಯದ ಸಂರಕ್ಷಣಾಧಿಕಾರಿಯು ಅಲ್ಲೇ ಸಮೀಪದ ಕಕ್ಕರಹಳ್ಳ ತೊರೆಯ ಬಳಿ ಒಂದು ಗಲಾಟೆಯಿಲ್ಲದ ನಿಶ್ಶಬ್ದವಾದ ಸ್ಥಳವಿದೆ ಎಂದು ಸುದ್ದಿ ಕೊಟ್ಟರು. ಅಲ್ಲಿ ಒಣ ಮರಳಿನ ಹಾಸು ಕೂಡ ಇತ್ತು. ತಾವೇ ಆರಿಸಿ ಕರೆತಂದಿದ್ದ ಕೆಲವು ಜನ ಭಕ್ತರೊಂದಿಗೆ ಬಾಬಾ ವ್ಯಾನಿನಲ್ಲಿ ಕಾಡಿನೊಳಕ್ಕೆ ಹೋದರು. ಕೆಲವೇ ನಿಮಿಷಗಳ ಹಿಂದೆ ಹನ್ನೆರಡು ಆನೆಗಳ ಒಂದು ತಂಡವನ್ನು ಅಲ್ಲಿ ಗುರುತಿಸಲಾಗಿತ್ತು. ಆದರೆ ಅವು ಕೂಡ ಈಗ ಅಲ್ಲಿಂದ ಕಾಲ್ತೆಗೆದಿದ್ದವು. ಭಗವಾನರು ವ್ಯಾನಿನಿಂದ ಕೆಳಗಿಳಿದು ಅಲ್ಲೇ ಪಕ್ಕದಲ್ಲಿ ಬೆಳೆದಿದ್ದ ಒಂದು ಕಾಡು ಗಿಡದಿಂದ ಕಡ್ಡಿಯನ್ನು ಮುರಿದುಕೊಂಡರು. ಸುಮಾರು ಒಂದು-ಒಂದೂವರೆ ಅಂಗುಲ ಉದ್ದ ಒಂದು ತುಣುಕನ್ನೂ ಅದರ ಅರ್ಧ ಉದ್ದದ ಇನ್ನೊಂದು ತುಂಡನ್ನು ತೆಗೆದುಕೊಂಡು ಒಂದರ ಮೇಲೆ ಇನ್ನೊಂದನ್ನು ಅಡ್ಡಡ್ಡಲಾಗಿಟ್ಟು ನಾರಿನಿಂದ ಕಟ್ಟಿದರು. ಈಗ ಅದು ಶಿಲುಬೆಯಾಯಿತು. ಅದನ್ನು ಇನ್ನೇನು ಜಾನ್ ಹಿಸ್ಲಾಪರ ತೆರೆದ ಕೈಗಳಿಗೆ ಕೊಡಬೇಕು, ಅಷ್ಟರಲ್ಲಿ ಬಾಬಾ ತಡೆದರು' ಇಲ್ಲ ! ನಿನಗೆ ಬೇರೊಂದನ್ನು ಕೊಡಬೇಕು" ಎಂದರು. ಆ ಕಡ್ಡಿಯ ಶಿಲುಬೆಯನ್ನು ಕೈಯಲಿಟ್ಟುಕೊಂಡು ಅದರ ಮೇಲೆ ಊದಿದರು. ಒಡನೆಯೇ ಅದು ಅಷ್ಟೇ ಉದ್ದ ಅಗಲಗಳ ಒಂದು ಮರದ ಶಿಲುಬೆಯಾಗಿ ಮಾರ್ಪಟ್ಟಿತು. ಅದರ ನಡುವೆ ಏಸುಕ್ರಿಸ್ತನ ಬೆಳ್ಳಿಯ ವಿಗ್ರಹವೊಂದು ಕಾಣಿಸಿಕೊಂಡಿತು. "ಜೀಸಸ್‌ನನ್ನು ಯಾವ ಮರದ ಶಿಲುಬೆಯ ಮೇಲೆ ಏರಿಸಿದ್ದರೋ ಅದೇ ಮರದಿಂದ ಆಗಿರುವ ಶಿಲುಬೆಯಿದು. ಆಗ ಯೇಸುವು ಶಿಲುಬೆಯ ಮೇಲೆ ಹೇಗೆ ಇದ್ದನೋ ಅದರ ನಿಜವಾದ ರೂಪ ಇದು" ಎಂದು ಹೇಳಿ ಅದನ್ನು ಮಂಡಿಯೂರಿ ಕಣ್ಣೀರು ತುಂಬಿ ಬೊಗಸೆಯೊಡ್ಡಿ ಕುಳಿತಿದ್ದ ಹಿಸ್ಲಾಪರಿಗೆ ಬಾಬಾ ಕೊಟ್ಟರು. (ಮುಂದೆ ಹಿಸ್ಲಾಪ್ ಆ ಶಿಲುಬೆಯನ್ನು ವೃಕ್ಷ ತಜ್ಞರಿಂದ ಪರೀಕ್ಷೆ ಮಾಡಿಸಿದರು. ಅದು ಕೊನೆಯ ಪಕ್ಷ 20 ಶತಮಾನ ಹಿಂದಿನ ಮರವಾಗಿತ್ತು. ಬೆಳ್ಳಿಯ ವಿಗ್ರಹದ ಭಾವಚಿತ್ರ ತೆಗೆಸಿ ಅದನ್ನು ದೊಡ್ಡದು ಮಾಡಿಸಿ ನೋಡಿದರು. ಹುಬ್ಬುಗಳ ಮೇಲೆ ಬೆವರಿನ ಹನಿಗಳ ಗುರುತು, ಕಟಬಾಯಿಯಲ್ಲಿ

ಸೊರೆಯ ಗುರುತುಗಳು ಕೂಡ ಇದ್ದುವು. ಅದು ಧೈರ್ಯದಿಂದ ಸಹಿಸುವ ಯಾತನೆಯ ಗುರುತುಗಳಾಗಿದ್ದವು. ಅನಂತರ ಬಾಬಾ ನದಿಯ ದಂಡೆಯ ಮೇಲೆ ನಡೆಯುತ್ತಾ ಮರಳ ಮೇಲೆ ಕುಳಿತರು. ಅವರ ಜೊತೆಯಲ್ಲಿ ಹೋಗಿದ್ದವರೆಲ್ಲರೂ ಕುಳಿತರು. ಜೊತೆಗೆ ಬಂಡೀಪುರದ ವಾರ್ಡನ್, ರಕ್ಷಣಾಗಾರ್ಡುಗಳು ಹಾಗೂ ತಮ್ಮದೇ ಪ್ರಪಂಚದಲ್ಲಿ ಏನೋ ಸಂಭವಿಸುತ್ತಿದೆಯೆಂದು ಆಸಕ್ತಿಯಿಂದ ನೋಡಲು ಬಂದ ಕೆಲವು ಆದಿವಾಸಿ ಜನ.

ಜಗಲಿಯಂತೆ ರಾಶಿಮಾಡಿದ ಮರಳಿನೊಳಗಿನಿಂದ ಬಾಬಾ ಒಂದು ಥಳಥಳಿಸುವ ಪಾರದರ್ಶಕ ಲಿಂಗವನ್ನು ಸೃಷ್ಟಿಸಿ ತೆಗೆದರು. ಉದ್ದ ಐದು ಅಗಲ, ಅಗಲ ನಾಲ್ಕು ಅಂಗುಲ ಇದ್ದ ಆ ಲಿಂಗವು ಎಂಟು ಅಂಗುಲ ಎತ್ತರದ ಪೀಠದ ಮೇಲಿತ್ತು. "ಪೂಜೆಗೊಳ್ಳುತ್ತಿದ್ದ ಕೈಲಾಸದಿಂದ ನೇರವಾಗಿ ಬಂದಿದೆ. ಗಂಧವನ್ನು ನೋಡಿ, ಕುಂಕುಮ, ಬಿಲ್ವಪತ್ರೆಗಳನ್ನು ನೋಡಿ" ಎಂದರು ಬಾಬಾ. ಮರಳಿನಿಂದ ಶಿರ್ಡಿಯ ಸಾಯಿಬಾಬಾ ಅವರ ಮೂರ್ತಿ, ಲಕ್ಷ್ಮಿಯ ವಿಗ್ರಹ, ದುರ್ಗೆಯ ಇನ್ನೊಂದು ವಿಗ್ರಹಗಳನ್ನು ಸೃಷ್ಟಿಸಿದರು. ಕೊನೆಯದಾಗಿ ನೆರೆದಿದ್ದವರೆಲ್ಲ ಬೆಕ್ಕಸ ಬೆರಗಾಗುವಂತೆ ಅಮೃತವು ತುಂಬಿದ್ದ ಒಂದು ಬಿಂದಿಗೆಯನ್ನು ಸೃಷ್ಟಿಸಿದರು. ಅದರ ಸಿಹಿ ಕಲ್ಪನಾತೀತ, ಅದರ ಪರಿಮಳ ದಿವ್ಯ ಮಧುರ. ಅವರ ಸುತ್ತ ಗುಪ್ಪೆಯಾಗಿ ಕುಳಿತಿದ್ದ ಆದಿವಾಸಿಗಳಿಗೂ ಅವರ ಕೈಯಿಂದಲೇ ಪ್ರಸಾದ ದೊರಕಿತು.

ಮಾರನೆಯ ದಿನ ಲಿಂಗವನ್ನು ಬೃಂದಾವನದಲ್ಲಿ ಇಟ್ಟು ಬೃಹತ್ ಸಂಖ್ಯೆಯಲ್ಲಿ ಭಕ್ತರು ಅದನ್ನು ಪೂಜಿಸಲು ಅವಕಾಶ ಮಾಡಿಕೊಟ್ಟರು ಬಾಬಾ. ಲಿಂಗಕ್ಕೆ ಅಭಿಷೇಕ ಮಾಡುವಾಗ ಶಿವನನ್ನು ಸ್ತುತಿಸುವ ರುದ್ರಾಧ್ಯಾಯವನ್ನು ಪಠಿಸುವ ಸಂತೋಷ ನನ್ನ ಪಾಲಿಗೆ ಬಂದಿತು. ಬಾಬಾ ಒಂದು ಸಾರಿ ಕೈ ಆಡಿಸಿ ಹಿಮಾಲಯದಲ್ಲಿ ಗಂಗೋದ್ಭವವಾಗುವ ಪುಣ್ಯಸ್ಥಳದಿಂದಲೇ ತರಿಸಿದ ಪವಿತ್ರ ಜಲದಿಂದ ಲಿಂಗಕ್ಕೆ ಕೈಯಾರ ಅಭಿಷೇಕ ಮಾಡುವ ಪುಣ್ಯ ನನ್ನದಾಯಿತು. ಅದನ್ನು ಈಗಲೂ ರೋಮಾಂಚಿತನಾಗಿ ನೆನೆಯುತ್ತೇನೆ.

## ವೀರರ ನಾಡು

ದೆಹಲಿ, ಪಂಜಾಬ್, ಹರ್ಯಾನಾ ಮತ್ತು ಹಿಮಾಚಲ ಪ್ರದೇಶಗಳ ನಿವಾಸಿಗಳ ಕರೆಗೆ ಬಾಬಾ ಓಗೊಟ್ಟರು. ಮೊದಲು ದೇಶದ ಗಡಿಯಲ್ಲಿರುವ ಮೋಘಾ ನಗರಕ್ಕೆ ಭೇಟಿ ನೀಡಿದರು. ಅವರು ಅಲ್ಲಿ ಮಾರ್ಚಿ 15 ಮತ್ತು 16ರಂದು ಇದ್ದರು. ಅಲ್ಲಿ ಮುರಳೀಧರ ಆಸ್ಪತ್ರೆಯನ್ನು ಉದ್ಘಾಟಿಸಿದರು. ಅವರ ದರ್ಶನ ಪಡೆಯಲು ಎರಡು ಲಕ್ಷಕ್ಕಿಂತಲೂ ಹೆಚ್ಚು ಜನರು ನೆರೆದಿದ್ದರು. ಈ ಅದ್ಭುತ ಘಟನೆಯನ್ನು ಕಣ್ಣಾರೆ ನೋಡಿದ ಸೋಹನ್‌ಲಾಲ್ ಹೇಳಿದರು : "ಬಾಬಾ ಬರುತ್ತಾರೆ ಎಂಬ ಸುದ್ದಿ ಎಷ್ಟು ಕಡಿಮೆ ಸಮಯದಲ್ಲಿ ಎಷ್ಟು ವೇಗವಾಗಿ ದಿಕ್ಕುದಿಕ್ಕಿಗೆ ಬಾಯಿಂದ ಬಾಯಿಗೆ ಹರಡುತ್ತದೆನ್ನುವುದು ಅತ್ಯಂತ ಆಶ್ಚರ್ಯಕರವಾದ ಸಂಗತಿ." ಬಾಬಾ ಅಲ್ಲಿ ಭಕ್ತರಿಗೆ ಬುದ್ಧಿವಾದ ಹೇಳಿದರು : "ಪಂಜಾಬು ಪರಾಕ್ರಮಕ್ಕೆ ಖ್ಯಾತಿ ಪಡೆದಿರುವ ನಾಡು. ಅದು ಭಗವಂತನಲ್ಲಿ ಇರಿಸಿದ ನಂಬಿಕೆಯಿಂದ ಮೂಡುವ ಆಧ್ಯಾತ್ಮಿಕ ಪರಾಕ್ರಮಕ್ಕೂ ಹೆಸರಾಗಬೇಕು. ಅಲುಗಾಡದ ಬುದ್ಧಿ ಶಕ್ತಿ, ಸಮತೋಲನವಿರುವ ಮನಸ್ಸುಗಳನ್ನು ನೀಡೆಂದು ದೇವರನ್ನು ಪ್ರಾರ್ಥಿಸಿರಿ".

ಬಾಬಾ ಮೋಘಾನಗರದಿಂದ ಕಾರಿನಲ್ಲಿ ಸಿಮ್ಲಾಕ್ಕೆ ತೆರಳಿದರು. ದಾರಿಯುದ್ದಕ್ಕೂ ನಲವತ್ತು ಸಾವಿರ ಜನ ಆಚೀಚಿನ ಹಳ್ಳಿಗಳಿಂದ, ಬೆಟ್ಟಗಳ ನಡುವಣ ನೆಲೆಗಳಿಂದ ಬಂದು ನೆರೆದಿದ್ದರು. ಅಷ್ಟು ಬೃಹತ್ ಸಂಖ್ಯೆಯಲ್ಲಿ ಜನರು ನೆರೆದಿದ್ದುದು ಸಿಮ್ಲಾದ ಇತಿಹಾಸದಲ್ಲೇ ನೆನಪಿರದ ಘಟ್ಟ. ಮಾನವ ಬಾಹ್ಯಾಕಾಶವನ್ನು ಕ್ರಮಿಸಿದ್ದಾನೆ, ಸಾಗರದಾಳಗಳನ್ನು ಅನ್ವೇಷಿಸಿದ್ದಾನೆ, ಆದರೆ ಈ ಭೂಮಿಯ ಮೇಲೆ ಶಾಂತಿಯಿಂದ ಇರುವುದು ಹೇಗೆ ಎನ್ನುವುದನ್ನು ಅವನಿನ್ನೂ ಕಲಿತಿಲ್ಲ. ಅವುಗಳನ್ನು ಸಂಪಾದಿಸುವ ಬಗೆಯನ್ನೂ ಅವನು ಕಲಿತಿಲ್ಲ - ಎಂದು ಅವರಿಗೆ ಹೇಳಿದರು ಬಾಬಾ. ಕ್ಷುಲ್ಲಕವಾದ ಆಸೆಗಳನ್ನು ಅಲ್ಪಕಾಲಿಕವಾದ ಸುಖಗಳನ್ನು ಹುಡುಕಿಕೊಂಡು ಅವನು ಪರದಾಡುತ್ತಾನೆ. "ಉಪದೇಶ ಮಾಡುವವರು ಬೇಕಾದಷ್ಟು ಮಂದಿ ಇದ್ದಾರೆ. ಆಚರಣೆಯಲ್ಲಿ ತೋರಿಸುವವರೀಗ ಬಹು ಕಡಿಮೆ ಜನ" ಎಂದರು ಬಾಬಾ. ಮೇಲು ಮೇಲಿನ ಲಾಭಗಳಿಗಿಂತ ಮೂಲಭೂತ ಲಾಭ ಯಾವುದಿದೆಯೋ ಅದರ ಮೇಲೆ ಗಮನವನ್ನು ಕೇಂದ್ರೀಕರಿಸಬೇಕೆಂದು ಬುದ್ಧಿವಾದ ಹೇಳಿದರು. ಮಾರನೆಯ ದಿನ ಅವರು ಎರಡು ಉಪನ್ಯಾಸಗಳನ್ನು ನೀಡಿದರು. ಒಂದು ಬೆಟ್ಟದೇಣಿನ ಒಂದು ಸ್ಥಳದಲ್ಲಿ, ಇನ್ನೊಂದು ಅವರು ತಂಗಿದ್ದ ವಸತಿ 'ವುಡ್‌ವಿಲ್'ಗೆ ಸೇರಿದ ಬಯಲಿನಲ್ಲಿ. ಇನ್ನೊಂದು ದಿನ ಮಂಜು ಮುಸುಕಿದ ಮಾರ್ಗದಿಂದ ಆಚೆಗಿರುವ ಕುಫ್ರಿ ಮತ್ತು ಫಗು ಹಳ್ಳಿಗಳಿಗೆ ಭೇಟಿ ಕೊಟ್ಟರು. ಬೆಳ್ಳಿ ಮುಸುಕು ಧರಿಸಿದ ಹಿಮಾಲಯ ಶಿಖರಗಳ ಅದ್ಭುತ ಭವ್ಯ ನೋಟವು ಈ ಹಳ್ಳಿಗಳಿಂದ ಕಾಣಸುತ್ತದೆ. ಮಂಡಿ ಹೂತುಹೋಗುವಷ್ಟು ಎತ್ತರ ಹಿಮ ಚೆಲ್ಲಿದರೂ ಸುಮಾರು 200 ಜನ ಗಂಡಸರು ಹೆಂಗಸರು ಭಗವಾನರ ಹಿಂದೆ ಹೋದರು. ಸ್ವಲ್ಪ ಮಂಜನ್ನು ಕೈಗೆತ್ತಿಕೊಂಡ ಬಾಬಾ ಅದನ್ನು ಒಂದು ಜೋಡಿ ಚಿನ್ನದ ಕಿವಿಯುಂಗುರಗಳನ್ನಾಗಿ ಪರಿವರ್ತಿಸಿ ಒಬ್ಬ ಆದಿವಾಸಿ ಹುಡುಗಿಗೆ ಕೊಟ್ಟರು. ಅನೇಕರಿಗೆ ವಿಭೂತಿ ಕೊಟ್ಟು ಅನುಗ್ರಹಿಸಿದರು. ಇನ್ನೊಬ್ಬ ಮುದುಕಿಗೆ ಒಂದು ಉಂಗುರ. ಹಿಮಾಚಲ ಪ್ರದೇಶಕ್ಕೆ ಭಗವಂತನು ನೀಡಿದ ಭೇಟಿ ಅನೇಕರ ಜೀವನಗಳಲ್ಲಿ ಒಂದು ತಿರುಗು ಬಿಂದುವಾಗಿ ಪರಿಣಮಿಸಿತು. ಅಲ್ಲಿಯ ಅನೇಕ ಪಟ್ಟಣ, ಗ್ರಾಮಗಳ ಜನ ತಂಡೋಪತಂಡವಾಗಿ ಪ್ರಶಾಂತಿ ನಿಲಯಕ್ಕೆ ಬರತೊಡಗಿದರು, ಕೆಲವು ದಿನ ಭಗವಾನರ ಸನ್ನಿಧಿಯಲ್ಲಿರುವುದಕ್ಕಾಗಿ.

ದೆಹಲಿಯಲ್ಲಿ ಎರಡು ಲಕ್ಷ ಜನರು ಕುಳಿತುಕೊಳ್ಳಬಹುದಾದಷ್ಟು ದೊಡ್ಡದಾದ ಭಾರಿ ಚಪ್ಪರವನ್ನು ನಿರ್ಮಿಸಲಾಗಿತ್ತು. ಕೆಲವು ದಿನಗಳಲ್ಲಿ ಅದೂ ಸಾಕಾಗುತ್ತಿರಲಿಲ್ಲ. ಪ್ರತಿದಿನ ಬೆಳಗ್ಗೆ ಮತ್ತು ಸಂಜೆ ಭಜನೆಯ ಸಮಯಕ್ಕೆ ಭಗವಾನರು ಅಲ್ಲಿಗೆ ಬರುತ್ತಿದ್ದರು. ನೆರೆದ ಲಕ್ಷಾಂತರ ಮಂದಿಯನ್ನು ಅನುಗ್ರಹಿಸಿದರು, ಕಾಯಿಲೆಯಿದ್ದವರಿಗೆ ವಿಭೂತಿ ಕೊಟ್ಟು ಕೃಪೆ ತೋರಿದರು. ಆರಿಸಿದ ಕೆಲವು ಜನ ವಿಜ್ಞಾನಿಗಳು, ಶಿಕ್ಷಣ ತಜ್ಞರು, ಮತ್ತು ಇತರರ ಒಂದು ಸಮೂಹವನ್ನು ಉದ್ದೇಶಿಸಿ ವಿಜ್ಞಾನ ಭವನದಲ್ಲಿ ಉಪನ್ಯಾಸ ಮಾಡಿದರು. ನೈತಿಕ ಪುನರುಜ್ಜೀವನ ಮತ್ತು ಆ ಪ್ರಕ್ರಿಯೆಯಲ್ಲಿ ವ್ಯಕ್ತಿಯ ಪಾತ್ರವನ್ನು ಕುರಿತು ಅಲ್ಲಿ ಮಾತನಾಡಿದರು. ವೈಯಕ್ತಿಕವಾಗಿ ಮಾತನಾಡಬೇಕು, ಆಶೀರ್ವಾದ ಪಡೆಯಬೇಕು ಎಂದು ಬಯಸಿದ ನೂರಾರು ಜನರಿಗೆ ಅವಕಾಶ ಕೊಟ್ಟು, ಬಾಬಾ ಅವರನ್ನು ಅನುಗ್ರಹಿಸಿದರು.

ಅಲ್ಲಿಂದ ಮುಂದಕ್ಕೆ ಜೈಪುರಕ್ಕೆ ಭಗವಾನರು ಮೊದಲು ನಿರ್ದಿಷ್ಟ ಪಡಿಸಿದಂತೆ ವಿಮಾನದಲ್ಲಿ ಹೋಗದೆ ಕಾರಿನಲ್ಲಿ ಹೋದರು. ಇದರಿಂದಾಗಿ ದಾರಿಯುದ್ದಕ್ಕೂ ಕಾದು ನಿಂತ ಸಾವಿರಾರು ಜನ ಭಕ್ತರಿಗೆ ದರ್ಶನ ಪಡೆಯುವ ಅವಕಾಶ ದೊರೆಯಿತು. ಜೈಪುರದಲ್ಲಿ ಬಾಬಾ ಶ್ರೀ ಸತ್ಯಸಾಯಿ ಮಹಿಳಾ ಕಾಲೇಜಿನ ಕಟ್ಟಡಕ್ಕೆ ಹಾಗೂ ಒಂದು ದೇವಾಲಯಕ್ಕೆ ಶಿಲಾನ್ಯಾಸ ಮಾಡಿದರು. ಐವತ್ತು ಸಾವಿರ ಜನ ನೆರೆದಿದ್ದ ಒಂದು ಸಭೆಯನ್ನು ಉದ್ದೇಶಿಸಿ ನಿಸ್ವಾರ್ಥ ಸೇವೆಯ ಅಗತ್ಯವನ್ನು ಕುರಿತು ಮಾತನಾಡಿದರು.

ಮಾರ್ಚಿ 28ರಿಂದ 30 ರವರೆಗೆ ಬಾಬಾ ಮುಂಬಯಿಯಲ್ಲಿ ತಂಗಿದರು. ನಡುವೆ 28ನೆಯ ತಾರೀಕು ಪುಣೆಗೆ ಒಂದು ಅಲ್ಪಕಾಲಿಕ ಭೇಟಿ ನೀಡಿದರು. ವಲ್ಲಭಭಾಯಿ ಕ್ರೀಡಾಂಗಣದಲ್ಲಿ ಎರಡು ಲಕ್ಷ ಮುಂಬಯಿಗರು ಕಿಕ್ಕಿರಿದಿದ್ದ ಬೃಹತ್ ಸಭೆಯನ್ನು ಉದ್ದೇಶಿಸಿ ಉಪನ್ಯಾಸ ಮಾಡಿದರು. ಅಲ್ಲಿಂದ ಒಂದು ಬಾಡಿಗೆ ವಿಮಾನದಲ್ಲಿ ಗುಜರಾತಿನ ರಾಜಕೋಟೆಗೆ ಹೋದರು. ಅಲ್ಲಿನ ರಾಜಕುಮಾರ್ ಕಾಲೇಜಿನ ಶತಮಾನೋತ್ಸವ ಸಂದರ್ಭದಲ್ಲಿ ಆಶೀರ್ವಾದ ಮಾಡುವುದು, ನವಾನಗರದ ದಿವಂಗತ ಜಾಮ್ ಸಾಹೇಬರ ಸ್ಮರಣಾರ್ಥ ಕಟ್ಟಿದ ಕಾಲೇಜಿನ ದಿಗ್ವಿಜಯ ಸಿಂಗ್ ವಿಭಾಗವನ್ನು ಉದ್ಘಾಟಿಸುವುದು ಅವರ ಕಾರ್ಯಕ್ರಮವಾಗಿತ್ತು. "ಯುವಜನರಿಗೆ ಕಾಲೇಜುಗಳು ಬೇಕು. ಅಲ್ಲಿ ಅವರು ತಮ್ಮದೇ ವಯೋಮಾನದ, ಬೇರೆ ಬೇರೆ ಸಾಮಾಜಿಕ, ಆರ್ಥಿಕ ಹಿನ್ನೆಲೆಗಳಿಂದ ಬಂದ ಇತರರೊಂದಿಗೆ ಬಾಳಲು ಕಲಿಯುತ್ತಾರೆ. ಸಹನೆ, ಸಹಕಾರಗಳನ್ನು ಕಲಿತು, ತಮ್ಮ ಲ್ಲಿ ಹುದುಗಿರುವ ಕಲೆಗಳು, ಪ್ರತಿಭೆಗಳನ್ನು, ಸದ್ಗುಣಗಳನ್ನು ಪ್ರಕಟಿಸಲು ಅವರಿಗೆ ಅವಕಾಶವಾಗುತ್ತದೆ" ಎಂದು ಬಾಬಾ ಅಲ್ಲಿ ನೆರೆದ ಸಭೆಗೆ ನೀಡಿದ ಪ್ರವಚನದಲ್ಲಿ ಹೇಳಿದರು.

## ಶಿವಂ

ತೆಲುಗು ವರ್ಷಾರಂಭ ದಿನದಂದು ಬಾಬಾ ಹೈದರಾಬಾದಿನಲ್ಲಿದ್ದರು, ಪವಿತ್ರ 'ಶಿವಂ' ಮಂದಿರದ ಉದ್ಘಾಟನೆಗಾಗಿ. "ಹೊಸವರ್ಷವು ನಿಮಗೆ ಆನಂದವನ್ನು ತರಲಿ. ಬಡವರಿಗೆ, ಅಂಗವಿಕಲರಿಗೆ, ದೈಹಿಕ ಶ್ರಮದಿಂದ ಬಹಳ ಕಷ್ಟಪಟ್ಟು ಅನ್ನ ಸಂಪಾದಿಸುತ್ತಿರುವವರಿಗೆ ಸೇವೆಗೈಯ್ಯುವುದರಿಂದ ನಿಮಗೆ ಆ ಆನಂದವು ದೊರಕುತ್ತದೆ" ಎಂದರು ಬಾಬಾ. ಹೈದರಾಬಾದಿನ ರಿಮ್ಯಾಂಡ್ ಹೋಂನಲ್ಲಿದ್ದ ಬಾಲಕರನ್ನು ಬಾಬಾ ಆಶೀರ್ವದಿಸಿದರು. "ನನಗೆ ಮಕ್ಕಳೆಂದರೆ ಇಷ್ಟ. ಶಿಸ್ತು ಪಾಲಿಸುವಂತೆ ಅವರನ್ನು ಒತ್ತಾಯಿಸುತ್ತೇನೆ. ಹೆತ್ತವರಿಗೆ ಗೌರವ ತೋರಿಸುವಂತೆ, ಹಿತಮಿತ ಆಹಾರ ಸೇವಿಸುವಂತೆ, ಓದು, ಪ್ರಾರ್ಥನೆ ಹಾಗೂ ಧ್ಯಾನಗಳಿಗೆ ನಿರ್ದಿಷ್ಟ ಸಮಯ ಮೀಸಲಿಡುವಂತೆ ಹೇಳುತ್ತೇನೆ. ಯಾವುದಾದರೂ ಒಂದು ಬಗೆಯ ಸೇವಾಕಾರ್ಯದಲ್ಲಿ ಅವರು ನಿರತರಾಗಬೇಕೆಂದು ಹೇಳುತ್ತೇನೆ"ಎಂದರು.

ಬೇಸಿಗೆ ಶಾಲೆಯಲ್ಲಿ ಬಾಬಾ ಉಪನ್ಯಾಸಗಳಿಗೆ ಆರಿಸಿಕೊಂಡ ವಿಷಯ ಶಂಕರಾಚಾರ್ಯರ ಮೋಹಮುದ್ಗರ ಅಥವಾ ಭಜಗೋವಿಂದಂ. ಜುಲೈ ತಿಂಗಳಲ್ಲಿ ಮತ್ತೆ ಬಾಬಾ ಮುಂಬಯಿಗೆ ಬಂದರು. ಕಿವುಡು ಮಕ್ಕಳ ಕೇಂದ್ರೀಯ ಶಾಲೆ, ಹಾಗೂ ಕೋಳಿವಾಡದ ಸತ್ಯಸಾಯಿ ಸೇವಾ ಕೇಂದ್ರಗಳಿಗೆ

ಭೇಟಿ ನೀಡಿದರು. ಅದು ಸಮಿತಿಯು ದತ್ತು ಸ್ವೀಕಾರ ಮಾಡಿದ ಮೀನುಗಾರರ ಹಳ್ಳಿ. ಪೋರ್ಲಿಯಲ್ಲಿ ಗಿರಣಿ ಕೆಲಸಗಾರರ ಮಕ್ಕಳು ಭಾಗವಹಿಸಿದ್ದ ಒಂದು ಬಾಲವಿಕಾಸ ಕಾರ್ಯಕ್ರಮಕ್ಕೂ ಬಾಬಾ ಹೋದರು.

ದಸರಾ ಸಂದೇಶ ಇತ್ಯಾತ್ಮಕವಾದ, ರಚನಶೀಲವಾದ ಚಟುವಟಿಕೆಗಳ ಮೂಲಕ "ತ್ಯಾಗ, ನಿರ್ಮೋಹ ಮತ್ತು ವಿರಕ್ತಿ" ಆಗಿತ್ತು. "ಪ್ರತಿಯೊಂದು ಕಾರ್ಯವನ್ನೂ ಅವನ ಪೂಜೆಯೆಂದು ಮಾಡಿ; ಪ್ರತಿಯೊಂದು ಚಿಂತನೆಯೂ ಅವನಿಗಾಗಿ ಹಂಬಲವಾಗಲಿ ; ಉಚ್ಚರಿಸುವ ಒಂದೊಂದು ಪದವನ್ನೂ ಅವನ ದಿವ್ಯಾನುಗ್ರಹಕ್ಕೆ ಅರ್ಪಿಸಿದ ಕೃತಜ್ಞತಾ ಸ್ತುತಿಯಾಗಿ ಮಾಡಿ".

ಭಗವಾನರು ತಮ್ಮ ದಿವ್ಯೋಪನ್ಯಾಸಗಳಲ್ಲಿ ತರುಣರನ್ನು ಉದ್ದೇಶಿಸಿ, ವೇದಗಳು ನೀಡಿದ ಆದೇಶವನ್ನೇ ಮರಳಿ ನೀಡುತ್ತಿದ್ದಾರೆ. "ನಿಮ್ಮ ಮಾತಾಪಿತರನ್ನು ದೇವರೆಂದು ಪೂಜಿಸಿ." ಏಕೆಂದರೆ ಈ ಗೌರವ ಈ ಪೂಜೆ ಭಾರತೀಯ ಕುಟುಂಬಗಳಲ್ಲಿ ವೇಗವಾಗಿ ಕಣ್ಮರೆಯಾಗುತ್ತಿದೆ. ಮನೆಯೇ ಅತ್ಯುತ್ತಮವಾದ ಪ್ರಪ್ರಥಮವಾದ ಪಾಠಶಾಲೆ" ಎಂದರು ಬಾಬಾ. ಬಹುಕಾಲ ಉಳಿಯುವ ಕೌಶಲಗಳು, ಸಾಮರ್ಥ್ಯಗಳು, ಅಭ್ಯಾಸಗಳು ಬೆಳೆಯುವುದೇ ಅಲ್ಲಿ. ವ್ಯಕ್ತಿಯು ದೈಹಿಕವಾಗಿ ಎಲ್ಲೇ ಓಡಾಡುತ್ತಿದ್ದರೂ ಅವನ ಹೃದಯ ನೆಲೆಗೊಂಡಿರಬೇಕಾದದ್ದು ಅಲ್ಲಿಯೇ. ನಾವು ನಮ್ಮ ದೇಶವನ್ನು ಏಕೆ ಪ್ರೇಮಿಸುತ್ತೇವೆ? ನಮ್ಮ ಪಿತೃಪಿತಾಮಹರ ಸಮಾಧಿಗಳು, ನಮ್ಮ ದೇವದೇವತೆಗಳ ದೇವಾಲಯಗಳು, ನಮಗೆ ಅನ್ನ ಕೊಡುವ ಹೊಲಗದ್ದೆಗಳು, ನಾವು ಮೀಯುವ ನದಿಗಳು ಇವೆಲ್ಲ ಇಲ್ಲಿರುವುದರಿಂದ. ಹೀಗೆ ಮಾತಾಪಿತೃ ಗೌರವ ಎಂಬ ಮೌಲ್ಯವನ್ನು ನಡೆದು ತೋರಿಸುವ ಸಲುವಾಗಿ ಬಾಬಾ ತಮ್ಮ ಹೆತ್ತವರ ಸಮಾಧಿಯನ್ನು ಸಂದರ್ಶಿಸುವುದರ ಮೂಲಕ ಹುಟ್ಟುಹಬ್ಬದ ಸಮಾರಂಭವನ್ನು ಉದ್ಘಾಟಿಸಿದರು. ಅವರ ಜೊತೆ ಅವರ 'ಸೋದರಿಯರು, ಸೋದರರ', ಅವರ ಮಕ್ಕಳು ಮೊಮ್ಮಕ್ಕಳು ಎಲ್ಲರೂ ಸೇರಿದ್ದರು. ಅವರ ಪ್ರತಿಯೊಂದು ಕಾರ್ಯವೂ ನಮಗೆ ಒಂದೊಂದು ಪಾಠ.

## ಬಾಬಾ ಮತ್ತು ಗೋದಾವರಿ

1974ನೆಯ ವರ್ಷ ಗೋದಾವರಿ ನದಿಯ ದಡದ ಮೇಲಿನ ಸಣ್ಣ ಪಟ್ಟಣ ರಾಜಮಹೇಂದ್ರಿ ಒಂದು ಪವಾಡ ಸದೃಶ ಘಟನೆಯನ್ನು ಕಂಡಿತು. ಪ್ರಾಚೀನ ವೈಭವಗಳನ್ನು ಮೆಲುಕು ಹಾಕುವ ನಗರ ರಾಜಮಹೇಂದ್ರಿ. ಅನೇಕ ಧರ್ಮಗಳಿಗೂ ಸಾಂಸ್ಕೃತಿಕ ಸಂಘ ಸಂಸ್ಥೆಗಳಿಗೂ ಆಶ್ರಯ. ಹನ್ನೆರಡು ವರ್ಷಗಳಿಗೊಮ್ಮೆ ಲಕ್ಷಾಂತರ ಯಾತ್ರಿಕರು ನದೀ ಸ್ನಾನಕ್ಕಾಗಿ ಭಾರತದ ಮೂಲೆ ಮೂಲೆಗಳಿಂದ ಬಂದು ನೆರೆಯುವ ನಗರ. ಸತ್ಯಸಾಯಿ ಸಂಸ್ಥೆಗಳ ಪದಾಧಿಕಾರಿಗಳ ಅಖಿಲ ಭಾರತ ಸಮ್ಮೇಳನವೊಂದನ್ನು ಮೂರು ದಿನ ಈ ನಗರದಲ್ಲಿ ನಡೆಸಲು ಭಗವಾನರು ಸಂಕಲ್ಪಿಸಿದರು. 6,000ಕ್ಕೂ ಹೆಚ್ಚು ಜನ ಪ್ರತಿನಿಧಿಗಳು ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಬಾಲ ವಿಕಾಸ ಹೇಳುವ ಗುರುಗಳ ಸಂಖ್ಯೆ ಇನ್ನೊಂದು 750 ಇದ್ದಿತು. ಗೋದಾವರಿ ಜಿಲ್ಲೆಗಳಲ್ಲಿ ನಡೆಯುವ ಎಲ್ಲ ಸೇವಾ ಕಾರ್ಯಗಳ ಜೀವದುಸಿರಾದ ಸ್ವಾಮಿ ಕಾರುಣ್ಯಾನಂದರು ತಾವು ಅನ್ವೇಷಿಸುವ ಭಗವಂತನನ್ನು ಸತ್ಯಸಾಯಿಬಾಬಾ ಅವರಲ್ಲಿ ಕಂಡವರು. ಗೋದಾವರಿ ಪ್ರದೇಶದ ಸಾಯಿ ಭಕ್ತರು ಈ ಸಮ್ಮೇಳನವನ್ನು ಅದ್ಭುತ

ಯಶಸ್ವಿಯಾಗುವಂತೆ ಮಾಡಲು ತ್ರಿಕರಣಪೂರ್ವಕ ಶ್ರಮಿಸುವರೆಂಬ ಭರವಸೆ ಹೊಂದಿದ್ದರು. ನೂತನ ವರ್ಷಾರಂಭಕ್ಕೆ ಮುನ್ನವೇ ಪ್ರತಿಯೊಂದು ಹಳ್ಳಿಯಿಂದಲೂ ತರುಣರು ಬಂದು ನೆರೆದರು. ಚಪ್ಪರಗಳನ್ನು ಹಾಕಿದರು. ನೆಲವನ್ನು ಸಮ ಮಾಡಿದರು, ಚರಂಡಿಗಳನ್ನು ತೋಡಿದರು, ಭೋಜನ ಶಾಲೆಗಳನ್ನೂ ಅಡಿಗೆಮನೆಗಳನ್ನೂ ತಾತ್ಕಾಲಿಕವಾಗಿ ನಿರ್ಮಿಸಿದರು. ಉದ್ದಕ್ಕೂ ಬಾಯಲ್ಲಿ ಭಜನೆಗಳನ್ನು ಹಾಡುತ್ತಾ ಇದ್ದರು. ಸ್ವಾಮಿ ಕಾರುಣ್ಯಾನಂದರು 'ಇನ್ನು ಬೇಡ, ಸಾಕು' ಎಂದು ಖಡಾಖಂಡಿತವಾಗಿ ಹೇಳುವವರೆಗೂ ಉಗ್ರಾಣವನ್ನು ತುಂಬಿದರು. ಅನೇಕ ಗ್ರಾಮಸ್ಥರು ತಮ್ಮ ಕೊಡಗೆಯನ್ನು ಈ ರಾಶಿಗೆ ಸೇರಿಸಿಕೊಳ್ಳಲಿಲ್ಲವಲ್ಲ ಎಂದು ನಿರಾಶೆಯಿಂದ ದುಃಖಿತರಾಗಿ ಹಿಂದಿರುಗಿದರು. ಮಹಿಳೆಯರು ಸಾಲುಗಟ್ಟಿ ಅಡಿಗೆ ಮನೆಗೆ ನುಗ್ಗಿದರು. ವಿಸ್ತಾರವಾಗಿ ಖಾದ್ಯ ಪದಾರ್ಥಗಳನ್ನು ತಯಾರಿಸುವ ಕೆಲಸ ಕೈಗೆತ್ತಿಕೊಂಡರು. ಮೂಲೆ ಮೂಲೆಗಳಿಂದ ರಾಜಮಹೇಂದ್ರಿಗೆ ಧಾವಿಸುವ ಬಸ್ಸುಗಳಲ್ಲಿ ಬೃಹತ್ ಪ್ರಮಾಣದಲ್ಲಿ ಹಾಲು, ಮೊಸರು, ತುಪ್ಪ ಬಂದವು. ಪ್ರತಿನಿಧಿಗಳು ಗೋದಾವರಿ ಪ್ರದೇಶದ ಅತಿಥಿಗಳು. ಆತಿಥ್ಯವು ಪೂಜೆ ಎಂಬಂತೆ ಸಾಗಿತು. ಸಾಯಿ ಸಂದೇಶವು ಹೇಗೆ ಜನರ ಹೃದಯಗಳಲ್ಲಿ ಆಳವಾಗಿ ಬೇರು ಬಿಟ್ಟಿದೆ, ಹೇಗೆ ಅದು ಪ್ರೇಮವಾಗಿ ಸೇವೆಯಾಗಿ ಅರಳಿದೆ ಎಂಬುದನ್ನು ಅದು ವ್ಯಕ್ತಪಡಿಸುತ್ತಿತ್ತು. ಭಗವಾನರ ದಿವ್ಯೋಪನ್ಯಾಸಗಳು ಆಲಿಸಿದ ಪದಾಧಿಕಾರಿಗಳು ಧರ್ಮದ ಪುನರುತ್ಥಾನಕ್ಕೆ ಸಮರ್ಥ ಉಪಕರಣಗಳಾಗುವಂತೆ ಮಾಡಿದುವು. ಬಾಲವಿಕಾಸ ಚಳುವಳಿಯನ್ನು ಭಗವಾನರು ಆಶೀರ್ವದಿಸಿದರು. ಸಾಯಿ ಕ್ರಾಂತಿಯ ಮೂಲಭೂತ ಚಟುವಟಿಕೆ ಎಂದು ಅದನ್ನು ವರ್ಣಿಸಿದರು. ಗುರುಗಳು ಅತ್ಯಂತ ಮಹತ್ವದ ನಾಯಕರು. ಸಮ್ಮೇಳನದ ಮೂರು ದಿನಗಳೂ ಭಗವಾನರು ಉಪಸ್ಥಿತರಿದ್ದರು. ಕಲ್ಕತ್ತ, ಭೋಪಾಲ್, ಪಟ್ನ ಮೊದಲಾದ ಅತಿದೂರದ ಸ್ಥಳಗಳಿಂದ ಗೋದಾವರಿಗೆ ಯಾತ್ರಿಕರು ಧಾವಿಸಿ ಬರಲು ಇದು ಪ್ರೇರಕವಾಯಿತು.

## ಗ್ರಾಮಗಳಲ್ಲಿ ಪ್ರಶಾಂತಿ

1974 ಫೆಬ್ರುವರಿ 3ನೆಯ ತಾರೀಕು ಬೃಂದಾವನದಿಂದ ಆರು ಮೈಲು ದೂರದ ಕಣ್ಣಮಂಗಲ ಗ್ರಾಮಕ್ಕೆ ಭೇಟಿ ನೀಡಿದರು. ಆ ಪ್ರದೇಶದಲ್ಲಿ ತಾವು ಒಂದು ಕಾಲೇಜನ್ನು ಸ್ಥಾಪಿಸಿರುವುದಾಗಿಯೂ, ಸುತ್ತಮುತ್ತಣ ಹಳ್ಳಿಗಳಿಂದ ಬಂದ ವಿದ್ಯಾರ್ಥಿಗಳು ಅಲ್ಲಿ ಕಲಿತು ಜನತಾ ಕಲ್ಯಾಣದ ಪುನರುಜ್ಜೀವನದ ನೇತಾರರಾಗುವರೆಂದೂ ಹೇಳಿದರು. ವಿದ್ಯಾರ್ಥಿಗಳಿಗೆ ಹಳ್ಳಿಗಳನ್ನು ಗೌರವಿಸಿ, ಅಲ್ಲೇ ತಮ್ಮ ಬಂಧು ಬಾಂಧವರೊಂದಿಗೆ ವಾಸಮಾಡಿ ಎಂದು ಕರೆಯಿತ್ತರು. "ಬಾಲ ವಿಕಾಸ, ಸೇವಾದಳ, ಮಹಿಳಾ ವಿಭಾಗ ಮತ್ತು ಸೇವಾ ಸಮಿತಿಗಳನ್ನು ನಿಮ್ಮ ಪ್ರದೇಶದಲ್ಲಿ ರೂಪಿಸಲು, ಬೆಳೆಸಲು ಪ್ರೋತ್ಸಾಹಿಸಿರಿ" ಎಂದರು. ಕಣ್ಣಮಂಗಲದ ಭೇಟಿ ಐತಿಹಾಸಿಕವಾಗಿತ್ತು. ಏಕೆಂದರೆ ಅಲ್ಲಿಂದೀಚೆಗೆ ಹತ್ತಕ್ಕಿಂತಲೂ ಹೆಚ್ಚು ಗ್ರಾಮಗಳಿಗೆ ಅವರು ಭೇಟಿಯಿತ್ತಿದ್ದಾರೆ. ದೇವಸ್ಥಾನಗಳ ಜೀರ್ಣೋದ್ಧಾರ ಮಾಡಿಸಿದ್ದಾರೆ. ನಿಲುದಾಣಗಳನ್ನು ಕಟ್ಟಿಸಿದ್ದಾರೆ. ಶಾಲಾ ಕಟ್ಟಡಗಳನ್ನು ವಿಸ್ತರಿಸಿದ್ದಾರೆ, ಅಂತರ್ಜಲವನ್ನು ಕಂಡು ಹಿಡಿದು ಬಳಸುವುದನ್ನು ಉಪಕ್ರಮಿಸಿದ್ದಾರೆ. ಈಗಾಗಲೇ ಇರುವ ಬಾವಿಗಳನ್ನು ಇನ್ನಷ್ಟು ಆಳಕ್ಕೆ ಇಳಿಸಿದ್ದಾರೆ. ಸಾಕ್ಷರತೆಯನ್ನು ಬೆಳೆಸಲು ನೆರವಾಗಿದ್ದಾರೆ. ಜನರ ಆತ್ಮಪ್ರಜ್ಞೆಯನ್ನು ಎಚ್ಚರಿಸಿ ನೈತಿಕ ಸುಧಾರಣೆಯ ತಳಹದಿ ಹಾಕಿದ್ದಾರೆ.

ಭಾರತದಲ್ಲಿರುವ 4,000 ಸೇವಾಸಮಿತಿಗಳು ತಲಾ ಒಂದೊಂದು ಹಳ್ಳಿಯನ್ನು ದತ್ತು ಸ್ವೀಕಾರ ಮಾಡಿಕೊಳ್ಳಬೇಕೆಂದು ಆದೇಶಿಸಿದ್ದಾರೆ. ಅಲ್ಲಿಯ ಜನರಿಗೆ ಪ್ರೇಮದಿಂದ, ಅರಿವು ಸಹಾನುಭೂತಿಗಳಿಂದ ಸೇವೆಗೈಯಿರಿ ಎಂದು ಕರೆಯಿತ್ತಿದ್ದಾರೆ. 'ಸತ್ಯಸಾಯಿ ಸಾಮ್ರಾಜ್ಯ' ಎಂಬ ಹೆಸರಿನ ಸತ್ಯಸಾಯಿ ಕಾಲೇಜುಗಳ ಹಳೆಯ ವಿದ್ಯಾರ್ಥಿಗಳ ಸಂಘವು ಈ ಗ್ರಾಮ ಸೇವಾ ಕಾರ್ಯಕ್ರಮವನ್ನು ಬಹಳ ಸಮರ್ಥವಾಗಿ ಸಮರ್ಪಕವಾಗಿ ನಡೆಸಲು ತಕ್ಕ ಸಾಧನವಾಗಿ ರೂಪುಗೊಳ್ಳುತ್ತಿದೆ. ಭಗವಾನರ ಕರುಣೆಯು ಪುಟ್ಟಪರ್ತಿಯ ಸುತ್ತಣ ಗ್ರಾಮಗಳಿಗೆ ವೈದ್ಯಕೀಯ ಹಾಗೂ ಶೈಕ್ಷಣಿಕ ಸೌಲಭ್ಯಗಳ ರೂಪದಲ್ಲಿ ಹರಿದಿದೆ.

1974ರ ಶಿವರಾತ್ರಿಯನ್ನು ಭಗವಾನರು ಪ್ರಶಾಂತಿ ನಿಲಯದಲ್ಲಿ ಆಚರಿಸಿದರು. 20,000 ಜನರು ಕುಳಿತುಕೊಳ್ಳಬಹುದಾದಷ್ಟು ದೊಡ್ಡ ಚಪ್ಪರವನ್ನು ನಿರ್ಮಿಸಲಾಗಿತ್ತು. ಲಿಂಗ ಮತ್ತು ಅದರ ಅದ್ಭುತಗಳ ವಿಷಯವಾಗಿ ಮಾತನಾಡುತ್ತಾ ಬಾಬಾ ನುಡಿದರು : "ಲಿಂಗ ಆದಿಯಿಲ್ಲದ್ದು, ಅಂತ್ಯವೂ ಇಲ್ಲದ್ದು, ಸಮಸ್ತ ಜೀವಿಗಳೂ ಅದರ ಕಡೆಗೆ ಚಲಿಸುತ್ತವೆ, ಅದರೊಳಗೆ ವಿಲೀನವಾಗುತ್ತದೆ." ಲಿಂಗೋದ್ಭವವನ್ನು ನಿರೀಕ್ಷಿಸುತ್ತಿದ್ದ ಜನಸಮೂಹ ಭಕ್ತಿಗೌರವಗಳಿಂದ ಉಸಿರು ಹಿಡಿದಂತೆ ಕುಳಿತಿತ್ತು. ಬಾಬಾ ಅವರ ಮುಖದ ಮೇಲೆ ನೋವಿನ ಮೊದಲ ಸೆಳಕು ಕಾಣಿಸಿದಂತೆ ಸಾವಿರಾರು ಜನ ಪ್ರಾರ್ಥನೆ ಮಾಡತೊಡಗಿದರು. ತೂಕವಾದ, ಅಸಾಧರಣ ಗಾತ್ರದ ಅಂಡಾಕೃತಿಯ ಲಿಂಗವು ಅವರೆಲ್ಲರ ಪ್ರಾರ್ಥನೆಗೆ ಒಲಿದು ಬಾಬಾ ಅವರ ಭೌತಿಕ ಶರೀರದಲ್ಲಿ ರೂಪುಗೊಂಡು ಮೇಲು ಮೇಲಕ್ಕೇರಿ ಬಂದು ಬಾಯಿ ಮೂಲಕ ಅವರ ಕೈಗೆ ಬಿದ್ದಿತು. ಎಲ್ಲರೂ ನೋಡುವಂತೆ ಅದನ್ನು ಎತ್ತಿ ಹಿಡಿದ ಬಾಬಾ ಅದು ವಿಶ್ವ ತತ್ವದ ಸಂಕೇತ, ದೇಶ-ಕಾಲ-ಕಾರಣ ನೈರಂತರ್ಯವೇ ಘನೀಕರಿಸಿದ ರೂಪವದು ಎಂದರು. ಅದು ಕಾರಣವನ್ನೂ ಪರಿಣಾಮವನ್ನೂ ಪ್ರತಿನಿಧಿಸುತ್ತದೆ. ಆ ಲಿಂಗದೊಳಗೆ ಪ್ರಕಾಶಮಾನವಾದ ತ್ರಿಶೂಲವೊಂದಿತ್ತು. ನೆರೆದ ಸಹಸ್ರಾರು ಮುಖಗಳ ಮೇಲೆ ಆನಂದ ಲಾಸ್ಯವಾಡಿತು. ಭೂತಕಾಲದ ಬಗೆಗೆ ವಿಷಾದದ ಕಣ್ಣೀರಾಗಲಿ, ವರ್ತಮಾನ ಕಾಲದ ಬಗೆಗೆ ಕಾತರದ ನಿಟ್ಟುಸಿರಾಗಲಿ, ಭವಿಷ್ಯತ್ಕಾಲದ ಬಗೆಗೆ ಕಳವಳದ ಕುರುಹುಗಳಾಗಲಿ ಇರಲಿಲ್ಲ. ನೆರೆದ ಸಮಸ್ತರೂ ಆನಂದವೊಂದನ್ನೇ ಅನುಭವಿಸಿದರು. ಭಗವಾನರ ವಾಣಿ ಕೇಳಿಸಿತು : "ಈ ಉದ್ಭವ ದೃಶ್ಯವನ್ನು ಮತ್ತೆ ಮತ್ತೆ ಸ್ಮರಿಸಿರಿ. ಈಗ ನಿಮ್ಮ ಹೃದಯಗಳಲ್ಲಿ ಉಕ್ಕಿ ಬರುತ್ತಿರುವ ಆನಂದವನ್ನು ಪೋಷಿಸಿರಿ. ವಾಸ್ತವವಾಗಿ ನೀವು ಅಮೃತರಾಗಿದ್ದೀರಿ. ಮತ್ತೆ ಜನನ ಮರಣಗಳ ಯಾನ ನಿಮಗಿಲ್ಲ." ಆ ಬೃಹತ್ ನೆರವಿಯಲ್ಲಿ ಇದ್ದ ಯಾವೊಬ್ಬನು ಹಳೆಯ ವ್ಯಕ್ತಿಯೇ ಆಗಿ ಎದ್ದು ಹೋಗಲಿಲ್ಲ. ನಿಲಯವನ್ನು ಬಿಟ್ಟು ಹೋಗಲಾರದೆ ಚಡಪಡಿಸುವ, ಹಂಬಲಿಸುವ ಭಕ್ತರನ್ನು ಮನೆಗೆ ಕಳಿಸಬೇಕಾದರೆ ಬಾಬಾ ಅನೇಕ ದಿನ ಪ್ರಯತ್ನಿಸಬೇಕಾಯಿತು.

1974ರಲ್ಲಿ ಬಾಬಾ ಎರಡು ಸಾರಿ ಮುಂಬಯಿಗೆ ಭೇಟಿ ನೀಡಿದರು. ಮಾರ್ಚಿ ಪ್ರಾರಂಭದಲ್ಲಿ ಮತ್ತು ಇನ್ನೊಮ್ಮೆ ಮೇ ಮಧ್ಯಭಾಗದಲ್ಲಿ ಮಾರ್ಚಿ ತಿಂಗಳಲ್ಲಿ 2,500 ಬಾಲವಿಕಾಸ ಮಕ್ಕಳ ರ್‍ಯಾಲಿಯನ್ನು ಅನುಗ್ರಹಿಸಿ ಮಾತನಾಡಿದರು. ವಿಶ್ವವಿದ್ಯಾನಿಲಯ ಹಾಗೂ ಕಾಲೇಜುಗಳಿಂದ ಬಂದ ಉಪಾಧ್ಯಾಯರ ತಂಡವನ್ನುದ್ದೇಶಿಸಿ ಭಾಷಣ ಮಾಡಿದರು. ಧರ್ಮಕ್ಷೇತ್ರದಲ್ಲಿ ನೂತನವಾಗಿ ಸ್ಥಾಪಿಸಿದ ಔದ್ಯೋಗಿಕ ತರಬೇತಿ ಶಾಲೆಯ ವಿಸ್ತರಣ ಮತ್ತು ಕೃಷಿ ಪಾಲಿಟೆಕ್ನಿಕ್‌ಗಳನ್ನು ಉದ್ಘಾಟಿಸಿದರು.

ರ್‍ಯಾಲಿಯಲ್ಲಿ ಮಾತನಾಡುತ್ತಾ ಅವರು ಹೇಳಿದರು : "ಇಂದು ತಂದೆ-ತಾಯಿಗಳು ತಮ್ಮ ಮಕ್ಕಳಿಗೆ ಮಾರ್ಗದರ್ಶನ ಮಾಡಲು ಅಸಮರ್ಥರಾಗಿದ್ದಾರೆ. ಅವರು ಸುಳ್ಳಾಡುತ್ತಾರೆ, ಲಂಚ ತೆಗೆದುಕೊಳ್ಳುತ್ತಾರೆ ಮತ್ತು ಅಪಪ್ರಚಾರದಲ್ಲಿ ತೊಡಗುತ್ತಾರೆ. ಕೆಟ್ಟಮಾತುಗಳನ್ನಾಡುತ್ತಾರೆ, ಜಂಬ ಕೊಚ್ಚಿಕೊಳ್ಳುತ್ತಾರೆ. ಮಕ್ಕಳು ಸರಿಯಾಗಿ ನಡೆದುಕೊಂಡು ತಮ್ಮ ವರ್ತನೆಯಿಂದ ಹಿರಿಯರು ನಾಚಿಕೊಳ್ಳುವಂತೆ ಮಾಡಬೇಕು" ಮೇ ತಿಂಗಳಲ್ಲಿ ಧರ್ಮಕ್ಷೇತ್ರ ಶಾಲೆಯ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಿದರು. ಅಲ್ಲಿಂದ ಭಕ್ತರ ಕೋರಿಕೆಯ ಮೇರೆಗೆ ರತ್ನಗಿರಿಗೆ ವಿಮಾನದಲ್ಲಿ ಪ್ರಯಾಣ ಮಾಡಿದರು.

## 27 ವರ್ಷಗಳ ನಂತರ

ಮಾರ್ಚಿಯಲ್ಲಿ ಮುಂಬಯಿಂದ ಹಿಂದಿರುಗುವಾಗ ಭಗವಾನರು ಕರ್ನಾಟಕದ ಬಳ್ಳಾರಿ ಜಿಲ್ಲೆಯ ಸಂಡೂರಿನಲ್ಲಿ ಎರಡು ದಿನ ಕಳೆದರು. ರಾಜಾಸಾಹೇಬ್ ಸ್ಥಾಪಿಸಿದ ಒಂದು ಕಾರ್ಖಾನೆಯನ್ನು ಉದ್ಘಾಟಿಸಿದರು. ಆ ಪ್ರದೇಶದ ಖನಿಜ ಸಂಪತ್ತಿನ ಅನ್ವೇಷಣೆ ಆ ಪ್ರಯತ್ನದ ಉದ್ದೇಶವಾಗಿತ್ತು. 27 ವರ್ಷಗಳ ಹಿಂದೆ ಸಂಡೂರಿನ ರಾಜ ಮನೆತನವನ್ನು ಅನುಗ್ರಹಿಸಿದ್ದ ಬಾಬಾ ಅವರನ್ನು ರಾಜಾಸಾಹೇಬ್ ಈಗ ಸ್ವಾಗತಿಸಿದರು. 1949ರಲ್ಲಿ ರಾಜ್ಯದ ಸೂತ್ರಗಳನ್ನು ಬಿಟ್ಟುಕೊಟ್ಟಾಗ ಬಾಬಾ ತಮಗೆ "ಯೋಚಿಸಬೇಡ ಸಂಡೂರು ಸಂಸ್ಥಾನಕ್ಕಿಂತಲೂ ದೊಡ್ಡದಾದ ಒಂದು ಸಂಸ್ಥೆಯನ್ನು ನೀನು ಸ್ಥಾಪಿಸುತ್ತೀಯೆ" ಎಂದು ಹೇಳಿದ್ದುದನ್ನು ನೆನಪು ಮಾಡಿಕೊಂಡರು. ಈಗ ಆ ಸಂಸ್ಥೆಯನ್ನು ಆಶೀರ್ವದಿಸಲೆಂದು ಬಾಬಾ ಬಂದಿದ್ದರು.

ಮೇ-ಜೂನ್ ತಿಂಗಳಲ್ಲಿ ನಡೆದ ಬೇಸಿಗೆ ಶಿಬಿರವು ಜೀವನದಲ್ಲಿ ಹಲವು ನೋವು ನಲಿವುಗಳನ್ನೂ ಸುಖ ದುಃಖಗಳನ್ನೂ ಎದುರಿಸಬೇಕಾಗಿರುವ ಯುವ ಜನತೆಗೆ ಅತ್ಯಂತ ಕಷ್ಟಾಯವೆನಿಸಿತು. ಎಲ್ಲಾ ನಾಡುಗಳ ಸಾಧು ಸಂತರ ಜ್ಞಾನದಿಂದ ಸನ್ನದ್ಧರಾಗುವಂತೆ ಮಾಡಿ ಈ ಯುಗದ ಅವತಾರ ಪುರುಷನ ಸಂಪರ್ಕ ಪಡೆಯುವಂತೆ ಮಾಡಿತು. ಮುಕ್ತಾಯವಾಗುವುದಕ್ಕಿಂತ ಎರಡು ದಿನ ಮೊದಲು ಜೂನ್ 19ರಂದು ಪ್ರಶ್ನಿಸುವವರ ಒಂದು ಪ್ರಶ್ನೆಗೆ ಉತ್ತರ ಕೊಟ್ಟರು. ಸಾಯಿ ಯಾರು ? ನಮ್ಮ ಮಂಕಾದ ಪ್ರಜ್ಞೆಯು ಒಪ್ಪಿಕೊಳ್ಳುವಷ್ಟು ಮಟ್ಟಿಗೆ ಅವರು ತಮ್ಮ ಸ್ವರೂಪವನ್ನು ಪ್ರಕಟಿಸಿಕೊಂಡರು. "ಸಮಸ್ತ ಮಾನವ ಕುಲವನ್ನು ಒಂದು ಕುಟುಂಬವಾಗಿ ಬೆಸೆಯಲು ನಾನು ಬಂದಿದ್ದೇನೆ. ನಿಮ್ಮ ಒಬ್ಬೊಬ್ಬರಲ್ಲೂ ಆತ್ಮ ಸತ್ಯವು ಬೆಳಗುವಂತೆ ಸ್ಥಿರಗೊಳ್ಳುವಂತೆ ಮಾಡಲು ಬಂದಿದ್ದೇನೆ. ಅಲ್ಪವಾದ ಭೌತಿಕ ವಸ್ತುಗಳನ್ನು ನನ್ನಿಂದ ಕೇಳಬೇಡಿ. ಅದಕ್ಕೆ ಬದಲು ನಾನೇ ಬೇಕೆಂದು ಹಂಬಲಿಸಿರಿ. ನಿಮಗೆ ಸತ್ಫಲವು ದೊರೆಯುತ್ತದೆ" ಎಂದು ಘೋಷಿಸಿದರು. ಭಾರತದ ಸೇನೆಯ ಮಾಜಿ ಮಹಾ ದಂಡನಾಯಕ ಜನರಲ್ ಕಾರಿಯಪ್ಪ ಮೂರು ಸಾರಿ 'ಜೈ ಸಾಯಿ ಧರ್ಮ' ಎಂದು ಕೊರಳೆತ್ತಿ ಕೂಗಿದರು. ಜನಸಮೂಹವು ಜೋರಾಗಿ ಜಯಕಾರ ಮಾಡಿತು.

ದಸರಾ ಉತ್ಸವವು ರಾಕ್ಷಸರ ಮೇಲೆ ದೇವತೆಗಳ ವಿಜಯದ ಸಂಕೇತ. ಕತ್ತಲೆಯ ಮೇಲೆ ಬೆಳಕಿನ, ಅಜ್ಞಾನದ ಮೇಲೆ ಜ್ಞಾನದ ಗೆಲುವಿನ ಕುರುಹು. ಆದ್ದರಿಂದ ದಸರೆಯಲ್ಲಿ ಅವರ ಸನ್ನಿಧಿಗೆ

ದಾವಿಸಿ ಬರುವ ಸಹಸ್ರಾರು ಜನರು ಶಿಸ್ತಿಗೊಳಪಡುತ್ತಾರೆ, ಶಿಸ್ತು ಅವರನ್ನು ವಿಜಯದ ಕಡೆ ಮುಂದುವರಿಯುವಂತೆ ಮಾಡುತ್ತದೆ. ಅನಂತಪುರದ ಮಹಿಳಾ ಕಾಲೇಜು 'ದಿ ಬಿಷಪ್ಸ್ ಕ್ಯಾಂಡಲ್ ಸ್ಟಿಕ್ಸ್' ನಾಟಕವನ್ನೂ ಬೃಂದಾವನದ (ಬೆಂಗಳೂರು) ಬಾಲಕರ ಕಾಲೇಜು 'ಪಾಂಡವ ವಿಜಯಮು' ಎಂಬ ತೆಲುಗು ನಾಟಕವನ್ನೂ ಪ್ರದರ್ಶಿಸಿದುವು. ಎರಡು ನಾಟಕಗಳೂ ಪ್ರೇಮ ಮತ್ತು ಭಕ್ತಿ ನೀಡಬಹುದಾದ ಮಹಾ ಚಿಕಿತ್ಸೆಯ ಆಧಾರದ ಮೇಲೆ ರೂಪುಗೊಂಡಂತಹವು. ಭಾಗವತ ಭಕ್ತ ಸಮಾಜ ಎಂಬುದು ಸಂಗೀತಗಾರರ ಮತ್ತು ಭಾಷಣಕಾರರ ಒಂದು ತಂಡ. ಸೋದರಿಕೆ ಮತ್ತು ಆಸ್ತಿಕ್ಯದ ಅಖಂಡ ದರ್ಶನವನ್ನು ಪ್ರಚಾರ ಮಾಡುವ ಸಮಾನೋದ್ದೇಶಗಳಿಂದ ಕೂಡಿದ ಈ ಸಂಘವು ಮೂರು ದಿನಗಳ ಹೋಮ, ಪುರಾಣ ಪಠನ, ಭಕ್ತಿಗೀತೆಗಳ ಗಾಯನ, ಜನಪದ ಕುಣಿತ, ನಾಟಕಗಳು, ಗಾನಗೋಷ್ಠಿಗಳು ಈ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡುತ್ತದೆ. ಈ ಸಂಘವನ್ನು ಭಗವಾನರು ಪಂಡಿತರ ಅಕಾಡೆಮಿಗೆ ಸೇರಿಸಿದರು. ಇದರಿಂದ ಶೈಕ್ಷಣಿಕವೂ ಮನರಂಜಕವೂ ಆದ ಅನೇಕ ಆಕರ್ಷಕ ಅಂಶಗಳು ಕೂಡಿಕೊಂಡುವು.

1974ರ ಜನ್ಮದಿನೋತ್ಸವದಲ್ಲಿ ಬಾಬಾ ಹಣದ ಸದ್ವಿನಿಯೋಗ-ದುರ್ವಿನಿಯೋಗಗಳ ಬಗ್ಗೆ ಮಾತನಾಡಿದರು. ಹಣಕ್ಕಾಗಿ ಸಾರ್ವಜನಿಕವಾಗಿ ಮನವಿ ಮಾಡಿಕೊಳ್ಳುವುದನ್ನು ಅವರು ಎಂದೂ ವಿರೋಧಿಸಿದ್ದಾರೆ. ಕಾಣಿಕೆ ಕೇಳುವುದು, ಕೊಡುವುದು ಎರಡನ್ನೂ ಮಾಡಬಾರದೆಂದು ಭಕ್ತರಿಗೆ ಎಚ್ಚರಿಕೆ ನೀಡಿದ್ದಾರೆ. ತಮಗಾಗಿ ಏನನ್ನೂ ತರಕೂಡದು ಎಂದರವರು. ಏಕೆಂದರೆ ತಮಗೆ ಯಾವ ತರ ಅವಶ್ಯಕತೆಯೂ ಇಲ್ಲ. "ಏನನ್ನಾದರೂ ತರುವವರನ್ನೂ, ತರಬೇಕೆಂದು ಇತರರಿಗೆ ಬುದ್ಧಿವಾದ ಹೇಳುವವರನ್ನೂ ದೂರ ಮಾಡಲಾಗುತ್ತದೆ" ಎಂದರು.

ಮಾರ್ಚಿ 1975. ಭಗವಾನರು ದೆಹಲಿಗೆ ಭೇಟಿ ನೀಡಿದರು. ಅಲ್ಲಿನ ಅಸಂಖ್ಯಾತ ಭಕ್ತಸೋಮಕ್ಕೆ ಒಂದು ವಾರ ಕಾಲ ದರ್ಶನ ಲಾಭವಾಯಿತು. ಅಮೃತ ಸರ, ಚಂಡೀಘಡ, ಸಿಮ್ಲಾಗಳಿಗೆ ಭೇಟಿಯೂ ನಡೆಯಿತು. ಜೈಪುರದಲ್ಲಿ ಸತ್ಯಸಾಯಿ ಕಾಲೇಜು ಹೇಗೆ ಪ್ರಗತಿ ಹೊಂದಿದೆ ಎಂಬುದನ್ನು ನೋಡಲು ಅಲ್ಲಿಗೆ ಹೋಗಿ ಬಂದರು. ಆಮೇಲೆ ಅಲ್ಲಿಂದ ವಿಮಾನದಲ್ಲಿ ಮುಂಬಯಿಗೆ. ಅಲ್ಲಿ ಧರ್ಮಕ್ಷೇತ್ರ ಗುಡ್ಡದ ಮೇಲೆ ಸರ್ವಧರ್ಮ ಸಮನ್ವಯವನ್ನು ಸೂಚಿಸುವ ನಲುವತ್ತು ಅಡಿ ಎತ್ತರದ ಸ್ತಂಭವನ್ನು ಅನಾವರಣ ಮಾಡಿದರು. ಮಾರ್ಚಿ 20ನೆಯ ತಾರೀಕು ಬಾಬಾ ಪ್ರಶಾಂತಿ ನಿಲಯದಲ್ಲಿದ್ದರು. ಸಹಸ್ರಾರು ಜನ ಶಿವರಾತ್ರಿ ಲಿಂಗದ ದರ್ಶನ ಪಡೆದು ಪುನೀತರಾಗಲು ನೆರೆದಿದ್ದರು. 25ನೆಯ ತಾರೀಖು ಅನಂತಪುರದ ಸತ್ಯಸಾಯಿ ಮಹಿಳಾ ಕಾಲೇಜಿನಲ್ಲಿ ತಮ್ಮ ದಿವ್ಯ ಉಪಸ್ಥಿತಿಯಿಂದ ಆಶೀರ್ವಾದದ ಮಳೆಗರೆದು ಅಲ್ಲಿನ ನಿವಾಸಿಗಳಿಗೆ ಹೀಗೆ ಹೇಳಿದರು : "ವಿದ್ಯಾರ್ಥಿನಿಯರು ಮತ್ತು ಅಧ್ಯಾಪಿಕೆಯರು ಬಹಳ ಜಾಗರೂಕರಾಗಿರಬೇಕು. ತಮ್ಮ ಉಡುಗೆ ತೊಡುಗೆ, ಚಲನವಲನ, ನಡವಳಿಕೆ ಮೊದಲಾದುವುಗಳಿಂದ ಪುರುಷರ ಕಣ್ಣುಗಳನ್ನೂ ನಾಲಗೆಯನ್ನೂ ಆಕರ್ಷಿಸದ ಹಾಗೆ ಎಚ್ಚರವಾಗಿರಬೇಕು. ಫ್ಯಾಷನಿನಲ್ಲಿ ಸ್ವಲ್ಪ ಹಿಂದಾದರೂ ಚಿಂತೆಯಿಲ್ಲ ; ಆದರೆ ನಮ್ಮ ಸಂಸ್ಕೃತಿಯ ಸಂಪ್ರದಾಯಗಳನ್ನೂ ಪರಂಪರೆಗಳನ್ನೂ ತಿರಸ್ಕರಿಸಬೇಡಿ".

## ಗೋವುಗಳೊಡನೆ ಗೋಕುಲಕ್ಕೆ

ಆಗಸ್ಟ್ 29ನೆಯ ತಾರೀಖ ಕೃಷ್ಣಜನ್ಮಾಷ್ಟಮಿ. ಕೃಷ್ಣನ ಬಾಲಲೀಲೆಯನ್ನು ವರ್ಣಿಸುವ ಭಾಗವತದ ಪುಟಗಳು ಪುಟ್ಟಪರ್ತಿಯಲ್ಲಿ ಮತ್ತೆ ಅಭಿನೀತವಾದುವು. ಹಸುಗಳು, ಎಮ್ಮೆಗಳು, ಒಂಟೆಗಳು, ಸಾಯಿಗೀತಾ ಆನೆ ಇವುಗಳನ್ನು ಪ್ರಶಾಂತಿ ನಿಲಯದಿಂದ ಮೆರವಣಿಗೆಯಲ್ಲಿ ಸುಮಾರು ಒಂದು ಕಿಲೋಮೀಟರ್ ದೂರದ ಅವುಗಳ ಹೊಸ ನೆಲೆಗೆ ಕರೆದೊಯ್ಯಲಾಯಿತು. ಕೊಂಬು ಕಹಳೆಗಳು ತಮಟೆಗಳು ನಿನಾದಿಸುತ್ತಿದ್ದವು. ರಾಜ ವೈಭವದಿಂದ ಸಾಯಿಗೀತಾ ಮೆಲ್ಲನೆ ಅಡಿಯಿಡುತ್ತಿತ್ತು. ಅದರ ಹಿಂದೆ ಹಸುಗಳು, ಅವುಗಳನ್ನು ನೋಡಿಕೊಳ್ಳುವ ಸೇವಾದಳ ಸದಸ್ಯರೊಂದಿಗೆ ಸಾಲುಗಟ್ಟಿದುವು. ನೆಗೆಯುತ್ತಾ, ಕುಣಿಯುತ್ತಾ ಕರುಗಳು ಹಿಂಬಾಲಿಸಿದುವು. ಕಾಲೇಜು ವಿದ್ಯಾರ್ಥಿಗಳು ಅವುಗಳನ್ನು ಹತೋಟಿಯಲ್ಲಿಟ್ಟುಕೊಂಡಿದ್ದರು. ಕೊನೆಯಲ್ಲಿ ತಳ್ಳಿ, ನೂಕಿ, ಮುಂದಕ್ಕೆ ಕಳಿಸಬೇಕಾದ ಎಮ್ಮೆಗಳು ನಡೆದುವು. ಮಹಿಳಾ ಕಾಲೇಜಿನ ವಿದ್ಯಾರ್ಥಿನಿಯರು, ಪ್ರಶಾಂತಿ ನಿಲಯದ ಇತರರು ಭಜನೆಗಳನ್ನು ಹಾಡುತ್ತಾ ಹಿಂಬಾಲಿಸಿದರು. ಸಾಯಿಕೃಷ್ಣನೂ ಅಲ್ಲೇ ಇದ್ದನು. ಅವನ ಸುತ್ತ ಭಕ್ತರು ಅಪಾ ಸಂತೋಷದಿಂದ ಭಜನೆಗಳನ್ನು ಹಾಡುತ್ತಾ ನಡೆದಿದ್ದರು. ಅದಕ್ಕಿಂತ ಮೂರು ದಿನಗಳ ಹಿಂದೆ ಭಾಗವತದ ಇನ್ನೊಂದು ಘಟನೆ ಪುನರುಕ್ತವಾದುದನ್ನು ಭಕ್ತರು ಕಂಡಿದ್ದರು. ಭಾರೀ ಮಳೆ ಸುರಿದು ಚಿತ್ರಾವತಿ ನದಿಯು ಊರಿನೊಳಕ್ಕೆ ಬಂದಿತ್ತು. ಮಹಾ ಆಕ್ರೋಶದಿಂದ ಚಿತ್ರಾವತಿ ರಭಸವಾಗಿ ಹರಿಯುತ್ತಿದ್ದಳು. ಮಳೆಯ ದೇವ ಇಂದ್ರನು ಗೋಪಾಲಕರ ಹಳ್ಳಿಯ ಮೇಲೆ ಮತ್ತೊಮ್ಮೆ ಕುಪಿತನಾದಂತಿತ್ತು. ಆದರೆ ಭಾಗವತದ ದಿನಗಳಂತೆ ಈ ಕೃಷ್ಣನು ಪರ್ವತವನ್ನು ಎತ್ತಿ ಹಿಡಿದು ಅದರ ನೆರಳಲ್ಲಿ ಜನರೂ ಪಶುಕುಲವೂ ನೆಮ್ಮದಿಯಾಗಿರುವಂತೆ ಮಾಡಲಿಲ್ಲ. ಗಿರಿಶಿಖರಗಳಿಗೆ ನಿರಾಶೆಯಾಯಿತು. ಬಾಬಾ ಪೂರ್ವ ಪ್ರಶಾಂತಿ ಕಟ್ಟಡಗಳ ಮಾಳಿಗೆಯ ಮೇಲೆ ಹೋಗಿ ಒಮ್ಮೆ ಅಲ್ಲೋಲ ಕಲ್ಲೋಲವಾಗಿ ರಭಸದಿಂದ ಹರಿಯುತ್ತಿದ್ದ ನೀರಿನ ಕಡೆಗೆ ದೃಷ್ಟಿ ಬೀರಿದರು. ಅಷ್ಟು ಸಾಕಾಯಿತು. ಸ್ಥಿರಗತಿಯಲ್ಲಿ ಪ್ರವಾಹ ಇಳಿಯತೊಡಗಿತು. ದಸರಾ ಹಬ್ಬದ ಸಮಯದಲ್ಲಿ ಪ್ರಶಾಂತಿ ನಿಲಯ ಶಾಂತವಾಗಿತ್ತು. ನಿವಾಸಿಗಳು ಕೆಲವು ಹೆಚ್ಚಿನ ಆಚರಣೆಗಳನ್ನು ನಡೆಸಲು ಅವಕಾಶ ದೊರಕಿತು ಅಷ್ಟೆ. ಏಕೆಂದರೆ ಭಗವಾನರಿಗೆ ಭಕ್ತರ ಮೇಲೆ ಪ್ರೇಮ ಅಪಾರ. ಅವರು ದಸರಾದಲ್ಲಿ ಹತ್ತುದಿನ ಮತ್ತೆ ಅವತಾರದ ಸ್ವರ್ಣ ಮಹೋತ್ಸವ ಸಂದರ್ಭದಲ್ಲಿ ನವೆಂಬರ್ 14ರಿಂದ 24ವರೆಗೆ ಹತ್ತುದಿನ ಅಲ್ಲಿ ತಂಗುವುದು ಕಷ್ಟವಾಗುತ್ತದೆಂದು ನಿರ್ಧರಿಸಿದರು.

## ಎಲ್ಲ ನಕ್ಷೆಗಳ ತುಂಡು

'ಎಲ್ಲ ದಾರಿಗಳೂ ಪುಟ್ಟಪರ್ತಿಗೆ' ಎಂದು ಪತ್ರಿಕೆಗಳು ಸಾರಿದುವು. ವಿಶೇಷ ರೈಲುಗಳು, ಕಾದಿರಿಸಿಕೊಂಡ ಬಸ್ಸುಗಳು, ಖಾಸಗಿ ಬಸ್ಸುಗಳು, ಲಾರಿಗಳು, ಟ್ರಾಕ್ಟರುಗಳು, ಸ್ಕೂಟರುಗಳು, ಸೈಕಲುಗಳು, ಕುದುರೆ ಬಂಡಿಗಳು, ಎತ್ತಿನ ಗಾಡಿಗಳು ಸಾವಿರಾರು ಯಾತ್ರಿಗಳನ್ನು ಅಖಂಡ ಪ್ರವಾಹವಾಗಿ ನಿಲಯದಲ್ಲಿ ತಂದಿಳಿಸಿದುವು. ವಿದೇಶಗಳಿಂದ ಸಾವಿರಾರು ಜನರು ಬೆಂಗಳೂರಿಗೆ ಬಂದು ಅಲ್ಲಿಂದ

ಟ್ರ್ಯಾಕ್ಸ್‌ಗಳಲ್ಲಿ ಬಂದು ಸೇರಿದರು. ಬಾಬಾ ಬಹುದೂರದಲ್ಲಿ ಒಂದು ಕೇಸರಿ ಚುಕ್ಕೆಯಾಗಿ ಕಾಣಿಸುತ್ತಾ ಎಂಬ ಭವಿಷ್ಯವಾಣಿ ನಿಜವೇ ಆಗಿಬಿಟ್ಟಿತು. ಬೃಹದಾಕಾರದ ಏಳು ಶೆಡ್‌ಗಳಲ್ಲದೆ ನೂರಾರು ತಾತ್ಕಾಲಿ ವಸತಿಗಳನ್ನು ನಿರ್ಮಿಸಲಾಗಿತ್ತು. ಸಾವಿರಾರು ಗುಡಾರಗಳನ್ನೂ ಚಪ್ಪರಗಳನ್ನೂ ಹಾಕಿ ಊರಿನ ಒಳಗೂ ಹೊರಗೂ ಇರುವ ಒಂದೊಂದಂಗಲವನ್ನೂ ಬಿಡದ ಹಾಗೆ ತುಂಬಲಾಗಿತ್ತು. ಸೇವಾದಳದ 5,000 ಜನ ಸದಸ್ಯರು ರಾತ್ರಿ ಹಗಲು ದುಡಿದರು. ಅಡಿಗೆ ಮಾಡಿದರು, ಬಡಿಸಿದರು, ಗುಡಿಸಿದರು, ಶುಚಿಗೊಳಿಸಿದರು, ಕಾವಲು ಕಾಯ್ದರು, ಮಾರ್ಗದರ್ಶನ ಮಾಡಿದರು, ಸಹಾಯ ಮಾಡಿದರು. ತಾತ್ಕಾಲಿಕವಾಗಿ ಚಿಕಿತ್ಸಾಲಯಗಳಲ್ಲೂ ಆಸ್ಪತ್ರೆಯಲ್ಲೂ ವೈದ್ಯರ ತಂಡವು ಕಾರ್ಯೋನ್ಮುಖವಾಗಿತ್ತು. ಪಾಶ್ಚಾತ್ಯ, ಪೌರ್ವಾತ್ಯ ಎರಡೂ ಪದ್ಧತಿಯ ಆಹಾರ ನೀಡುವ ಭೋಜನ ಶಾಲೆಗಳು ಸಿದ್ಧವಾದುವು.

ಪ್ರತಿಯೊಂದು ರಾಜ್ಯದಿಂದಲೂ ಆರಿಸಿ ಬಂದ ಸುಮಾರು 1000 ಬಾಲವಿಕಾಸ ಮಕ್ಕಳ ರ್‍ಯಾಲಿ ನಡೆಯಿತು. ಈ ಮಕ್ಕಳು ಭಗವಾನರ ಸಮ್ಮುಖದಲ್ಲಿಯೇ ಪಥಸಂಚಲನ ಮಾಡುವ ಅಪೂರ್ವ ಅವಕಾಶ ಪಡೆದರು. ಒಂದು ಸಾವಿರಕ್ಕೂ ಹೆಚ್ಚು ಜನ ಬಾಲವಿಕಾಸ ಗುರುಗಳ ಎರಡು ದಿನದ ಸಮ್ಮೇಳನಕ್ಕೆ 8,000 ಪ್ರತಿನಿಧಿಗಳು ಐವತ್ತಕ್ಕೂ ಹೆಚ್ಚು ದೇಶಗಳಿಂದ ಆಗಮಿಸಿದ್ದರು.

18ನೆಯ ತಾರೀಕು ದಕ್ಷಿಣ ಭಾರತ ದೇವಾಲಯ ವಾಸ್ತುಶಿಲ್ಪದ ಮಾದರಿಯಲ್ಲಿ ಕಟ್ಟಿದ ಭವ್ಯವಾದ ಗೋಪುರವನ್ನು ಉದ್ಘಾಟಿಸಲಾಯಿತು. ಪುಟ್ಟಪರ್ತಿಯ ಪ್ರಾಚೀನ ದೇವಾಲಯಗಳನ್ನು ಬಾಬಾ ಪುನರ್ನಿರ್ಮಾಣ ಮಾಡಿಸಿದ್ದರು. ಬಹು ದೀರ್ಘಕಾಲದ ಇತಿಹಾಸವುಳ್ಳ, ಗೋಪಾಲಕೃಷ್ಣ ದೇವಾಲಯವೂ ಅವುಗಳಲ್ಲಿ ಒಂದು. ದೇವಾಲಯದಲ್ಲಿದ್ದ ಎಲ್ಲ ದೇವರುಗಳ ಬೆಳ್ಳಿ ವಿಗ್ರಹಗಳನ್ನು ಭಾರೀ ರಥದ ಮೇಲೆ ಇರಿಸಿ ಹಳ್ಳಿಯಲ್ಲಿ ಒಯ್ಯಲಾಯಿತು. ಆ ಪವಿತ್ರಗ್ರಾಮದ ಇತಿಹಾಸದಲ್ಲಿ ಅದೊಂದು ಅಪೂರ್ವ ದಿನ. ಈ ಸಮಾರಂಭಗಳ ಅಂಗವಾಗಿ ಪುರುಷೋತ್ತಮ ಯಜ್ಞವೂ ನಡೆಯಿತು. ಪೂರ್ಣಾಹುತಿಯು ಜನ್ಮೋತ್ಸವ ದಿನದ ಪ್ರಮುಖ ಅಂಗವಾಗಿದ್ದು ಅಸಂಖ್ಯಾತ ಜನರನ್ನು ಆನಂದಭರಿತರನ್ನಾಗಿ ಮಾಡಿತು.

ಜಾಗತಿನ ಸಮ್ಮೇಳನವು ಒಂದು ಉತ್ಸಾಹಾನುಭವನದ ಸಂದರ್ಭವಾಯಿತು. ಬೇರೆ ಬೇರೆ ದೇಶಗಳ, ಬೇರೆ ಬೇರೆ ಧರ್ಮಗಳಿಗೆ ಸೇರಿದ ಸಹಸ್ರಾರು ಭಕ್ತರು ವಿನಯ, ಭಕ್ತಿಗಳಿಂದ ನಡೆದು ಭಗವಾನರ ಬಳಿಗೆ ಹೋಗಿ ಅವರಿಗೆ ಪುಷ್ಪಮಾಲಿಕೆಯನ್ನು ಅರ್ಪಿಸಿದರು. ಚಂದ್ರನ ಮೇಲೆ ನಿಂದು ಮಾನವ ಜನಾಂಗದ ದುರಂತವನ್ನು ವೀಕ್ಷಿಸಿದ ಗಗನಯಾನಿ ಎಡ್ಗರ್ ಮಿಚೆಲ್ "ಸಂಸ್ಕೃತಿಯು ಮಾನವನು ಮಾನವ ಜನಾಂಗವನ್ನು ಅರಿತುಕೊಳ್ಳುವಂತೆ ಮಾಡುವುದಾದರೂ ಯಾವಾಗ ?" ಎಂದು ಉದ್ಗರಿಸಿದ್ದನು. ಅವನು ಅಂದು ಪ್ರಶಾಂತಿ ನಿಲಯದಲ್ಲಿ ಇದ್ದಿದ್ದರೆ ಶ್ರದ್ಧೆಯನ್ನೂ ಆಸೆಯನ್ನೂ ಬೆಳೆಸಿಕೊಳ್ಳುತ್ತಿದ್ದನು. ನೆರೆದ ಅಗಾಧ ಜನಸ್ತೋಮವು ಭಗವಾನರ ಉಪದೇಶಕ್ಕೆ ವಿಧೇಯತೆಯಿಂದ ನಡೆದುಕೊಳ್ಳುವುದಾಗಿ ಪ್ರಮಾಣ ಮಾಡಿತು. ಸತ್ಯ, ಶಾಂತಿ ಮತ್ತು ಪ್ರೇಮಗಳನ್ನು ಬೆಳೆಸಿಕೊಂಡು ಕರ್ತವ್ಯ, ಶ್ರದ್ಧೆ ಮತ್ತು ಶಿಸ್ತುಗಳ ಹಾದಿಯಲ್ಲಿ ಪ್ರಗತಿ ಹೊಂದುವುದಾಗಿ ಶಪಥಗೈದಿತು.

1976ರ ಶಿವರಾತ್ರಿಯಂದು ಉತ್ಸವದ ಪ್ರಾರಂಭದ ಕುರುಹಾಗಿ ಪ್ರಶಾಂತಿ ಧ್ವಜಾರೋಹಣ ಮಾಡುತ್ತಾ ಬಾಬಾ ಹೇಳಿದರು : "ವಿಶ್ವ ಪರಬ್ರಹ್ಮದಿಂದ ಮೂಡುವ ಲಿಂಗವೇ ಬ್ರಹ್ಮಾಂಡ. ಮೊದಲು ಇಚ್ಛೆಯಾಗಿ ಆಮೇಲೆ ವಿಚಾರವಾಗಿ ರೂಪುಗೊಂಡು ಆಮೇಲೆ ಕೊನೆಗೆ ಸಂಕಲ್ಪವಾಗಿ ಸ್ಥಿರವಾಗುತ್ತದೆ. ಶಿವೇಚ್ಛೆಯ ಹರಳುಗಟ್ಟಿದ ರೂಪವೇ ಬ್ರಹ್ಮಾಂಡ. ಆದ್ದರಿಂದ ನೀವೂ ಶಿವನಿಂದಲೇ ಇಚ್ಛಿತರಾಗಿ, ಶಿವನಿಂದಲೇ ರೂಪುಗೊಂಡಿದ್ದೀರಿ."

## ದೇವರ ಉಡುಗೆ

ಮಾರ್ಚ ತಿಂಗಳ ಕೊನೆಯ ವಾರದಲ್ಲಿ ಭಗವಾನರು ಹೈದರಾಬಾದಿಗೆ ವಿಮಾನದಲ್ಲಿ ಹೋಗಿ ಶಿವಂನಲ್ಲಿ ತಂಗಿದ್ದರು. ಅಲ್ಲಿಯ ಸತ್ಯಸಾಯಿ ಸೇವಾ ಸಮಿತಿಯು ಹೈದರಾಬಾದ್-ಸಿಕಂದರಾಬಾದ್ ಅವಳಿ ನಗರಗಳ ಗಣ್ಯರನ್ನು ಭಗವಾನರ ಕೃಪಾಶೀರ್ವಾದಗಳನ್ನು ಹಂಚಿಕೊಳ್ಳಲು ಆಹ್ವಾನಿಸಿತ್ತು. ಸಭೆಗೆ ಶ್ರೀ ಮೋಹನಲಾಲ್ ಸುಖಾಡಿಯಾ ಅಧ್ಯಕ್ಷರಾಗಿದ್ದರು. ಆಗ ಅವರು ಆಂಧ್ರಪ್ರದೇಶದ ಗವರ್ನರ್ ಆಗಿದ್ದರು. ಭಗವಾನರ ಅವತಾರೋದ್ದೇಶ ಮಾನವ ಜನಾಂಗವನ್ನು ಮತ್ತೆ ಸರಿಯಾದ ಹಳಿಯ ಮೇಲೆ ನಿಲ್ಲಿಸುವುದೇ ಆಗಿದೆ ಎಂದು ಅವರು ನುಡಿದರು. ತಮ್ಮ ಉಪನ್ಯಾಸದಲ್ಲಿ ಬಾಬಾ ಹೇಳಿದರು : "ಜಗತ್ತಿನಲ್ಲಿ ಪೂರ್ವ ಪಶ್ಚಿಮ ಎಂಬ ಭೇದವಿಲ್ಲ. ಸಮಸ್ತ ಮಾನವ ಜನಾಂಗವೂ ಒಂದೇ. ವಿಶ್ವವು ಜಡವಸ್ತುವಾಗಿ ಸ್ಪರ್ಶಕ್ಕೆ ಒದಗುವ ಶಕ್ತಿ. ಮನುಷ್ಯನು ತನ್ನ ಇಂದ್ರಿಯಾನುಭವಗಳನ್ನು ಮತ್ತು ಆ ಅನುಭವಗಳಿಂದ ಸಾಧಿಸಿಕೊಳ್ಳುವ ಕಲ್ಪನೆಗಳನ್ನು ಅವಲಂಬಿಸುತ್ತಾನೆ. ಆದ್ದರಿಂದಲೇ ಅವನಿಗೆ ಇಂದ್ರಿಯ ಜಗತ್ತಿನಾಚೆಯ ಅನುಭವಗಳ ಅರಿವಿನ ಕೊರತೆಯಿದೆ". ತೆಲುಗು ನೂತನ ವರ್ಷಾರಂಭದ ದಿನ ಭಗವಾನರು ಶಿವಂನಲ್ಲಿ ಭಾರೀ ಭಕ್ತಸ್ತೋಮವನ್ನು ಉದ್ದೇಶಿಸಿ ಮಾತನಾಡಿದರು. ಆ ದಿನ ನಗರದಾದ್ಯಂತ ನೂರಕ್ಕಿಂತಲೂ ಹೆಚ್ಚು ಪ್ರಥಮ ಚಿಕಿತ್ಸಾ ಕೇಂದ್ರಗಳನ್ನು ಸ್ಥಾಪಿಸಿ, ಗಾಯಗೊಂಡವರಿಗೆ, ಕಾಯಿಲೆಯಿಂದ ನರಳುವವರಿಗೆ ಸೇವೆ ಸಲ್ಲಿಸಿದ ಸೇವಾದಳದ ಕಾರ್ಯಕರ್ತರನ್ನು ಆಶೀರ್ವದಿಸಿದರು. ಸಮಿತಿಯು ಕ್ಯಾಸಲ್‌ಹಿಲ್‌ನಲ್ಲಿ ಒಂದು ಐತಿಹಾಸಿಕ ಕಟ್ಟಡವನ್ನು ಕೊಂಡು ಕೊಂಡಿತ್ತು. ಅಲ್ಲಿ ಮಕ್ಕಳಿಗಾಗಿ ಒಂದು ಬೋರ್ಡಿಂಗ್ ಸ್ಕೂಲನ್ನು ಸ್ವಾಮಿ ಉದ್ಘಾಟಿಸಿದರು. ಶಾಲೆಯು ಭಗವಾನರು ಹಾಕಿಕೊಟ್ಟ ನಿರ್ದೇಶಕ ಸೂತ್ರಗಳ ಪ್ರಕಾರ ನಡೆಯುತ್ತಿದೆ. ಮಕ್ಕಳು ವಿನಯ, ಸೇವಾ ಭಾವನೆ, ಗೌರವಗಳನ್ನು ಕಲಿಯಬೇಕು, ನಮ್ಮ ಪ್ರಾಚೀನ ಪರಂಪರೆಯನ್ನು ಅರಗಿಸಿಕೊಳ್ಳಬೇಕು, ಶಿಸ್ತಿನಿಂದ ಶ್ರದ್ಧಾಳುಗಳಾಗಿ ಬೆಳೆಯಬೇಕು ಎಂಬುದು ಭಗವಾನರ ಇಚ್ಛೆ. ವಿದ್ಯಾರ್ಥಿಗಳು ನಿಶ್ಚಿತ ಪಾಠ್ಯ ವಿಷಯಗಳನ್ನು ಅರಗಿಸಿಕೊಳ್ಳುವಾಗಲೇ ಭಜನೆಗಳಲ್ಲಿ ಭಾಗವಹಿಸಬೇಕು, ಕೇವಲ ಸಾತ್ವಿಕ ಆಹಾರವನ್ನು ಸೇವಿಸಬೇಕು. ಅರ್ಪಿತ ಮನೋಭಾವದ ಅಧ್ಯಾಪಕರು ತಮ್ಮ ವೃತ್ತಿಯನ್ನು 'ಸಾಯಿ ಆರಾಧನೆ' ಎಂದೇ ಬಗೆದು ಶ್ರದ್ಧೆಯಿಂದ ನಿರ್ವಹಿಸುವರು. ಆಧುನಿಕ ಮಾನವನು ತನ್ನ ಉದ್ಧಟ ಅವಿವೇಕದಿಂದ ನದಿಗಳನ್ನು, ಸಾಗರಗಳನ್ನು ಕಲುಷಿತಗೊಳಿಸುತ್ತಿದ್ದಾನೆ ; ಅವನ ಈ ವರ್ತನೆಯಿಂದ ಮರುಭೂಮಿಗಳು ವಿಸ್ತಾರಗೊಳ್ಳುತ್ತಾ ಬಂದು ಬೇಸಾಯದ ಭೂಮಿಯನ್ನು ಕಬಳಿಸುತ್ತಿವೆ, ಅರಣ್ಯಗಳು ನಾಶವಾಗುತ್ತಿವೆ. ಈ ಘೋರ ಪರಿಸ್ಥಿತಿಯನ್ನು ಉಲ್ಲೇಖಿಸಿ ಮೇ 6ನೇ ತಾರೀಕು ಭಗವಾನರು ಒಂದು

ದಿವ್ಯೋಪನ್ಯಾಸದಲ್ಲಿ ಹೇಳಿದರು : "ನಿಸರ್ಗವು ಭಗವಂತನ ಉಡುಗೆ, ವಿಶ್ವವೇ ಮಾನವನಿಗೆ ವಿಶ್ವವಿದ್ಯಾನಿಲಯ. ಅವನು ನಿಸರ್ಗವನ್ನು ಭಕ್ತಿ ಗೌರವದಿಂದ ಕಾಣಬೇಕು. ನಿಸರ್ಗವನ್ನು ಗೆಲ್ಲುವುದು ಎಂದಾಗಲಿ, ನಿಸರ್ಗದ ಶಕ್ತಿಗಳ ಶೋಷಣೆ ಮಾಡುವುದೆಂದಾಗಲಿ ಮಾತನಾಡಲು ಕೂಡ ಅವನಿಗೆ ಹಕ್ಕಿಲ್ಲ. ಅವನು ನಿಸರ್ಗದಲ್ಲಿ ಭಗವಂತನನ್ನು ಕಾಣಲು ಮುಂದಾಗಬೇಕು. ಎಲ್ಲರೂ ಭಗವಂತನ ಎಸ್ಟೇಟಿನಲ್ಲಿರುವ ತಾತ್ಕಾಲಿಕ ಹಾಗೂ ಅಲ್ಪಕಾಲಾವಧಿಯ ಬಾಡಿಗೆದಾರರು ಅಷ್ಟೆ."

ಮೇ 12ನೆಯ ತಾರೀಕು ಬಾಬಾ ಅವರನ್ನು ಸ್ವಾಗತಿಸುವ ಮಹದ್ಭಾಗ್ಯ ಮುಂಬಯಿಯ ಪಾಲಿಗೆ ದೊರಕಿತು. ಸಂದರ್ಭ ಧರ್ಮಕ್ಷೇತ್ರದ ಉದ್ಘಾಟನೆಯ ವಾರ್ಷಿಕೋತ್ಸವ. ಅಂದು ಪವಿತ್ರವಾದ ಗುರುವಾರ. ಬೌದ್ಧರಿಗೆ ಮೂರು ಕಾರಣಗಳಿಂದ ಪರಮ ಪವಿತ್ರವಾದ ದಿನ. ಗೌತಮ ಜನಿಸಿದ್ದು, ಅವನು ಬುದ್ಧನಾದದ್ದು ಮತ್ತು ಅವನು ಪರಿನಿರ್ವಾಣ ಹೊಂದಿದ್ದುದು ಅಂದು.

## ನೀಲಗಿರಿ

ಭಾರತೀಯ ಸಂಸ್ಕೃತಿ ಮತ್ತು ಆಧ್ಯಾತ್ಮವನ್ನು ಕುರಿತು 1976ರ ವಸಂತ ಶಿಬಿರವನ್ನು ನೀಲಗಿರಿ ಬೆಟ್ಟಗಳ ನಡುವೆ ಇರುವ ಉದಕಮಂಡಲದ ನಂದನವನದಲ್ಲಿ ನಡೆಸಲಾಯಿತು. ಶಿಬಿರ ಹದಿನೈದು ದಿನ ನಡೆಯಿತು. ಸತ್ಯಸಾಯಿ ಕಾಲೇಜುಗಳಿಂದ ಆರಿಸಿದ ಸುಮಾರು ಇನ್ನೂರು ಜನ ಭಾಗವಹಿಸಿದ್ದರು. ಈ ಶಿಬಿರದ ಒಂದು ವೈಶಿಷ್ಟ್ಯವೆಂದರೆ, ಅಧ್ಯಾಪಕ ಪಾತ್ರವನ್ನು ಹಿರಿಯ ವಿದ್ಯಾರ್ಥಿಗಳಿಗೆ ವಹಿಸಿದ್ದುದು. ಅವರು ವೇದಾಂತ, ಗೀತೆ, ಪುರುಷೋತ್ತಮ ಯಜ್ಞ, ರಾಮಕೃಷ್ಣ, ವಿವೇಕಾನಂದ, ಹುಮಾನ್, ಭಾಗವತ ಮೊದಲಾದ ವಿಷಯಗಳ ಬಗೆಗೆ ಆಳವಾದ ಅಧ್ಯಯನ ಮಾಡಿ, ಮನನ ಮಾಡಿ, ಸ್ಪಷ್ಟವಾಗಿ ಅರಿತು ಮಾತನಾಡಿದರು. ಡಾ.ಎಸ್.ಭಗವಂತಂ ಅವರು ಶಿಬಿರವು ಅಭೂತಪೂರ್ವ ಯಶಸ್ಸು ಪಡೆದಿದೆ ಎಂದು ಶ್ಲಾಘಿಸಿದರು. ಆಮೇಲೆ ಶಿಬಿರಾರ್ಥಿಗಳು ಬಸ್ ನಿಲ್ದಾಣ, ರೈಲು ನಿಲ್ದಾಣ, ಮಾರ್ಕೆಟ್ ಪ್ರದೇಶಗಳಿಗೆ ಸಮಾಜ ಸೇವಾ ಕಾರ್ಯ ಮಾಡುವ ಸಲುವಾಗಿ ಚದುರಿ ಹೋದರು. ಪ್ರದೇಶವನ್ನು ಅವರು ಎಷ್ಟು ಸೊಗಸಾಗಿ ಸ್ವಚ್ಛಗೊಳಿಸಿದರೆಂದರೆ, ಮುನಿಸಿಪಲ್ ಕೌನ್ಸಿಲು ಒಂದು ನಿರ್ಣಯವನ್ನು ಅಂಗೀಕರಿಸಿ ವ್ಯವಸ್ಥಾಪಕರಿಗೆ ಕೃತಜ್ಞತಾ ಪೂರ್ವಕ ಮೆಚ್ಚುಗೆಯನ್ನು ವ್ಯಕ್ತಪಡಿಸಿತು. ಶಿಬಿರವು ಸಮಾಪನಗೊಳ್ಳುತ್ತಿದ್ದಾಗ ಭಗವಾನರು ಒಂದು ವಿಶೇಷ ಸಭೆಯಲ್ಲಿ ತಮ್ಮ ಶಾಲಾದಿನಗಳನ್ನು ಕುರಿತು, ತಂದೆ ತಾಯಿ ಗುರುಗಳು ಮತ್ತು ಶಾಲಾ ಗೆಳೆಯರೊಂದಿಗೆ ತಾವು ಹೊಂದಿದ್ದ ಸಂಬಂಧ, ತಮ್ಮ 'ಪೋಷಕರೂ' ಆಗಿದ್ದ ತಮ್ಮ ಅಣ್ಣನೊಂದಿಗೆ ಇದ್ದನಂಟು ಮೊದಲಾದ ವಿಷಯಗಳನ್ನು ಕುರಿತು ಹೇಳಿದರು. ತಮ್ಮೆದುರಿಗೆ ಕುಳಿತಿದ್ದ ವಿದ್ಯಾರ್ಥಿಗಳು ವಹಿಸಬೇಕಾದ ಪಾತ್ರದ ಬಗೆಗೆ ತಾವು ಹಾಕಿದ್ದ ಯೋಜನೆಯನ್ನು ವರ್ಣಿಸಿದರು. ಸಹನೆ, ವಿರಕ್ತಿ, ಸಹಾನುಭೂತಿ, ವಿನಯ ಮತ್ತು ಗೌರವಗಳನ್ನು ಬೆಳೆಸಿಕೊಳ್ಳಬೇಕೆಂದು ಒತ್ತಾಯಮಾಡಿ ಹೇಳಿದರು. ಮಗುವಾಗಿದ್ದಾಗಿನಿಂದಲೇ ಸ್ವತಃ ತಾವೇ ಇದಕ್ಕೆ ಮಾದರಿಯಾಗಿದ್ದುದನ್ನು ಮನವರಿಕೆ ಮಾಡಿದರು. ಕೈ ಆಡಿಸಿ ಭಾರತದ ನಕ್ಷೆಯ ಉಬ್ಬು ಚಿತ್ರವಿದ್ದ ಒಂದು ಬೆಳ್ಳಿಯ ಫಲಕವನ್ನು ಸೃಷ್ಟಿಸಿದರು. ಅದರಲ್ಲಿ ಪುಟ್ಟಪರ್ತಿ, ಮುಂಬಯಿ, ಭುವನೇಶ್ವರ, ಮದರಾಸು, ದೆಹಲಿ, ಕಲ್ಕತ್ತ, ಶಿಲಾಂಗ್, ಹೈದರಾಬಾದ್ ಮತ್ತು ಇತರ ಕೆಲವು ನಗರಗಳನ್ನು

ಉಜ್ವಲ ರತ್ನಗಳನ್ನು ಮೆಟ್ಟಿ ಗುರುತಿಸಲಾಗಿತ್ತು. ಬರುವ ವರ್ಷಗಳಲ್ಲಿ ಈ ಕೇಂದ್ರಗಳಿಂದ ಸಾಯಿ ಸಂದೇಶವು ಪ್ರಸಾರವಾಗುತ್ತದೆ ಎಂದು ಭಗವಾನರು ಪ್ರಕಟಿಸಿದರು. ಭಗವಾನರ ದಿವ್ಯೋಪನ್ಯಾಸದ ಮುಖ್ಯ ವಸ್ತು ಭಗವಾನ್ ಶ್ರೀ ಕೃಷ್ಣನು ಕೌರವ-ಪಾಂಡವ ಸಂಘರ್ಷಕ್ಕೆ ಸಂಬಂಧಿಸಿದಂತೆ ವಹಿಸಿದ ಪಾತ್ರ, ಹೂಡಿದ ಹಂಚಿಕೆಗಳು ಮಹಾಭಾರತದಲ್ಲಿ ಹೇಗೆ ನಿರೂಪಿತವಾಗಿವೆ ಎನ್ನುವುದು. ಕೃಷ್ಣ ಭಗವಂತ ಈಗಲೂ ನಮ್ಮೊಂದಿಗಿದ್ದಾರೆ ; ದೈವೀ-ಅಸುರಿ ಪ್ರವೃತ್ತಿಗಳನ್ನು ಸಂಕೇತಿಸುವ ಧರ್ಮ-ಅಧರ್ಮ ಶಕ್ತಿಗಳ ನಡುವಣ ಸಂಘರ್ಷ ಇಂದಿಗೂ ಮಾನವ ಜನಾಂಗಕ್ಕೊದಗಿದ ಮಹಾಪೀಡೆಯಾಗಿದೆ. ಆದ್ದರಿಂದ ಭಗವಾನರು ಮಹಾಭಾರತ ಕಾಲದಲ್ಲಿ ತೋರಿಸಿದ ಕಾರ್ಯವಿಧಾನ, ಉದ್ದೇಶಗಳು ಇಂದು ಅವರು ನೀಡುತ್ತಿರುವ ಸಂದೇಶದ ಭಾಗವೇ ಆಗಿದ್ದುವು.

## ಶ್ರೀಶೈಲಂ

ಉದಕಮಂಡಲದಲ್ಲಿರುವಾಗಲೇ ಬಾಬಾ ಕಾರಿನಲ್ಲಿ ಘಟ್ಟವನ್ನು ಇಳಿದು ಕೇರಳ ಕರಾವಳಿಯ ಪ್ರಸಿದ್ಧ ಐತಿಹಾಸಿಕ ನಗರ ಕ್ಯಾಲಿಕಟ್ (ಕಲ್ಲಿಕೋಟೆ)ಗೆ ಹೋದರು. ಪೋರ್ಚುಗೀಸ್ ಸಾಹಸಿ ವಾಸ್ಕೋಡಗಾಮನು ಕ್ರಿ.ಶ. 1498ರಲ್ಲಿ ಬಂದಿಳಿದದ್ದು ಅಲ್ಲಿಯೇ. ಕಲ್ಲಿಕೋಟೆಯಿಂದ ಉತ್ತರಕ್ಕೆ ಮೂವತ್ತು ಮೈಲಿ ದೂರದಲ್ಲಿ ಮೂರು ಕಡೆ ಸಮುದ್ರ ಸುತ್ತುವರಿದ ಬೆಟ್ಟವೊಂದಿದೆ. ಅಲ್ಲಿ ಕೆಲವು ದಿನಗಳನ್ನು ಕಳೆದ ರವೀಂದ್ರನಾಥ ಟಾಗೋರರು ಅದನ್ನು 'ಶ್ರೀ ಶೈಲಂ' ಎಂದು ಕರೆದಿದ್ದರು. ಅಲ್ಲಿ ಕೇರಳದ ಶ್ರೀ ಸತ್ಯಸಾಯಿ ಟ್ರಸ್ಟ್ ಒಂದು ವಿದ್ಯಾಪೀಠವನ್ನು-ಪಬ್ಲಿಕ್ ಸ್ಕೂಲ್-ಸ್ಥಾಪಿಸಿ ಸಾಯಿ ಮಾರ್ಗದಲ್ಲಿ ಶಿಕ್ಷಣ ಒದಗಿಸಲು ಉದ್ದೇಶಿಸಿದರು. ಭಗವಾನರು ಈ ಶಾಲೆಗೆ ಅಡಿಗಲ್ಲು ಇಟ್ಟರು, ಯೋಜನೆಯನ್ನು ಆಶೀರ್ವದಿಸಿದರು. ಅಲ್ಲಿ ಅವರ ದರ್ಶನ ಪಡೆಯಲು ಸಂಭಾಷಣೆಯನ್ನಾಲಿಸಲು 30,000ಕ್ಕೂ ಹೆಚ್ಚು ಜನರು ನೆರೆದಿದ್ದರು.

ಪ್ರಪಂಚಾದ್ಯಂತ ಆಧ್ಯಾತ್ಮಿಕ ಸಾಧಕರು ತಮ್ಮ ಗುರುವನ್ನು ಹೃದಯ ಮಂದಿರಕ್ಕೆ ಸ್ವಾಗತಿಸುವ ಗುರು ಪೂರ್ಣಿಮಾ ಸಂದರ್ಭಕ್ಕೆ ಭಗವಾನರು ಪುಟ್ಟಪರ್ತಿಯಲ್ಲಿದ್ದರು. ಅವತಾರ ಪುರುಷನನ್ನು ಹಡೆದ ದಿವ್ಯ ಮಾತೆ ಈಶ್ವರಮ್ಮನವರ ದಿವ್ಯ ಸ್ಮರಣೆಗಾಗಿ ಸ್ಥಾಪಿತವಾದ ಪ್ರೌಢಶಾಲೆಯ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಆ ಪವಿತ್ರ ದಿನದಂದು ಭಗವಾನರ ಆಶೀರ್ವಾದ ಪಡೆದರು. ಗ್ರಾಮೀಣ ಜನತೆಯಲ್ಲಿ ಸಾಕ್ಷರತೆ ಹೆಚ್ಚಿಸಿ ಶಿಕ್ಷಣ ಒದಗಿಸಲು ಭಗವಾನರು ಹಾಕಿಕೊಂಡಿರುವ ಕಾರ್ಯಕ್ರಮದಲ್ಲಿ ಇದೊಂದು ಅತಿ ಮಹತ್ವದ ಹೆಜ್ಜೆ ಎಂದು ಶಿಕ್ಷಣದ ರಾಜ್ಯ ಸಚಿವರು ಘೋಷಿಸಿದರು. ಅಲ್ಲಿಂದ ಭಗವಾನರು ಪುಟ್ಟಪರ್ತಿ ಗ್ರಾಮದೊಳಕ್ಕೆ ಹೋದರು. ಅಲ್ಲಿ ಸುಮಾರು ಆರು ತಿಂಗಳ ಹಿಂದೆ ವಿಪ್ಲವ ಚಿತ್ರಾವತಿಯು ಕೊಚ್ಚಿ ನೆಲಸಮ ಮಾಡಿದ ಹರಿಜನರ ಗುಡಿಸಲುಗಳಿಗೆ ಬದಲಾಗಿ ಒಂದು ನೂರು ಮನೆಗಳ ಒಂದು ಹೊಸ ಬಡಾವಣೆಯನ್ನು ನಿರ್ಮಿಸಲಾಗಿತ್ತು. ಅಲ್ಲಿ ನೆರೆದ ಭಕ್ತರ ಬೃಹತ್ ಸಭೆಯನ್ನು ಉದ್ದೇಶಿಸಿ ಉಪನ್ಯಾಸ ಮಾಡುತ್ತಾ ಭಗವಾನರು, ಪ್ರತಿಯೊಬ್ಬ ಜೀವಿಯೂ ಭಗವಂತನ ವಿರಾಟ ಶರೀರದ ಒಂದು ಜೀವಕಣವಾಗಿದ್ದಾನೆ ; ವಿರಾಟ ಪುರುಷನ ಅಂಗಗಳೆಂದು ವೇದಗಳು ಬಣ್ಣಿಸಿರುವ ಜಾತಿಗಳು ಒಂದು ಅಖಂಡ ಪರಿಪೂರ್ಣ ವಸ್ತುವಿನ ಭಾಗಗಳು. ಮಾನವರಲ್ಲಿ ಅತ್ಯಂತ ದೀನನಾದವನಿಗೆ

ದುರ್ಬಲನಾದವನಿಗೆ ದರಿದ್ರನಾದವನಿಗೆ ಸೇವೆ ಸಲ್ಲಿಸುವುದೇ ಭಗವಂತನ ಪಾದಪೂಜೆ ಮಾಡಿದ ಹಾಗೆ ಎಂದು ಹೇಳಿದರು.

1976ರ ದಸರಾ ಉತ್ಸವದ ಎಲ್ಲಾ ಹತ್ತು ದಿನಗಳ ಕಾಲ ಭಗವಾನರು ಮನಸ್ಸು, ಅದರ ಚಂಚಲತೆ, ಅದರ ಸಾಮರ್ಥ್ಯಗಳು, ಅದನ್ನು ನೇರಗೊಳಿಸಿ ಬಲ ಪಡಿಸುವ ಸಾಧನೆ ಈ ವಿಚಾರಗಳಲ್ಲಿ ಮಾತನಾಡಿದರು. ವೇದ ಯಜ್ಞದ ಕೆಲಸದೊತ್ತಡದಲ್ಲೂ ಭಗವಾನರು ಭಾರತದ ಬೇರೆ ಬೇರೆ ರಾಜ್ಯಗಳಿಂದ ಬಂದಿದ್ದ ಮುನ್ನೂರಕ್ಕೂ ಹೆಚ್ಚು ಜನ ಜಿಲ್ಲಾ ಅಧ್ಯಕ್ಷರ ನೆರವಿಯನ್ನು ಅನುಗ್ರಹಿಸಿದರು. ಎರಡು ಸಾರಿ ಅವರ ಸಭೆ ನಡೆಯಿತು. ಅವರಿಗೆ ಸ್ವಾಮಿ ಶಿಸ್ತಿನ ಅಗತ್ಯವನ್ನು ಒತ್ತಿ ಹೇಳಿದರು. ಅವರ ಕರ್ತವ್ಯ ಮತ್ತು ಹೊಣೆಗಾರಿಕೆಗಳ ವಿಚಾರವಾಗಿ ಮಾರ್ಗದರ್ಶನ ಮಾಡಿದರು.

ಭಗವಾನರು 'ಸಾಯಿಧರ್ಮ'ವನ್ನು ವಿಸ್ತರಿಸಿ ವಿವರಿಸಿದ್ದರಿಂದ ಈ ಸಾರಿಯ ದಸರಾ ಉತ್ಸವ ಹೆಚ್ಚು ಮಹತ್ವದ್ದಾಯಿತು. ಮತಿಯು ಮತದ ಮೇಲೆ ಪ್ರಭಾವ ಬೀರುತ್ತದೆ. "ಈ ಧರ್ಮವು ಎಲ್ಲಾ ಧರ್ಮಗಳನ್ನು ಘೋಷಿಸಿ ಸಂವರ್ಧಿಸುತ್ತದೆ, ಅವುಗಳ ಸಮಾನ ಹಿರಿಮೆಯನ್ನು ಒತ್ತಿ ಹೇಳುವುದು ಸಾಯಿ ಧರ್ಮ" ಎಂದು ಅವರು ನುಡಿದರು.

## ವಿಶ್ವಾದ್ಯಂತ ನಾಮ ಸಂಕೀರ್ತನೆ

ಪ್ರಶಾಂತಿ ನಿಲಯದಲ್ಲಿ ಚಿನ್ನದ ಹಬ್ಬದ ವಾರದಲ್ಲಿ ನಡೆದ ಎರಡನೆಯ ಜಾಗತಿಕ ಸಮ್ಮೇಳನದಲ್ಲಿ ಭಕ್ತರು ಒಂದು ಮಹತ್ವದ ನಿರ್ಣಯವನ್ನು ಕೈಗೊಂಡರು. ನ್ಯೂಜೀಲೆಂಡಿನಿಂದ ಐಸ್‌ಲ್ಯಾಂಡ್‌ನವರೆಗೆ ಟೈವಾನಿನಿಂದ ಟ್ರಿನಿಟಾಡ್‌ವರೆಗೆ ನಲವತ್ತೈದಕ್ಕೂ ಮಿಕ್ಕು ದೇಶಗಳ 8,000ಕ್ಕೂ ಹೆಚ್ಚು ಕೇಂದ್ರಗಳಲ್ಲಿ ಶ್ರದ್ಧಾಳುಗಳು ಒಂದುಗೂಡಿ ಇಪ್ಪತ್ತನಾಲ್ಕು ಗಂಟೆಗಳ ಅಖಂಡ ಭಜನೆಯನ್ನು ನಡೆಸಬೇಕೆಂದೂ, ಅದು ಭೂಗೋಳವನ್ನು ಪೂರ್ತಿ ಸುತ್ತುವರಿದಂತಾಗುತ್ತದೆಂದೂ ನಿರ್ಧರಿಸಿದರು. ಈ ವಿಶ್ವನಾಮಸಂಕೀರ್ತನೆಗೆ ನಿಗದಿಪಡಿಸಿದ ದಿನವೆಂದರೆ ಪ್ರತಿವರ್ಷ ಭಗವಾನರ ಜನ್ಮದಿನೋತ್ಸವದ ಮೊದಲು ಬರುವ ಶನಿವಾರ-ಭಾನುವಾರ. ಪ್ರಶಾಂತಿ ನಿಲಯದಲ್ಲಿ ಒಂದು ಭಜನ ಗೋಷ್ಠಿಯನ್ನುದ್ದೇಶಿಸಿ ಮಾತನಾಡಿದ ಭಗವಾನರು ಹೀಗೆ ಹೇಳಿದರು, "ಭಜನೆ ನಿಮ್ಮ ಉಸಿರಾಟದಷ್ಟೇ ನಿರಂತರವಾಗಬೇಕು. ವಾಸ್ತವವಾಗಿ ಉಸಿರಾಟವು ಸೋಽಹಂ (ನಾನು ಅದೇ ಆಗಿದ್ದೇನೆ) ಎಂಬ ಮೂಲಮಂತ್ರವನ್ನು ಸದಾ ಜಪಿಸುತ್ತಲೇ ಇದೆ. ಇಡೀ ಬದುಕನ್ನು ಎದುರಿಗಿಟ್ಟು ನೋಡಿದಾಗ ಇಪ್ಪತ್ತನಾಲ್ಕು ಗಂಟೆ ಎನ್ನುವ ಅವಧಿ ಒಂದು ಕಣ್ಣುಮಿಟುಕಿಸಿದಷ್ಟು. ನಿಮ್ಮ ಬದುಕೇ ಭಗವಂತನ ವೈಭವವನ್ನು ಕುರಿತ ಒಂದು ಹಾಡು. ಆತ್ಮಪೂರ್ವಕವಾಗಿ ಅದನ್ನು ಹಾಡಿ, ಜೋರಾಗಿ ಹಾಡಿ ಸಾಮೂಹಿಕವಾಗಿ ಹಾಡಿ. ಸ್ವಾರ್ಥ ಲೋಭ ದ್ವೇಷ ಮಾತ್ಸರ್ಯಗಳು ಹೊಲೆಗೆಡಿಸಿರುವ ವಾತಾವರಣ ಅದರಿಂದ ಹೊಮ್ಮುವ ಪವಿತ್ರ ಕಂಪನಗಳಿಂದ ನಿರ್ಮಲವಾಗುತ್ತದೆ".

ಪುಟ್ಟಪರ್ತಿಯ ಸುತ್ತುಮುತ್ತಿನ ಹಳ್ಳಿಗಳು ಹುಟ್ಟು ಹಬ್ಬದ ವಾರವನ್ನು ಆಸಕ್ತಿಯಿಂದ ಕಾಯುತ್ತವೆ. ಈ ಹಬ್ಬದಲ್ಲಿ ಮೊದಲು ರಥೋತ್ಸವ ನಡೆಯುತ್ತದೆ. ಪುಟ್ಟಪರ್ತಿಯ ಎಲ್ಲಾ

ದೇವಾಲಯಗಳಲ್ಲಿ ಪೂಜೆಗೊಳ್ಳುತ್ತಿರುವ ವಿಗ್ರಹಗಳನ್ನು ಅಲಂಕೃತ ರಥದ ಮೇಲಿರಿಸಿ ಜನನಿಬಿಡವಾದ ರಸ್ತೆಗಳಲ್ಲಿ ಮೆರವಣಿಗೆ ಮಾಡಲಾಗುತ್ತದೆ. ಗಂಡಸರು, ಹೆಂಗಸರು, ಮಕ್ಕಳು, ಅವರ ಜಾತಿ,ಮತ ಯಾವುದೇ ಇರಲಿ, ಪರಮ ಸಂತೋಷದಿಂದ ಇದನ್ನು ನೋಡುತ್ತಾರೆ. ಹುಟ್ಟಿದ ಹಬ್ಬದ ದಿನ ಭಗವಾನರು ತಮ್ಮ ತಂದೆ ತಾಯಿಯರ ಸಮಾಧಿಗೆ ತೆರಳಿ ಅಲ್ಲಿ ಗ್ರಾಮಸ್ಥರಿಗೆ ಆಹಾರವನ್ನೂ ಬಟ್ಟೆಬರೆಗಳನ್ನೂ ಹಂಚುತ್ತಾರೆ.

1976ರ ಹುಟ್ಟಿದ ಹಬ್ಬದಂದು ಭಗವಾನರು, ಪವಾಡಗಳು ಅವತಾರ ಪುರುಷನ ಸ್ವಪ್ರೇರಿತ, ಸಹಜ ಅಭಿವ್ಯಕ್ತಿ ಎಂದು ಘೋಷಿಸಿದರು. "ರಾಮ ಎಂದರೆ ಸಂತೋಷವನ್ನು ನೀಡುವವನು ಎಂದು ಅರ್ಥ. ಕೃಷ್ಣ ಎಂದರೆ ಆಕರ್ಷಿಸುವವನು ಎಂದು. ನಿಮಗೆ ಸಂತೋಷವನ್ನು ನೀಡುವ, ನಿಮ್ಮ ಹೃದಯವನ್ನು ಆಕರ್ಷಿಸುವ ನನ್ನ ಯಾವುದೇ ಕಾರ್ಯ ನಿಮ್ಮ ಪರಿಭಾಷೆಯಲ್ಲಿ 'ಪವಾಡ' ಎನಿಸುತ್ತದೆ. ಅವತಾರ ಬರುವುದೇ ಸುಧಾರಿಸುವುದಕ್ಕಾಗಿ, ಪುನರ್ನಿರ್ಮಿಸುವುದಕ್ಕಾಗಿ. ಅವನ 'ಪವಾಡ' ಈ ಫಲವನ್ನು ಹೊಂದಿರುತ್ತದೆ. ಚಮತ್ಕಾರದ ಗುರಿ ಮಾನವ ಜನಾಂಗದ ಸಂಸ್ಕಾರ. ಅವತಾರ ಪುರುಷನು ಇದನ್ನು ಹೇಗೆ ಸಾಧಿಸುತ್ತಾನೆ ? ಆಕರ್ಷಿತರಾದ ಪ್ರತಿಯೊಬ್ಬರನ್ನೂ ಅವರು ಎಲ್ಲರನ್ನೂ ಪ್ರೇಮಿಸುವಂತೆ (ಎಲ್ಲರೂ ವಿವಿಧ ದೇಹಗಳಲ್ಲಿ ನಿಕ್ಷಿಪ್ತಗೊಂಡ ಅದೇ ಆತ್ಮವಾದ್ದರಿಂದ), ಆ ಪ್ರೇಮವನ್ನು ಪರೋಪಕಾರವಾಗಿ ಪರಿವರ್ತಿಸುವಂತೆ ಪ್ರೇಮದಿಂದ ಒಲಿಸಿ ಹೇಳಲಾಗುತ್ತದೆ. ಇದರ ಪರಿಣಾಮವಾಗಿ ಅವರ ಮನಸ್ಸುಗಳು ಪವಿತ್ರವಾಗುತ್ತವೆ, ಅವರ ಬುದ್ಧಿ ಶುದ್ಧವಾಗಿ ಹೃದಯಗಳು ನಿರ್ಮಲವಾಗುತ್ತವೆ. ಹೀಗೆ ಅವರು ತಮ್ಮ ಮೂಲ ಸತ್ವವಾದ ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳಲು ಸಮರ್ಥರಾಗುತ್ತಾರೆ. ಅದು ಪರಮಾತ್ಮವೆಂಬ ಸಾಗರದ ಒಂದು ಅಲೆ ಎಂದು ತಿಳಿಯುತ್ತಾರೆ. ಈ ಸಾಕ್ಷಾತ್ಕಾರವೇ ಮಾನವನ ಬದುಕಿನ ಗುರಿ."

ಪ್ರತಿ ವರ್ಷ ಡಿಸೆಂಬರ್ ೨ನೆಯ ದಿನ ಶ್ರೀ ಸತ್ಯಸಾಯಿ ಸೇವಾ ಸಂಸ್ಥೆಯು 'ವೈದ್ಯಕೀಯ ಸೇವಾ ದಿನ'ವಾಗಿ ಆಚರಿಸುತ್ತದೆ. ಪ್ರತಿ ಕೇಂದ್ರವೂ ತನ್ನ ಪ್ರದೇಶದ ಅಗತ್ಯಗಳು, ತನ್ನಲ್ಲಿರುವ ಸಂಪನ್ಮೂಲಗಳು ಇವುಗಳಿಗನುಸಾರವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತದೆ. ಆಸ್ಪತ್ರೆಗಳಿಗೆ ಆಕ್ಸಿಜನ್ ಸಿಲಿಂಡರುಗಳ ಕೊಡುಗೆ ನೀಡಲಾಗುತ್ತದೆ. ಅಂಗವಿಕಲರಿಗಾಗಿ ಗಾಲಿ ಕುರ್ಚಿಗಳನ್ನು ಒದಗಿಸಲಾಗುತ್ತದೆ. ಕುರುಡರಿಗಾಗಿ ಭಜನೆ ಕ್ಯಾಸೆಟ್ಟುಗಳನ್ನು ಪೂರೈಸಲಾಗುತ್ತದೆ. ಜೊತೆಗೆ ಕೊಳೆಗೇರಿ ನಿವಾಸಿಗಳಿಗೆ ಹಾಗೂ ಹಳ್ಳಿಗರಿಗೆ ವೈದ್ಯಕೀಯ ಪರೀಕ್ಷೆ ಪ್ರಾರಂಭಿಸಲಾಗುತ್ತದೆ. 1976ರಲ್ಲಿ ಭಗವಾನರು ನೀಡಿದವರು ಪಡೆದವರು ಇಬ್ಬರನ್ನೂ ಆಶೀರ್ವದಿಸಿದರು. ವಿವೇಚನೆಯಿಲ್ಲದೆ ಔಷಧಿಗಳನ್ನು ಬಳಸುವುದರ ವಿರುದ್ಧ ಜಾಗರೂಕತೆಯಿಂದಿರಬೇಕೆಂದು ನುಡಿದರು. ಅಗ್ಗವೂ, ಪರಿಣಾಮಕಾರಿಯೂ ಆದ ಉಪವಾಸ ಹಾಗೂ ಪಥ್ಯ, ಯೋಗಾಸನಗಳು ಮುಂತಾದ ವಿಧಾನಗಳನ್ನು ಅನುಸರಿಸಬೇಕೆಂದು ಬುದ್ಧಿಮಾತು ಹೇಳಿದರು. ಮದ್ಯಪಾನ ಮತ್ತು ಧೂಮಪಾನಗಳನ್ನು ಬಿಡಿ ಎಂದು ಒತ್ತಾಯಪಡಿಸಿದರು. "ಆರೋಗ್ಯವನ್ನು ಗಳಿಸಿ ಉಳಿಸಿಕೊಳ್ಳಬೇಕಾದ ಪಕ್ಷದಲ್ಲಿ ಕಾತರ, ಕಳವಳ, ಚಿಂತೆಗಳನ್ನು ಗೆಲ್ಲಬೇಕು" ಎಂದರು.

ಪೌರ್ವಾತ್ಯ ಪಾಶ್ಚಿಮಾತ್ಯ ದೇಶಗಳಿಂದ ಸಾವಿರಾರು ಜನ ಕ್ರಿಶ್ಚಿಯನ್ನರು ಆ ವರ್ಷದ ಕ್ರಿಸ್‌ಮಸ್ ಹಬ್ಬವನ್ನೂ ನೂತನ ವರ್ಷಾರಂಭವನ್ನೂ ಭಗವಾನರ ದಿವ್ಯ ಸನ್ನಿಧಿಯಲ್ಲಿ ಕಳೆಯಲೆಂದು ಬಂದರು. ಏಕೆಂದರೆ 'ಭೂಮಿಯ ಮೇಲೆ ಶಾಂತಿ ಹಾಗೂ ಜನರಲ್ಲಿ ಸೌಹೃದ' ಎಲ್ಲಾದರೂ ಇರುವುದಾದರೆ ಅದು ಇಂದೊಂದೇ ಸ್ಥಳದಲ್ಲಿ ಎಂದು ಅವರು ಕಂಡುಕೊಂಡಿದ್ದರು. "ಮನುಷ್ಯನ ಹೃದಯದಲ್ಲಿರುವ ಆನಂದ ತತ್ವದ ಇನ್ನೊಂದು ಹೆಸರೇ ಕ್ರಿಸ್ತ" ಎಂದು ನುಡಿದರು ಬಾಬಾ. "ಅವನನ್ನು ಕುರಿತು ಧ್ಯಾನ ಮಾಡಿ. ಸಕಲ ಜೀವಿಗಳಿಗೂ ಅವನ ಪ್ರೇಮ ದೊರಕೊಳ್ಳಲಿ ಎಂದು ಬೇಡಿರಿ. ಅವನು ನಿಮ್ಮೆಲ್ಲರ ಹೃದಯಗಳಲ್ಲೂ ತನ ದಿವ್ಯೋಜ್ವಲ ಕಾಂತಿಯಿಂದ ಮರು ಹುಟ್ಟು ಪಡೆಯಲಿ. ಆಗ ಮಾತ್ರವೇ ನೀವು ವಂದನೆ ಸಲ್ಲಿಸುತ್ತಾ ಪ್ರಾರ್ಥನೆಯಿಂದ ಪ್ರಾಮಾಣಿಕವಾಗಿ ಆ ದಿವ್ಯ ವೈಭವವನ್ನು ಮೆಚ್ಚಿ ಹಾಡುತ್ತಾ ಕ್ರಿಸ್‌ಮಸ್ ಆಚರಿಸಬಹುದು. ಕೇವಲ ತಿಂದು, ಕುಡಿದು, ಪಾನಮತ್ತರಾಗಿ ಹೊಟ್ಟೆಬಾಕರಾಗಿ ಈ ಪವಿತ್ರ ದಿನವನ್ನು ಹೊಲೆಗೆಡಿಸಬೇಡಿ." 1977ರ ನೂತನ ವರ್ಷಾರಂಭದಂದು ನೆರೆದಿದ್ದ ಭಕ್ತರನ್ನು ಉದ್ದೇಶಿಸಿ ಬಾಬಾ ಹೀಗೆ ನುಡಿದರು. ಒಂದು ಪದಕವನ್ನು ಸೃಷ್ಟಿಸಿದರು. ಅದರ ಒಂದು ಮುಖದಲ್ಲಿ ಮೇರಿ ಮತ್ತು ಬಾಲ ಏಸು, ಇನ್ನೊಂದು ಮುಖದಲ್ಲಿ ಜೋಸೆಫ್ ಚಿತ್ರಿತರಾಗಿದ್ದರು. ಮೇರಿಯ ಪವಿತ್ರತೆಯನ್ನೂ ಜೋಸೆಫನ ಬಲಿಷ್ಠ ಸರಳತೆಯನ್ನು ಚಿತ್ರಗಳು ವ್ಯಕ್ತಪಡಿಸುತ್ತಿದ್ದುವು. ಅದೊಂದು ದಿವ್ಯ ಸನ್ನಿವೇಶ.

1977ರ ಶಿವರಾತ್ರಿಯನ್ನು ಪ್ರಶಾಂತಿ ನಿಲಯದಲ್ಲಿ ಆಚರಿಸಲಾಯಿತು. ಭಗವಾನರು ಭಕ್ತರಿಗೆ ಕರೆ ಕೊಟ್ಟರು : "ಶ್ರಮಿಸಿ, ಅದು ನಿಮ್ಮ ಕರ್ತವ್ಯ ; ಹೋರಾಡಿ, ಅದು ನಿಮಗೆ ವಹಿಸಿರುವ ಕೆಲಸ; ಹಂಬಲಿಸಿ, ಅದೇ ನಿಜವಾದ ಮಾರ್ಗ ." ಸೋಮಾರಿತನ, ಮಂಕು, ಪೂರ್ವಾಗ್ರಹ ಇವುಗಳನ್ನು ಗೆಲ್ಲಬೇಕು. ಏಕೆಂದರೆ, ಅವು ಸೃಷ್ಟಿಸುವ ಕಗ್ಗತ್ತಲಲ್ಲಿ ಪ್ರತಿಯೊಂದು ಜೀವಿಯ ದಿವ್ಯತಾ ಪ್ರಜ್ಞೆ ಅಡಗಿ ಹೋಗಿರುತ್ತದೆ. "ಎಲ್ಲ 'ನಾನು'ಗಳೂ ಒಂದು ನಾನುವಿನ ಪ್ರತಿಬಿಂಬಗಳು" ಎಂದು ವಿವರಿಸಿದರು. ಈ ಮಧ್ಯೆ ಅವರು ಹೇಳಿಕೊಡುತ್ತಿದ್ದ ಭಜನೆಯ ನಡುವೆಯೇ ಶಿವರಾತ್ರಿಯ ಲಿಂಗ (ಸ್ಫಟಿಕ ಲಿಂಗ) ಭಗವಾನರಿಂದ ಮೂಡಿತು. ಅದನ್ನು ಎತ್ತಿ ಹಿಡಿದು, ಬೆಕ್ಕಸಬೆರಗಾದ ಜನಸಮೂಹಕ್ಕೆ ತೋರಿಸಿದರು. "ಇದು ಪಂಚ ಮಹಾ ತತ್ವಗಳ ಉಗಮದ ಸಂಕೇತ. ಲಿಂಗವು ಸಕಲ ನಾಮ ರೂಪಗಳ ಸಾಲ. ಅದು ರೂಪದೊಂದಿಗಿನ ರೂಪರಹಿತ ; ನಾಮದೊಂದಿಗಿನ ನಾಮರಹಿತ. ಸಾಕ್ಷಾತ್ ದೈವದಿಂದೊಡಮೂಡಿದ ಮೂಲ ವಸ್ತು." ಮಾರನೆ ಬೆಳಗ್ಗೆಯೇ ಭಗವಾನರು ಒಂದು ಅಪ್ರಿಯವಾದ ಸುದ್ದಿಯನ್ನು ಪ್ರಕಟಿಸಿದರು. ಇನ್ನು ಮುಂದೆ ಮಹಾಶಿವರಾತ್ರಿಯನ್ನು ಈ ರೀತಿಯಲ್ಲಿ ನಡೆಸುವುದನ್ನು ನಿಲ್ಲಿಸಲು ನಿರ್ಧರಿಸಿದ್ದೇನೆ ಎಂದರು. ಪ್ರಪಂಚದ ನಾನಾ ಭಾಗಗಳಿಂದ ಅಸಂಖ್ಯಾತ ಭಕ್ತ ಸಮೂಹ ಈ ದಿವ್ಯಾವಿರ್ಭಾವವನ್ನು ದರ್ಶಿಸಲು ಧಾವಿಸುತ್ತಿದ್ದಿತು. ನೆಲ ಜಲಗಳ ಮೇಲೆ ಬಹು ದೂರದಿಂದ ಬಂದು ಬೇಕಾದಷ್ಟು ಹಣ ವೆಚ್ಚಮಾಡಿಕೊಂಡು ಹಲವಾರು ತೆರನಾದ ಕಷ್ಟಗಳನ್ನು ಸಹಿಸಿ ಆ ಪುಣ್ಯ ಸಂದರ್ಭದಲ್ಲಿ ಒಂದು ಕ್ಷಣ ದರ್ಶನ ಮಾಡಲು ಬಂದರೂ ಅದು ಸಾಧ್ಯವಾಗದೆ ಪ್ರತಿವರ್ಷ ನಿರಾಶೆಯಿಂದ ಹಿಂದಿರುಗುತ್ತಿದ್ದುದನ್ನು ನೋಡಿ ಕರುಣಾಳುವಾದ ಭಗವಾನರು ಇನ್ನು ಮುಂದೆ ಅವರೆಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲೇ ಶಿವರಾತ್ರಿಯನ್ನು ಆಚರಿಸಬೇಕು ಎಂದೂ ಅಲ್ಲಿ ಖಂಡಿತವಾಗಿಯೂ ತಾವು ಇರುವುದಾಗಿಯೂ ಭರವಸೆ ಕೊಟ್ಟರು.

## ವಾಲ್ಟರ್ ಕೋವಾನ್ ಕಟ್ಟಡ

ಏಪ್ರಿಲ್ 28ನೆಯ ತಾರೀಕು ಬೃಂದಾವನ ಆವರಣದಲ್ಲಿ ವಿದ್ಯಾರ್ಥಿ ನಿಲಯದ ವಾಲ್ಟರ್ ಕೋವಾನ್ ಕಟ್ಟಡವನ್ನು ಭಾರತದ ಉಪ ರಾಷ್ಟ್ರಪತಿಯಾಗಿದ್ದ ಶ್ರೀ ಬಿ.ಡಿ. ಜತ್ತಿಯವರು ಉದ್ಘಾಟಿಸಿದರು. ಅವರು ಬಹಳ ಹಿಂದಿನಿಂದಲೂ, ಕರ್ನಾಟಕದ ಮಂತ್ರಿಯಾಗಿದ್ದಾಗಿನಿಂದಲೂ ಬಾಬಾ ಅವರ ಭಕ್ತರು. ಈ ವಿದ್ಯಾರ್ಥಿ ನಿಲಯವನ್ನು ಬೃಂದಾವನ ಆವರಣದಲ್ಲೇ ಕಟ್ಟಲಾಗಿತ್ತು. ಏಕೆಂದರೆ ತಮ್ಮ ಕಾಲೇಜಿನ ವಿದ್ಯಾರ್ಥಿಗಳು ತಮ್ಮ ಸನಿಹದಲ್ಲೇ ಇರಬೇಕೆಂದು ಹಂಬಲಿಸಿದ್ದನ್ನು ಬಾಬಾ ತಿರಸ್ಕರಿಸದಾದರು. ಸಮಾರಂಭದಲ್ಲಿ ಎಲ್ಸೀ ಕೋವಾನ್ ಹಾಜರಿದ್ದರು. ಸರಸ್ವತೀ ಮಂದಿರಕ್ಕೆ ಬಾಬಾ ಪುನರ್ಜನ್ಮ ಕೊಟ್ಟ ತನ್ನ ಪತಿ ವಾಲ್ಟರ್ ಕೋವಾನ್ ನೆನಪಿನ ಹೆಸರಿಟ್ಟುದಕ್ಕಾಗಿ ತುಂಬಾ ಸಂತೋಷ ವ್ಯಕ್ತಪಡಿಸಿದರು. ಒಬ್ಬ ವಿದ್ಯಾರ್ಥಿಯು ಮಾತನಾಡುತ್ತಾ " ಈ ನಿಲಯದಲ್ಲಿ ವಾಸಿಸುವ ನಾವು ಪುನರುತ್ಥಾನವನ್ನು ಕಾಯುತ್ತಿದ್ದೇವೆ" ಎಂದು ನುಡಿದನು. ಶಿಕ್ಷಣದಲ್ಲಿ ಸಾಯಿಯುಗವು ವೇಗ ವರ್ಧಿಸಿಕೊಳ್ಳುತ್ತಿರುವುದಕ್ಕಾಗಿ ರಾಷ್ಟ್ರಪತಿಗಳು ಸಂತೋಷ ವ್ಯಕ್ತಪಡಿಸಿದರು. ನೈತಿಕ ಮತ್ತು ಆಧ್ಯಾತ್ಮಿಕ ಪ್ರಗತಿಗೆ ಒತ್ತು ಕೊಡುವ ಸಾಯಿ ಕಾಲೇಜುಗಳು ವೈವಿಧ್ಯಪೂರ್ಣವಾದ ಕೌಶಲಗಳನ್ನು ಬೆಳಕಿಗೆ ತಂದು, ಸಮಾಜ ಸೇವಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದನ್ನು ಸ್ವಾಗತಿಸಿದರು. ಶೈಕ್ಷಣಿಕವಾಗಿ ಉನ್ನತ ಶ್ರೇಣಿಯನ್ನು ಪಡೆದಿರುವುದರ ಜೊತೆ ಜೊತೆಗೇ ಬೇಸಾಯ, ಪಶುಸಂಗೋಪನೆ, ಡೈರಿ, ಕ್ಯಾಂಟೀನ್ ನಿರ್ವಹಣೆಗಳಲ್ಲೂ ಅಷ್ಟೇ ಕ್ಷಮತ್ವ ಸಂಪಾದಿಸಿ, ಯೋಗಾಸನ, ಭಾಷಣ, ಸಂಗೀತ, ರೋಗಶುಶ್ರೂಷೆ, ನಾಟಕ ಕಲೆ, ಛಾಯಾ ಚಿತ್ರಕಲೆಗಳಲ್ಲೂ ಪರಿಣತಿ ಸಾಧಿಸಿರುವುದನ್ನು ಕೊಂಡಾಡಿದರು. ವಾಸ್ತು ಶಿಲ್ಪವೆನ್ನುವುದು ಕಲ್ಲಿನಲ್ಲಿ ಸಂಗೀತವನ್ನು ಹೊಮ್ಮಿಸುವ ಕಲೆ ; ಕೋವಾನ್ ಬ್ಲಾಕ್ ನಿಜವಾಗಿ ಇಟ್ಟಿಗೆ ಗಾರೆಗಳಲ್ಲಿ ಹಾಡಿದ ಭಜನೆ. ಅಲ್ಲಿಯ ಶಯನಾಗಾರಗಳಲ್ಲಿ, ಅಂಗಳಗಳಲ್ಲಿ, ಸಭಾ ಭವನದಲ್ಲಿ ಪಶ್ಚಾತ್ತಾಪ ಮತ್ತು ದೈವಕೃಪೆ ಎರಡರ ಅಸ್ತಿತ್ವವನ್ನೂ ಮನಗಾಣಬಹುದಾಗಿದೆ. "ನಿಮ್ಮ ತಲೆಯಲ್ಲೂ ಹೃದಯದಲ್ಲೂ ಬೆಳಕನ್ನೂ ಪ್ರೇಮವನ್ನೂ ತುಂಬಿಕೊಳ್ಳಿರಿ, ಕೇವಲ ಮಾಹಿತಿ ಅಂಕಿಸಂಖ್ಯೆಗಳನ್ನು ತುಂಬಿಕೊಳ್ಳುವುದರಿಂದ ಪ್ರಯೋಜನವಿಲ್ಲ" ಎನ್ನುತ್ತಾರೆ ಬಾಬಾ. ಈ ವಿದ್ಯಾರ್ಥಿನಿಲಯವು ಜ್ಞಾನದ ಬೆಳಕು ಹಾಗೂ ಸೇವೆಯ ಆನಂದಗಳೆರಡರ ಆಗರವಾಗಿದೆ.

ಮೇ ಆರನೆಯ ತಾರೀಕು, ಅವತಾರ ಪುರುಷನ ಮಾತೆಯು ಈ ಜಗತ್ತಿಗೆ ವಿದಾಯ ಹೇಳಿದ ದಿನ. ಆ ದಿನವನ್ನು ಕೆಲವು ವರ್ಷಗಳಿಂದ ಈಶ್ವರಮ್ಮ ದಿನ ಎಂದು ಕರೆದು ಮಕ್ಕಳು ಮಕ್ಕಳ ಸೇವೆಗೆ ಮುಡಿಪಾಗುವುದಕ್ಕೆ ಮೀಸಲು ಮಾಡಲಾಗಿದೆ. ಅದೀಗ ಒಂದು ವಾರ ಕಾಲದ ಉತ್ಸವವಾಗಿ ಬೆಳೆದಿದೆ. ಬಾಲ ವಿಕಾಸದ ಮಕ್ಕಳು ಕೊಳೆಗೇರಿಗಳ ಮಕ್ಕಳೊಂದಿಗೆ ಆಡುತ್ತಾರೆ, ವಿಕಲ ಮಕ್ಕಳಿಗಾಗಿರುವ ಸಂಸ್ಥೆಗಳಲ್ಲಿ ಭಜನೆಗಳನ್ನು ಹಾಡುತ್ತಾರೆ. ಬೆಳಕಿನ ಕಿರಣಗಳಂತೆ ಅವರು ಇತರರ ವಿಷಾದಪೂರಿತ ಸನ್ನಿವೇಶಕ್ಕೆ ಸಂತೋಷದ ಬೆಳಕು ಮಿನುಗಿಸುತ್ತಾರೆ. ಅಲ್ಲದೆ ತಾವು ಬರೆಯುವ ಚಿತ್ರಗಳನ್ನು, ಮಾಡುವ ಮಾದರಿಗಳನ್ನು, ಹೂ ಜೋಡಣೆಗಳನ್ನು ಮಕ್ಕಳಿಗೂ ಹಿರಿಯರಿಗೂ ಉಡುಗೊರೆಯಾಗಿ ನೀಡುತ್ತಾರೆ. ಹಾಡು, ನರ್ತನ, ಅನುಕರಣೆ, ಕಂಠಪಾಠ ಇತ್ಯಾದಿಗಳಲ್ಲಿ ನಲಿಯುತ್ತಾರೆ.

# ರಾಮಾಯಣ

1977ರ ಬೇಸಿಗೆ ಶಾಲೆಯು ಧರ್ಮದ ಭಂಡಾರವಾದ ರಾಮಾಯಣವನ್ನು ಆಧರಿಸಿತ್ತು. ಮೊದಲ ಏಳು ದಿನ ಭಾರತದ ವಿವಿಧ ಭಾಷೆಗಳಲ್ಲೂ ಭಾರತದ ದಕ್ಷಿಣ ಹಾಗೂ ಆಗ್ನೇಯ ದೇಶಗಳಲ್ಲಿ ಬಂದಿರುವ ರಾಮಾಯಣ ಆವೃತ್ತಿಗಳ ಆಳವಾದ ಅಧ್ಯಯನಕ್ಕೆ ಮೀಸಲಾಗಿತ್ತು. ರಾಮಾಯಣದಲ್ಲಿ ಚಿತ್ರಿತರಾಗಿರುವ ವೀರ ಪಾತ್ರಗಳಲ್ಲಿ ನಿರೂಪಿತವಾದ ಆದರ್ಶಗಳನ್ನು ಕುರಿತು ಭಗವಾನರು ಉಪನ್ಯಾಸ ಮಾಡಿದರು. ಸಾಯಿ ಕಾಲೇಜುಗಳಿಂದ ಬಂದ ನಲವತ್ತಕ್ಕೂ ಹೆಚ್ಚು ಜನ ವಿದ್ಯಾರ್ಥಿಗಳು ಜಗತ್ತಿನ ವಿವಿಧ ಸಾಧು ಸಂತರ ಬಗೆಗೆ ದಾರ್ಶನಿಕರ ಬಗೆಗೆ ಮಾತನಾಡಿದರು. ಮೂವತ್ತು ದಿನಗಳ ಕಾಲ ಭಾರತದ ಮತ್ತು ವಿದೇಶಗಳ ಕಾಲೇಜುಗಳಿಂದ ಆರಿಸಿ ಬಂದ ವಿದ್ಯಾರ್ಥಿ-ವಿದ್ಯಾರ್ಥಿನಿಯರು ನಗರ ಮಲಿನತೆಯಿಂದ, ಗದ್ದಲದಿಂದ ದೂರವಾಗಿ ಬೃಂದಾವನದ ಪ್ರಶಾಂತ ವಾತಾವರಣದಿಂದಲ್ಲಿ ವಾಸ ಮಾಡಿದರು. ಭಕ್ತಿ-ಅರ್ಪಣೆ, ಪ್ರಾರ್ಥನೆ-ಧ್ಯಾನ, ಪ್ರೇಮ-ಸೇವೆ, ಪರಸ್ಪರ ಸಹಾಯ ಮತ್ತು ಪ್ರೋತ್ಸಾಹಕ ವಾತಾವರಣದಲ್ಲಿ ಕಳೆದರು. ಭಗವಾನರು ಭಾಷಣ ನಡೆಯುವ ಸಭಾ ಭವನದಲ್ಲಿ, ಭೋಜನ ಸಂದರ್ಭದಲ್ಲಿ, ಬೃಂದಾವನದ ಸುತ್ತಮುತ್ತ ಹಳ್ಳಿಗಳಲ್ಲಿ ನಡೆದ ಸೇವಾಕಾರ್ಯಗಳಲ್ಲಿ, ಭಾನುವಾರಗಳಂದು ನಡೆಯುತ್ತಿದ್ದ ಆಶುಭಾಷಣ ಮತ್ತು ರಸಪ್ರಶ್ನೆ ಕಾರ್ಯಕ್ರಮಗಳಲ್ಲಿ ಅವರ ನಡುವೆಯೇ ಇರುತ್ತಿದ್ದರು. ಅನೇಕ ವಿದ್ಯಾರ್ಥಿಗಳು 'ಅಗಾಧತೆಯನ್ನೂ ನಿತ್ಯತೆಯನ್ನೂ' ತಾವು ಅನುಭವಕ್ಕೆ ತಂದುಕೊಂಡುದಾಗಿ ಹೇಳಿದರು. ಕೊನೆಯ ದಿನ ಅಗಲಿಕೆಯ ವೇದನೆ ಸಹಿಸಲಾರದೆ ಅವರು ಬಿಕ್ಕುತ್ತಿದ್ದಾಗ, ಬಾಬಾ ಅನುಗ್ರಹಪೂರಿತ ದೃಷ್ಟಿ ಬೀರಿ ಅವರನ್ನು ಸಾಂತ್ವನಗೊಳಿಸಿದರು, ಅವರು ಹೃದಯದಲ್ಲಿ ತಮ್ಮನ್ನು ನೆಲೆಗೊಳಿಸಿಕೊಂಡಿರುವುದರಿಂದ ಎಂದೆಂದಿಗೂ ತಾವು ಅವರೊಂದಿಗೇ ಇದ್ದು ಅವರೆಲ್ಲಿದ್ದರೂ ಮಾರ್ಗದರ್ಶನ ಮಾಡಿ ರಕ್ಷಿಸುವುದಾಗಿ ಭರವಸೆ ನೀಡಿದರು. "ಎಂದೆಂದೂ ದೇವರನ್ನು ಮರೆಯಬೇಡಿ...ಜಗತ್ತನ್ನು ಸತ್ಯವೆಂದು ಎಂದೂ ನಂಬಬೇಡಿ...ಎಂದಿಗೂ ಮರಣಕ್ಕೆ ಅಂಜಬೇಡಿ" ಎಂದು ಸಮಾಪನ ಭಾಷಣ ಮಾಡುತ್ತ ಭಗವಾನರು ಹೇಳಿದರು.

1977ರ ದಸರಾ ಉತ್ಸವದ ಹತ್ತು ದಿನಗಳ ಕಾಲ ಭಗವಾನರು ಶಾಂತಿ ಮತ್ತು ಅದನ್ನು ಭದ್ರವಾಗಿ ನೆಲೆಗೊಳಿಸಿಕೊಳ್ಳುವ ವಿಧಾನ ಇವುಗಳನ್ನು ವಿಸ್ತರಿಸಿದರು. ಅವರ ದಿವ್ಯೋಪನ್ಯಾಸಗಳು ಮನುಷ್ಯನ ದೇಹವನ್ನೂ ಮನಸ್ಸನ್ನೂ ವಿವೇಕವನ್ನೂ ಮಲಿನಗೊಳಿಸುವ ದ್ವೇಷಗಳು ಮತ್ತು ವೈಫಲ್ಯಗಳನ್ನು ಗುರುತಿಸಿದುವು. ಮನುಷ್ಯನ ಚಿಂತನೆಗಳನ್ನು ವಿಕ್ಷೋಭಗೊಳಿಸುವ ಮತ್ತು ಮ್ಲಾನಗೊಳಿಸುವ ಅಭ್ಯಾಸಗಳನ್ನೂ ಲಕ್ಷಣಗಳನ್ನೂ ಅವರು ವಿಶ್ಲೇಷಿಸಿದರು. ದೈಹಿಕ, ಮಾನಸಿಕ ಭಾವನಾತ್ಮಕ ಹಾಗೂ ವೃತ್ತಿಗತ ಸಮಚಿತ್ತತೆ, ಸಮಾಧಾನಗಳನ್ನು ಪಡೆಯಲು ನೆರವಾಗುವ ಸಾಧನೆಗಳನ್ನು ವಿಧಿಸಿದರು. ನೈತಿಕ ಮತ್ತು ದಾರ್ಶನಿಕ ಪಂಥಗಳು ಸೃಷ್ಟಿಸುವ ಸಂಘರ್ಷಗಳನ್ನು ಪ್ರಸ್ತಾಪಿಸಿದರು. ಒಬ್ಬನೇ ಸರ್ವವ್ಯಾಪಕ ಭಗವಂತನ ವಿವಿಧ ನಾಮರೂಪಗಳಿಗೆ ಕುರುಡು ಕುರುಡಾಗಿ ವಿಧೇಯವಾಗಿರುವುದರಿಂದಲೂ ಮೂಡುವ ಘರ್ಷಣೆಗಳನ್ನು ಕುರಿತು ಹೇಳಿದರು.

ದಸರಾ ಉತ್ಸವದ ಮುಖ್ಯಾಂಶವಾದ ವೈದಿಕ ಜ್ಞಾನ ಯಜ್ಞವನ್ನು ಕರ್ನಾಟಕದ ಗವರ್ನರ್ ಆದ ಶ್ರೀ ಗೋವಿಂದ ನಾರಾಯಣ್ ಉದ್ಘಾಟಿಸಿದರು. ಐಹಿಕವಾದ ಧ್ಯೇಯಗಳಿಂದ ಬಂದಿದ್ದರೂ ಮಾನವ ಹೃದಯಗಳನ್ನು ಒಂದಾಗಿ ಬೆಸೆಯುವ ಭಕ್ತಿಯು ಬಾಬಾ ಅವರನ್ನು ಕುರಿತು ಇಂಗ್ಲೀಷ್ ಮತ್ತು ಸಂಸ್ಕೃತಗಳಲ್ಲಿ ಹಾಡಿದ ಹಾಡುಗಳ ವಸ್ತುವಾಗಿತ್ತು. ಕ್ಯಾಲಿಫೋರ್ನಿಯದಿಂದ ಬಂದ ಇಡಾ ಮೇರಿಯನಂ ಸೇಂಟ್ ಜಾನ್ ಹಾಗೂ ಜರ್ಮನಿಯಿಂದ ಬಂದ ಗೀತಾ ಓರ್‌ಸ್ಕಾನ್ ಅವುಗಳನ್ನು ಹಾಡಿದರು. ವಿಜಯದ ಹತ್ತನೆಯ ದಿನವಾದ ವಿಜಯದಶಮಿಯ ದಿನ ಕೆಲವರು ಕವಿಗಳು ವಿವಿಧ ಭಾಷೆಗಳಲ್ಲಿ ರಚಿಸಿದ ತಮ್ಮ ಕವಿತೆಗಳನ್ನು ವಾಚಿಸಲು ಬಾಬಾ ಅನುಮತಿಯಿತ್ತರು. ಹೈದರಾಬಾದಿನ ಇಂಗ್ಲೀಷ್ ಪ್ರಾಧ್ಯಾಪಿಕೆ ಮಿಸೆಸ್ ಜೆಬಾ ಬಷೀರುದ್ದೀನ್ ಅವರು ಬಾಬಾ ಅವರನ್ನು ಕುರಿತು ಸರಳವಾದ ಉರ್ದು ಕವಿತೆಗಳನ್ನು ರಚಿಸಿದ್ದು ಅವುಗಳನ್ನು ಹಾಡಿದರು.

ಅಂದು ಭಗವಾನರು ಕರ್ನಾಟಕದ ಲೋಕಸೇವಾ ವೃಂದದ ಶಿಕ್ಷಣ ಸಂಸ್ಥೆಯನ್ನು ತಮ್ಮ ಪೋಷಣೆಗೆ ಸ್ವೀಕರಿಸುವ ಘೋಷಣೆ ಮಾಡಿದುದನ್ನೂ ಇಲ್ಲಿ ಉಲ್ಲೇಖಿಸಬಹುದು. ಆ ಸಂಸ್ಥೆಯ ಸ್ಥಾಪಕರೂ ಪೋಷಕರೂ ಆಗಿದ್ದ ಮಡಿಯಾಲ ನಾರಾಯಣ ಭಟ್ ಒಂದು ಕಾರು ಅಪಘಾತದಲ್ಲಿ ಮಡಿದುದರಿಂದ ಸಂಸ್ಥೆ ಅನಾಥವಾಗಿತ್ತು. ರಾಜ್ಯ ಸರಕಾರದ ಸೆಕ್ಯುಲರ್ ಪಠ್ಯದ ವಿಷಯಗಳ ಜೊತೆಗೆ ಆಧ್ಯಾತ್ಮಿಕ ಆದರ್ಶಗಳಾದ ಕರ್ತವ್ಯ ಶೀಲತೆ, ಶ್ರದ್ಧೆ ಮತ್ತು ಶಿಸ್ತುಗಳನ್ನು ಕಲಿಸುವುದೂ ಈ ಸಂಸ್ಥೆಯ ಗುರಿಯಾಗಿತ್ತು.

## ವಿವಾಹ ಬಂಧನ

ಪ್ರಶಾಂತಿ ನಿಲಯದಲ್ಲಿ ದಸರಾ ಉತ್ಸವ ಭಕ್ತರಿಗೆ ತಮ್ಮ ಪರಂಪರೆಯ ಬಗೆಗೆ ಗೌರವ ತಳೆಯುವಂತೆ ಮಾಡುತ್ತದೆ. ಜನ್ಮದಿನೋತ್ಸವವು ಅವರಿಗೆ ಅವತಾರ ಪುರುಷನು ಇಚ್ಛಿಸುವಂತೆ ತಮ್ಮ ಬಾಳನ್ನು ಮತ್ತೆ ರೂಪಿಸಿಕೊಳ್ಳಲು ಪ್ರೇರಿಸುತ್ತದೆ. ಭಗವಾನರ ದಿವ್ಯಾಶೀರ್ವಾದದೊಂದಿಗೆ ಅದ್ದೂರಿಯಾಗಿ ಉತ್ಸವ ಪ್ರಾರಂಭವಾಯಿತು. ಪ್ರಶಾಂತಿ ನಿಲಯದ ಸುತ್ತುಮುತ್ತಿನ ಹಳ್ಳಿಗಳಲ್ಲಿರುವ ಬಡ ತಂದೆ ತಾಯಿಗಳು ತಮ್ಮ ಮಕ್ಕಳ ಮದುವೆಯನ್ನು ಯಾವ ವೆಚ್ಚವೂ ಇಲ್ಲದೆ ಮಾಡಬಹುದು ಎಂದು ಬಾಬಾ ಹೇಳಿ ಕಳಿಸಿದ್ದರು. ತಾವೇ ಪುರೋಹಿತರೂ, ಪಾಲಕರೂ, ಮಹದ್ಭಾಗ್ಯವೂ ಆಗಿರುವುದಾಗಿ ಒಪ್ಪಿದರು. ಜಾತಿ ಮತಗಳ ಭೇದವಿಲ್ಲದೆ ತಂದೆ ತಾಯಿಗಳು ಈ ಕರೆಯನ್ನು ಸಂತೋಷದಿಂದ ಸ್ವೀಕರಿಸಿದರು. ಜ್ಯೋತಿಷಿಗಳ ಹಾಗೂ ಬಡ್ಡಿ ಸಾಹುಕಾರರ ಬಾಗಿಲಿಗೆ ಅಲೆದಲೆದು ಹಣ್ಣಾಗಿದ್ದ ಅವರಿಗೆ ಈ ಸುದ್ದಿ ಸಂತೋಷದಾಯಕವಾಗಿತ್ತು. ಬಾಬಾ ಅವರೇ ಪ್ರಧಾನ ಪುರೋಹಿತರಾಗಿ ಮದುವೆ ಮಾಡಿಸಲು ನಿಂತ ಮೇಲೆ ದಂಪತಿಗಳ ಭವಿಷ್ಯದ ಬಗೆಗೆ ಬೇರೆ ಯಾರನ್ನೂ ಸಲಹೆ ಕೇಳಬೇಕಾದ ಅಗತ್ಯವೇ ಇರಲಿಲ್ಲ. ಅವರೇ ಮದುವೆ ಮಾಡಿಸಲು ನಿಂತರೆಂದ ಮೇಲೆ ಯಾವ ಸಾಹುಕಾರನನ್ನೂ ಹಣಕ್ಕಾಗಿ ಅಂಗಲಾಚುವ ಅವಶ್ಯಕತೆಯಿರಲಿಲ್ಲ. ಈ ವಾರ್ತೆ ಕೇಳಿದೊಡನೆ ತರುಣರು ತಾವು ವಿವಾಹವಾಗಬಹುದಾದ ವಧುಗಳಿರುವ ಮನೆಗಳಿಗೆ ಧಾವಿಸಿದರು. ಬಾಬಾ ಅವರ ದಿವ್ಯ ಸನ್ನಿಧಿಯಲ್ಲಿ ಮದುವೆ ಮಾಡಬಹುದಾದ ಈ ಸುವರ್ಣಾವಕಾಶವನ್ನು ತಪ್ಪಿಸಿಕೊಳ್ಳಬಾರದೆಂದು ಅವರಿಗೆ

ತಿಳಿಯಹೇಳಿದರು. ಕೆಲವೇ ದಿನಗಳಲ್ಲಿ ಒಂದು ನೂರ ಮೂವತ್ತು ಜೋಡಿಗಳು ತಮ್ಮ ಹೆಸರನ್ನು ಪ್ರಶಾಂತಿ ನಿಲಯದಲ್ಲಿ ನೋಂದಾಯಿಸಿಕೊಂಡಿದ್ದರು. ವಧುಗಳಿಗೆ ಸಂತೋಷಾಶ್ಚರ್ಯಗಳಾಗುವಂತೆ ಬಾಬಾ ಒಬ್ಬೊಬ್ಬರಿಗೂ ಒಂದು ಮದುವೆ ಸೀರೆಯನ್ನು ಉಡುಗೊರೆಯಾಗಿತ್ತರು. ವರರಿಗೂ ಧೋತಿ ಮತ್ತು ಜರಿ ಅಂಚಿನ ಅಂಗವಸ್ತ್ರಗಳ ಉಡುಗೊರೆಯಿತ್ತು, ಅವರಿಗೆ ದರ್ಜಿಗಳು ನಿಲಯಕ್ಕೆ ಬಂದು ಅಳತೆ ತೆಗೆದುಕೊಂಡು ಹೊಲಿದುಕೊಟ್ಟ ರೇಷ್ಮೆ ಅಂಗಿಯನ್ನು ನೀಡಿದರು. ಅವರನ್ನು ಪುಟ್ಟಪರ್ತಿ ಗ್ರಾಮದ ಹೊರವಲಯದಲ್ಲಿ ಅದಕ್ಕಾಗೇ ವಿಶೇಷವಾಗಿ ನಿರ್ಮಿಸಿ ಸುಂದರವಾಗಿ ಅಲಂಕರಿಸಿದ ಚಪ್ಪರಕ್ಕೆ ಕರೆದೊಯ್ಯಲಾಯಿತು. ಅನಂತಪುರದ ಸತ್ಯಸಾಯಿ ಕಾಲೇಜಿನ ವಿದ್ಯಾರ್ಥಿನಿಯರು ಮದುವಣಗಿತ್ತಿಯರ 'ಗೆಳತಿ'ಯರಾಗಿ ನಿರ್ವಹಿಸಿದರು. ಹಾಗೆಯೇ ಬೆಂಗಳೂರಿನ ಸತ್ಯಸಾಯಿ ಕಾಲೇಜಿನ ವಿದ್ಯಾರ್ಥಿಗಳು ಮದುವಣಿಗರ 'ಗೆಳೆಯ'ರಾದರು. ವಿವಾಹಕರ್ಮವು ಸಾಂಗವಾಗಿ ನಡೆಯುತ್ತಿರುವಾಗ ಬ್ರಾಹ್ಮಣ ಪುರೋಹಿತರು ವೇದ ಮಂತ್ರಗಳನ್ನು ಪಠಿಸಿದರು. ವಧುವರರು ವಿವಾಹ ಬಂಧನದ ಸಂಕೇತವಾಗಿ ಪರಸ್ಪರ ಪುಷ್ಪಮಾಲೆಗಳನ್ನು ವಿನಿಮಯ ಮಾಡಿಕೊಂಡರು. ಪ್ರತಿಯೊಬ್ಬ ವರನಿಗೂ ಭಗವಾನರು ಒಂದು ಚಿನ್ನದ ಮಂಗಳಸೂತ್ರವನ್ನು ಕೊಟ್ಟರು. ಅದನ್ನು ಅವನು ವಧುವಿನ ಕೊರಳಿಗೆ ತೊಡಿಸಿ ಗಂಟು ಹಾಕುತ್ತಿರುವಾಗ ಬಾಬಾ ಆ ದಂಪತಿಗಳ ಮೇಲೆ ಅಕ್ಷತೆಯನ್ನು ತಳಿದು ಆಶೀರ್ವದಿಸಿದರು. ಆಮೇಲೆ ಭಗವಾನರು ಪ್ರತಿಯೊಬ್ಬ ವಧುವಿಗೂ ಇನ್ನೊಂದು ಸೀರೆ, ಬಳೆಗಳು, ಅರಿಶಿನ ಕುಂಕುಮಗಳನ್ನು ನೀಡಿದರು. ಅವೆಲ್ಲ ಆಕೆಗೆ ಅತ್ಯಗತ್ಯವಾದಂಥವು. ಅಲ್ಲದೆ ಪ್ರತಿ ದಂಪತಿಗಳಿಗೂ ಹೊಸ ಸಂಸಾರಕ್ಕಾಗಿ ತಟ್ಟೆಗಳು, ಬಟ್ಟಲುಗಳನ್ನು ನೀಡಿದರು. ಆಮೇಲೆ ದಂಪತಿಗಳು ಪರಸ್ಪರ ತಲೆಯ ಮೇಲೆ ಸಮೃದ್ಧಿಯ ಸಂಕೇತವಾಗಿ ಅಕ್ಕಿಯನ್ನು ಎರೆದರು. ಸೀರೆಯ ಅಂಚನ್ನೂ ಅಂಗವಸ್ತ್ರದ ಅಂಚನ್ನೂ ಸೇರಿಸಿ ಗಂಟು ಹಾಕಿದರು. ಮುಂದೆ ಅವರು ಜೊತೆಯಾಗಿ ನಡೆಸಬೇಕಾಗಿರುವ ಬದುಕಿನ ಯಾತ್ರೆಗಾಗಿ ಹೃದಯಗಳ ಬಂಧನವನ್ನು ಅದು ಸಂಕೇತಿಸಿತು. 134 ಜೋಡಿಗಳೂ ನಿಧಾನವಾಗಿ ಮಂದಿರಕ್ಕೆ ಮೆರವಣಿಗೆಯಲ್ಲಿ ನಡೆದು ಬಂದರು. ಜಾನಪದ ನೃತ್ಯ, ಕೊಂಬು ಕಹಳೆ, ತಮಟೆ ಭಜನ ತಂಡಗಳು ಮೆರವಣಿಗೆಗೆ ವಿಶೇಷ ರಂಗು ನೀಡಿದ್ದುವು. ಅನಂತರ ಅವರ ಸಮೀಪ ಬಂಧುಗಳೊಂದಿಗೆ ಎಲ್ಲರಿಗೂ ನಿಲಯದಲ್ಲಿ ಮದುವೆಯ ಔತಣ ಏರ್ಪಾಟಾಗಿತ್ತು. ಅದರಲ್ಲಿ ಜಾತಿ ಮತ ಭೇದವಾಗಲಿ ಬಡವ ಬಲ್ಲಿದ ವಿದ್ಯಾವಂತ ಅವಿದ್ಯಾವಂತ ಭೇದವಾಗಲಿ ಇರಲಿಲ್ಲ. ಸಮಸ್ತ ಮಾನವಕುಲದ ಕಲ್ಯಾಣವನ್ನು ಮನಸ್ಸಿನಲ್ಲಿಟ್ಟುಕೊಂಡವರಿಗೆಲ್ಲ ಅದೊಂದು ಅತ್ಯಂತ ಹೃದಯಸ್ಪರ್ಶಿ ಸಮಾರಂಭವಾಗಿತ್ತು. ಅದು ಪ್ರೇಮದ ಹಬ್ಬವಾಗಿತ್ತು. ಪ್ರೇಮದ ಅದ್ಭುತ ಪ್ರಭಾವದ ಬಗ್ಗೆ ನಂಬಿಕೆಯಿರುವವರಿಗೆಲ್ಲ ಅದೊಂದು ಮಾದರಿ ಪಾಠವಾಗಿತ್ತು. ಈಗ ಅನೇಕ ಸೇವಾ ಸಮಿತಿಗಳು ಅದೇ ರೀತಿಯಲ್ಲಿ ಗ್ರಾಮಸ್ಥ ಜನರಿಗಾಗಿ ಸಾಮೂಹಿಕ ಸರಳ ವಿವಾಹಗಳನ್ನು ಏರ್ಪಾಟು ಮಾಡುತ್ತಿವೆ.

## ಚಂಡಮಾರುತ ಮತ್ತು ಸಾಗರದ ಉಗ್ರತೆ

ಭಗವಾನರ ಹುಟ್ಟಿದ ಹಬ್ಬಕ್ಕೆ ಮೊದಲು ಸತ್ಯಸಾಯಿ ಸೇವಾ ಸಮಿತಿಗಳ ಎಂಟನೆಯ ಅಖಿಲ ಭಾರತ ಸಮ್ಮೇಳನ ನಡೆಯಿತು. ಈ ಕಾರ್ಯಕ್ರಮಗಳು ನಡೆಯುತ್ತಿರುವಾಗಲೇ ಭೀಕರವಾದ ಚಂಡಮಾರುತ

ಆಂಧ್ರ ಕರಾವಳಿಯನ್ನು ಅಪ್ಪಳಿಸಿದೆ ಎಂಬ ವಿಷಯ ತಿಳಿಯಿತು. 20 ಅಡಿಗಿಂತಲೂ ಎತ್ತರದ ಭೀಕರ ಅಲೆಗಳು ಕರಾವಳಿಯ ಮೇಲೆ ನುಗ್ಗಿದುವು. ಮೂವತ್ತು ನಲವತ್ತು ಮೈಲುಗಳಷ್ಟು ದೂರ ಒಳನಾಡನ್ನು ಕೊಚ್ಚಿಬಿಟ್ಟುವು. ಗಾಳಿ ಮತ್ತು ನೀರು ಎರಡೂ ಮಾಡಿದ ಭೀಕರದಾಂಧಲೆ ಅಗಾಧವಾಗಿತ್ತು. ಅಲೆಗಳ ಹೊಡೆತಕ್ಕೆ ಸಿಕ್ಕಿ ಸಹಸ್ರಾರು ಜನರು ಸತ್ತು ಹೋದರು. ಅಸಂಖ್ಯಾತ ಜಾನುವಾರುಗಳು ಪ್ರಾಣ ಕಳೆದುಕೊಂಡವು. ಹಲವು ಚದರ ಮೈಲು ವಿಸ್ತೀರ್ಣದ ತೆಂಗಿನ ತೋಟಗಳು ಬುಡಮೇಲಾದವು. ಬೇಕಾದಷ್ಟು ಹಳ್ಳಿಗಳು ಹೆಸರೇ ಇಲ್ಲದಂತೆ ಅಳಿಸಿ ಹೋದವು. ಅಳಿದುಳಿದರೂ ಭಯಂಕರ ಹತಾಶೆ, ಕಾಯಿಲೆಗಳಿಂದ ನರಳಿದರು. ಆಂಧ್ರದ ಎಲ್ಲ ಭಾಗಗಳಿಂದಲೂ ಸೇವಾದಳದ ಕಾರ್ಯಕರ್ತರು ನಿಲಯದಲ್ಲಿ ಉತ್ಸವ ನಡೆಯುತ್ತಿದ್ದರೂ, ಅದನ್ನು ಬಿಟ್ಟು ಒಡನೆ ಅಲ್ಲಿಗೆ ಧಾವಿಸಬೇಕೆಂದು ಭಗವಾನರು ಆದೇಶಿಸಿದರು. ಬಟ್ಟೆಬರೆ, ಹೊದೆಯಲು ಕಂಬಳಿಗಳು, ಸಿದ್ಧ ಉಡುಪುಗಳು, ಏನೇನು ಸಿಕ್ಕಿತೋ ಅದೆಲ್ಲ ಲಾರಿಗಳಲ್ಲಿ ತುಂಬಿ ತುಂಬಿ ಸ್ಥಳಕ್ಕೆ ಹೋಗಲು ಸಿದ್ಧವಾಗಿ ನಿಂತವು. ಎಂಟು ಲಕ್ಷ ರೂಪಾಯಿಗಿಂತ ಹೆಚ್ಚು ಮೊತ್ತವನ್ನು ಪರಿಹಾರ ಕಾರ್ಯಕ್ಕಾಗಿ ಬ್ಯಾಂಕಿನಲ್ಲಿ ಶೇಖರಿಸಿಡಲಾಯಿತು. ಹಾನಿಗೊಳಗಾದ ಪ್ರದೇಶದಲ್ಲಿ ಜಾಗ್ರತೆಯಾಗಿ ನಾಲ್ಕು ಪರಿಹಾರ ಶಿಬಿರಗಳನ್ನು ಸ್ಥಾಪಿಸಲಾಯಿತು. ತರಬೇತಿ ಪಡೆದ ಸ್ತ್ರೀ ಪುರುಷ ಸೇವಾದಳ ಕಾರ್ಯಕರ್ತರು ವೈದ್ಯರ ತಂಡದೊಂದಿಗೆ ಅಲ್ಲಿ ಸಿದ್ಧವಾಗಿ ನಿಂತರು. ಪ್ರವಾಹದಿಂದ ಪ್ರತ್ಯೇಕಗೊಂಡು ಉಳಿದು ಹೋದ ಅತಿ ದೂರದ ಪ್ರದೇಶಗಳನ್ನು ಗುರುತಿಸಲಾಯಿತು. ಆಹಾರ ಸಾಮಾಗ್ರಿಗಳನ್ನೂ ಇತರ ವಸ್ತುಗಳನ್ನೂ ಅಗಾಧ ಪ್ರಮಾಣದಲ್ಲಿ ಭಕ್ತರು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಸಾಗಿಸಿದರು. ಅವರು ಕೆಸರಿನ ಮೂಲಕ, ಹೂಳಿನ ಮಧ್ಯೆ ನಡೆದು ಹೋದರು. ಕೊಳೆಯುತ್ತಿದ್ದ ಹೆಣಗಳ ದುರ್ವಾಸನೆಯನ್ನು ಸಹಿಸಿಕೊಂಡು ಅವರು ಹೋಗಬೇಕಾಗಿತ್ತು. ವಾಸ್ತವವಾಗಿ ಮೊದಲು ಆಗಬೇಕಾಗಿದ್ದ ಕೆಲಸವೆಂದರೆ ನೆಲದ ಮೇಲೆ ಅಲ್ಲಲ್ಲೇ ರಾಶಿ ಬಿದ್ದಿದ್ದ, ಪೊದೆಗಳಿಗೆ ಮರದ ಕೊಂಬೆಗಳಿಗೆ ಸಿಕ್ಕಿಕೊಂಡಿದ್ದ ಮೃತದೇಹಗಳನ್ನು ತೆಗೆದು ಹೂಳುವುದು ಇಲ್ಲವೆ ದಹನ ಮಾಡುವುದು. ಐದು ಸಾವಿರ ಜನ ಅನಾಥ ನಿರಾಶ್ರಿತರಿಗೆ ಆಹಾರವನ್ನು ಪೂರೈಸುವ ಭಾರೀ ಅಡುಗೆ ಮನೆಗಳು ಒಂದು ತಿಂಗಳಿಗೂ ಹೆಚ್ಚು ಕಾಲ ನಾಲ್ಕು ಮುಖ್ಯ ಕೇಂದ್ರಗಳಲ್ಲಿ ಕೆಲಸ ಮಾಡಿದುವು. ಕಟ್ಟಮಚೇರು, ಗುಡಪಲಂ, ಆಡವುಲದೀವು, ಗಣಪವರಂ ಮತ್ತು ಬದ್ರಂಕುಲ ಈ ಸ್ಥಳಗಳಲ್ಲಿ ಕೇಂದ್ರಗಳನ್ನು ತೆರೆಯಲಾಯಿತು. ಕೆಲವು ಕೇಂದ್ರಗಳಿಂದ ಆಹಾರವನ್ನು ಬೇಯಿಸಿ ಇನ್ನೂ ದೂರದ ಸ್ಥಳಗಳಿಗೆ ಅಥವಾ ಎಲ್ಲೆಲ್ಲಿ ಹಾನಿಗೊಳಗಾದ ಜನ ಕಣ್ಣಿಗೆ ಬೀಳುವರೋ ಅಲ್ಲಿಗೆ ಕೊಂಡೊಯ್ಯಲಾಯಿತು. ಮಕ್ಕಳಿಗೆ ಹಾಲು ಮತ್ತು ವಿಶೇಷ ಪೌಷ್ಟಿಕ ಆಹಾರ ಒದಗಿಸಿದರು. ಇಷ್ಟರ ಜೊತೆಗೆ ಸೇವಾದಳ ಕಾರ್ಯಕರ್ತರು ನೂರಾರು ಗುಡಿಸಲುಗಳನ್ನು ಕಟ್ಟಿಕೊಟ್ಟು ಜನರು ಮೀನು ಹಿಡಿಯುವುದು, ಬೇಸಾಯ ಮೊದಲಾದ ಎಂದಿನ ವೃತ್ತಿಗಳಲ್ಲಿ ತೊಡಗಲು ಅನುವು ಮಾಡಿಕೊಟ್ಟರು. ಅಡಿಗೆ ಮನೆಗೆ ಅಗತ್ಯವಾದ ಸೆಟ್, ಬಟ್ಟೆ ಬರೆಗಳು, ಚಾಪೆಗಳು, ರಗ್ಗುಗಳನ್ನು ಅವರಿಗೆ ಒದಗಿಸಿದರು. ಈ ಗಂಡಾಂತರದಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಗಳಾದ ಮಕ್ಕಳಿಗೆ ತಾವು ಪೋಷಕರಾಗಿರುವುದಾಗಿ ಭರವಸೆ ನೀಡಿದರು. ಪರಿಹಾರ ಶಿಬಿರದ ಕೆಲಸ ಕಾರ್ಯಗಳು ಕೊನೆಗೊಂಡು ಅವುಗಳನ್ನು ಮುಚ್ಚಿದಾಗ ಬಳಲಿ ಬೆಂಡಾದ ಸೇವಾದಳ ಕಾರ್ಯಕರ್ತರು ತಮ್ಮ ಸುತ್ತಮುತ್ತ ಹಳ್ಳಿಯ

ಜನರ ಮುಖಗಳು ಕೃತಜ್ಞತೆಯಿಂದ, ತೃಪ್ತಿಯಿಂದ, ಭಗವಾನರ ಬಗೆಗೆ ಭಕ್ತಿಯಿಂದ ಅರಳುವುದನ್ನು ಕಂಡು ಸಂತೋಷಪಟ್ಟರು. ಮುಂದೆ ಇಂತಹ ಅಗಾಧ ಪ್ರಮಾಣದ ಹಾನಿಯಾಗದ ಹಾಗೆ ಸೇವಾ ಸಂಸ್ಥೆಗಳು ಆ ಸ್ಥಳಗಳಲ್ಲಿ ಬೃಹತ್ ಭವನವನ್ನು ನಿರ್ಮಿಸಲಿ, ಅಲ್ಲಿ ನೀರು, ಗಾಳಿ, ಸಮುದ್ರದಲೆಗಳಿಂದ ಜನರು ರಕ್ಷಣೆ ಪಡೆಯುವಂತಾಗಲಿ ಎಂದು ಆಶಿಸಿದರು.

1978ರ ಶಿವರಾತ್ರಿಯ ಪವಿತ್ರದಿನವು ಸಮೀಪಿಸಿದಂತೆ, ಭಗವಾನರು ಸಾರ್ವಜನಿಕ ಸಮಾರಂಭವನ್ನು ರದ್ದುಪಡಿಸಿದುದನ್ನು ಜನರು ನೆನಪು ಮಾಡಿಕೊಂಡರು. ಉತ್ಸವವನ್ನು ಕಳೆದುಕೊಂಡದ್ದು ಎಷ್ಟು ನೋವು ಉಂಟು ಮಾಡಿದ್ದಿತೆಂದರೆ ಸಾವಿರಾರು ಜನ ಅದನ್ನು ನಂಬಲಿಲ್ಲ. ಕಾಲಕ್ಕೆ ಸರಿಯಾಗಿ ಅವರು ಎಂದಿನಂತೆ ಪ್ರಶಾಂತಿ ನಿಲಯಕ್ಕೆ ಬರತೊಡಗಿದರು. ಭಗವಾನರು ಅಂದು ಬೃಂದಾವನದಲ್ಲಿರುತ್ತಾರೆ ಎಂಬ ಸುದ್ದಿ ಹರಡಿಕೊಂಡಿತ್ತು. ಹಾಗಾದರೆ ಶಿವರಾತ್ರಿಯನ್ನು ಬೃಂದಾವನದಲ್ಲಿ ಆಚರಿಸಲಾಗುತ್ತದೆಯೆ ? ಅಥವಾ ಹೈದರಾಬಾದಿನಲ್ಲೋ ? ಆದ್ದರಿಂದ ಸಾವಿರಾರು ಜನರು ಹೈದರಾಬಾದಿನಲ್ಲೋ ವೈಟ್‌ಫೀಲ್ಡಿನ ಬೃಂದಾವನದಲ್ಲೋ ನೆರೆದರು. ಆದರೆ ಭಗವಾನರು ಬಗ್ಗಲಿಲ್ಲ. ಆ ಸಮಯಕ್ಕೆ ಅವರು ನೀಲಗಿರಿಯಲ್ಲಿದ್ದು ಎರಡು ದಿನಗಳ ನಂತರವಷ್ಟೇ ಹಿಂದಿರುಗಿದರು.

## ಕಾಲೇಜು ಆವರಣ

1978 ಮೇ 19ರಂದು ಭಗವಾನರು ಬೃಂದಾವನದಲ್ಲಿ ಸತ್ಯಸಾಯಿ ಕಾಲೇಜಿನ ಹೊಸ ಕಟ್ಟಡಗಳನ್ನು ಉದ್ಘಾಟಿಸಿದರು. ಕರ್ನಾಟಕದ ಶಿಕ್ಷಣ ಸಚಿವರಾದ ಶ್ರೀ ಸುಬ್ಬಯ್ಯ ಶೆಟ್ಟಿಯವರು ಗ್ರಂಥಾಲಯ ಕಟ್ಟಡವನ್ನೂ, ಅದರ ಮೊದಲ ಮಹಡಿಯಲ್ಲಿ ಪ್ರಜ್ಞಾನ ಪ್ರದರ್ಶನವನ್ನು ಉದ್ಘಾಟಿಸಿದರು. ಪ್ರದರ್ಶನದಲ್ಲಿ ನಕ್ಷೆಗಳು, ಚಿತ್ರಗಳು, ಜಪ ಧ್ಯಾನ ಯೋಗ ಮತ್ತು ಪೂಜೆಗಳಿಗೆ ಸಂಬಂಧಿಸಿದ ಚಿತ್ರಗಳು, ಭಾರತದ ಪವಿತ್ರ ಕ್ಷೇತ್ರಗಳ ಛಾಯಾಚಿತ್ರಗಳು ಮತ್ತು ಮಾದರಿಗಳು ಇದ್ದುವು. ಎಲ್ಲಾ ಮುಖ್ಯ ಧರ್ಮಗಳನ್ನು ಕುರಿತ ಗ್ರಂಥಗಳು ಮತ್ತು ಸಾಧುಸಂತರ, ಚಿಂತಕರ ಚಿತ್ರಗಳು ಸೇರಿದ್ದುವು. ಭಗವಾನರ ಸೂಕ್ತಿಗಳು, ಉಪದೇಶಗಳನ್ನು ವಿವರಣೆಯೊಂದಿಗೆ ಚಿತ್ರ ಸಹಿತ ಜೋಡಿಸಲಾಗಿತ್ತು. ಈ ದಾಖಲೆಗಳ ನಡುವೆ ಇರುವುದು ಎಂದರೆ, ಅನೇಕ ವೇಳೆ ನಾವು ಮರೆತುಬಿಡುವ ಭಗವಂತನೆಡೆಗೆ ಪಯಣದ ಅನಿವಾರ್ಯತೆಯನ್ನು ಮರಳಿ ನೆನಪಿಗೆ ತಂದುಕೊಂಡ ಹಾಗೆ. ಸಭಾಭವನವನ್ನು ಕರ್ನಾಟಕದ ರಾಜ್ಯಪಾಲ ಶ್ರೀ ಗೋವಿಂದ ನಾರಾಯಣ್ ಅವರ ಪತ್ನಿ ಉದ್ಘಾಟಿಸಿದರು. ರಾಜ್ಯಪಾಲರು ಅಂದೇ ಪ್ರಾರಂಭವಾದ ಸಂಸ್ಕೃತಿ ಮತ್ತು ಆಧ್ಯಾತ್ಮಿಕತೆಯನ್ನು ಕುರಿತ ವಸಂತ ಶಿಬಿರವನ್ನು ಉದ್ಘಾಟಿಸಿದರು. ಮೊದಲ ವಾರದ ಉಪನ್ಯಾಸಗಳ ವಸ್ತು ಭಾಗವತ ಪುರಾಣ ಕೃಷ್ಣಾವತಾರವೂ ಕೂಡಿದಂತೆ ಭಗವಂತನ ವಿವಿಧ ಅವತಾರಗಳ ಕಥನ.

ಇಂದು ನಮ್ಮ ಯುವ ಜನರ ಮೇಲೆ ಅರ್ಥವಿಲ್ಲದ, ಉದ್ದೇಶವಿಲ್ಲದ ಪಠ್ಯಗಳನ್ನು ಹೇರಲಾಗುತ್ತಿದೆ ಎಂದು ಭಗವಾನರು ನುಡಿದರು. ಕಾಲೇಜುಗಳಲ್ಲಿ ಅವರನ್ನು ಅವಿಧೇಯ ನಿರುದ್ಯೋಗಿಗಳನ್ನಾಗಿ ರೂಪಿಸಲಾಗುತ್ತಿದೆ. 'ಡಿಗ್ರಿ', 'ಡಿಪ್ಲೋಮ' ಎಂಬ ಭಿಕ್ಷಾಪಾತ್ರೆಯನ್ನು ಅವರ ಕೈಗೆ ಕೊಟ್ಟು ಭಿಕ್ಷುಕರನ್ನಾಗಿ ಮಾಡಿ ಹೊರ ಜಗತ್ತಿಗೆ ಕಳಿಸಲಾಗುತ್ತಿದೆ. ಅವರು ಕೇವಲ ವಿದೇಶ

ಕಣ್ಣುಗಳಿಂದ ನೋಡುತ್ತಾರೆ; ಎರವಲು ವಿಚಾರಗಳನ್ನೇ ಆಲೋಚನೆ ಮಾಡುತ್ತಾರೆ ; ಕೇವಲ ಚಲನಚಿತ್ರ ತಾರೆಯರನ್ನು ಆದರ್ಶವಾಗಿರಿಸಿಕೊಳ್ಳುತ್ತಾರೆ. ಅವರು ಗಾಳಿಯ ಪ್ರತಿಯೊಂದು ಬೀಸಿಗೂ ತತ್ತರಿಸುವ ಬೇರಿಲ್ಲದ ಸಸಿಗಳಂತಾಗಿದ್ದಾರೆ. ಅವರ ರಾಷ್ಟ್ರ ಭಕ್ತಿಯೆನ್ನುವುದು ಚರ್ಮದಷ್ಟೂ ಆಳವಾಗಿಲ್ಲ. ಏಕೆಂದರೆ ತಮ್ಮ ಪರಂಪರೆ, ಸಂಸ್ಕೃತಿ, ತಮ್ಮ ಕವಿಗಳು, ಸಂತರು, ತಮ್ಮ ನೆರೆಹೊರೆಯವರು, ದೇಶದ ಒಳ ಹೊರಗು ಇದು ಯಾವುದೂ ಅವರಿಗೆ ತಿಳಿದಿಲ್ಲ, ಅಥವಾ ಅದರ ಬಗೆಗೆ ಅವರಿಗೆ ಪ್ರೀತಿಯಿಲ್ಲ. ಕ್ಯಾಲಿಫೋರ್ನಿಯದ ಓಜಾಯ್‌ನಲ್ಲಿ ಜಾಗತಿಕ ವಿಶ್ವವಿದ್ಯಾನಿಲಯದ ಅಧ್ಯಕ್ಷರಾದ ಡಾ. ಬೆನಿಟೋ ರೆಯೆಸ್ ಈ ಶಿಬಿರದಲ್ಲಿ ಭಾಗವಹಿಸಿದ್ದರು, ಮಿಕ್ಕವರೊಂದಿಗೆ ಅಲ್ಲೇ ಕಳೆದರು. ಭಾರತದ ಆಧ್ಯಾತ್ಮಿಕ ಸಂದೇಶದ ಮೌಲ್ಯವಾಗಲಿ, ಮಹತ್ವವಾಗಲಿ, ಆಳ ಅಗಲಗಳಾಗಲಿ ತಿಳಿದಿಲ್ಲದ ಪಾಶ್ಚಾತ್ಯರು ಇಂತಹ ಶಿಬಿರಗಳಿಂದ ಬೇಕಾದಷ್ಟು ಪ್ರಯೋಜನ ಪಡೆಯಬಹುದು ಎಂದು ಅವರು ಮೆಚ್ಚಿದರು. ಟಿ. ಎಸ್. ಎಲಿಯಟ್‌ನನ್ನು ಉದ್ಧರಿಸಿ ಅವರು ಕೇಳಿದರು : "ತಿಳುವಳಿಕೆಯಲ್ಲಿ ನಾವು ಕಳೆದುಕೊಂಡು ಬಿಟ್ಟಿರುವ ಜ್ಞಾನ ಎಲ್ಲಿದೆ ? ಮಾಹಿತಿಯಲ್ಲಿ ನಾವು ಕಳೆದುಕೊಂಡು ಬಿಟ್ಟಿರುವ ತಿಳುವಳಿಕೆ ಎಲ್ಲದೆ ?" ಅವರೇ ಉತ್ತರಿಸಿದರು : "ಅದು ಇಲ್ಲಿದೆ.".

# 665

ವಸಂತ ಶಿಬಿರವು ಸಮಾಪನಗೊಳ್ಳುತ್ತಿದ ಹಾಗೇ ವ್ಯವಸ್ಥಾಪಕರಿಗೆ ಇನ್ನೊಂದು ಹೊಣೆ ಹೆಗಲಿಗೇರಿತು. ಅದು ಇನ್ನೂ ಮೂಲಭೂತವಾದುದಾಗಿತ್ತು, ಆಕರ್ಷಕವಾಗಿತ್ತು. ಆಂಧ್ರಪ್ರದೇಶದ ಎಲಿಮೆಂಟರಿ ಶಾಲೆಗಳಿಂದ ರಾಜ್ಯ ಸರಕಾರವೇ ಆರಿಸಿ ನಿಯೋಜಿಸಿ ಕಳಿಸಿದ 665 ಜನ ಅಧ್ಯಾಪಕರಿಗೆ ಹತ್ತು ದಿನಗಳ ಕಾಲದ ಆಧ್ಯಾತ್ಮಿಕ ಶಿಕ್ಷಣದ ತರಬೇತಿ. ಅದು ನಡೆಯಬೇಕಾಗಿದ್ದುದು ಬೃಂದಾವನದಲ್ಲಿ. ಸರಕಾರವು ಒಂದು ಕ್ರಾಂತಿಕಾರಕ ಯೋಜನೆಯನ್ನು ಹಾಕಿಕೊಂಡಿತ್ತು. ಎಲಿಮೆಂಟರಿ ಶಾಲೆಗಳ ಆರರಿಂದ ಹನ್ನೆರಡು ವರ್ಷ ವಯಸ್ಸಿನ ಮಕ್ಕಳಿಗೆ ಪಠ್ಯಕ್ರಮವನ್ನು ರಾಜ್ಯಾದ್ಯಂತ ಪುನರ್ ರೂಪಿಸುವುದು ಉದ್ದೇಶ. ಪ್ರಾರ್ಥನೆ, ಸಂಗೀತ, ನೃತ್ಯ, ಚಿತ್ರ ಬಿಡಿಸುವುದು, ಮಾದರಿ ಮಾಡುವುದು, ಶಿಕ್ಷಕ-ಪಾಲಕ ಸಹಕಾರ ಇವುಗಳಿಗೆ ವಿಶೇಷ ಮಹತ್ವ ಕೊಟ್ಟು, ಶಾಲಾ ಕಟ್ಟಡವು ಒಂದು ಕಾರ್ಯಶಾಲೆಯಾಗುವ ಹಾಗೆ, ಪೂಜೆಯ, ಜ್ಞಾನದ, ಪ್ರೇಮದ, ಸೇವೆಯ, ಆಧ್ಯಾತ್ಮಿಕ ಶಿಸ್ತಿನ, ಯೋಗದ ನೆಲೆಯಾಗುವ ಹಾಗೆ ಮಾಡಬೇಕೆಂಬುದು ಗುರಿಯಾಗಿತ್ತು. ಮೊದಲು ಉತ್ತರ ಪ್ರದೇಶದ ಗವರ್ನರ್ ಆಗಿ ಆಮೇಲೆ ಆಂಧ್ರಪ್ರದೇಶದ ಮುಖ್ಯಮಂತ್ರಿಯಾಗಿದ್ದ ಡಾ. ಚೆನ್ನಾರೆಡ್ಡಿಯವರು ಶ್ರೀ ಸತ್ಯಸಾಯಿ ಸೇವಾ ಸಮಿತಿಯ ತರಬೇತಿ ಪಡೆದ ಗುರುಗಳು ಬಾಲವಿಕಾಸ ತರಗತಿಗಳನ್ನು ನಡೆಸುವುದನ್ನು ನೋಡಿದ್ದರು. ಆ ಮಕ್ಕಳು ಸ್ವಾವಲಂಬಿಗಳಾಗಿ, ಸಹಕಾರ ಮತ್ತು ಸೇವಾ ಮನೋಭಾವದ ತರುಣ ತರುಣಿಯರಾಗಿ, ತಂದೆ ತಾಯಿ ಗುರುಹಿರಿಯರನ್ನು ಗೌರವದಿಂದ ಕಾಣುವ ವಿಧೇಯ ಯುವಜನರಾಗಿ ಬೆಳೆಯುವುದನ್ನು ಗಮನಿಸಿದ್ದರು. ಹಾಗಾಗಿ ಈ 665 ಜನ ಉಪಾಧ್ಯಾಯರಿಗೆ ಬೃಂದಾವನ ಆವರಣದಲ್ಲೇ ಒಂದು ಶಿಬಿರ ನಡೆಸಿ ತರಬೇತಿ ಕೊಡಬೇಕೆಂದು ಬಾಬಾ ಅವರನ್ನು ಕೋರಿದರು. ಅಲ್ಲಿ ಅವರು ಭಗವಾನರ ಕೃಪಾಶೀರ್ವಾದಗಳನ್ನು ಪಡೆಯಬಹುದಾಗಿತ್ತು. ಅವರು ತಮ್ಮ ಸಂದೇಶದ ಮಾದರಿಗಳಾಗಿ

ರೂಪುಗೊಳಿಸಿರುವ ಸರಳ ವಿದ್ಯಾರ್ಥಿಗಳನ್ನು ನೇರವಾಗಿ ನೋಡಬಹುದಾಗಿತ್ತು. ಅವರ ಪ್ರಭಾವದಿಂ ಪ್ರಯೋಜನ ಪಡೆಯಬಹುದಾಗಿತ್ತು.

ಈ ಉಪಾಧ್ಯಾಯರನ್ನು ಪ್ರತಿಯೊಂದು ಜಿಲ್ಲೆಯಿಂದಲೂ ಆರಿಸಲಾಗಿತ್ತು. ಅವರಿಗೆ ಭಾ ಭಾಷೆ ಬೇರೆ ಹವಾಮಾನವಿರುವ ಕರ್ನಾಟಕಕ್ಕೆ ಪ್ರಯಾಣಸಿದ್ಧತೆ ಮಾಡಿಕೊಳ್ಳಲು ಸಾಕಷ್ಟು ಸಮಯವ ಇರಲಿಲ್ಲ. ಬೃಂದಾವನ ಆವರಣದಲ್ಲಿ ಎಲ್ಲರೂ ತಂತಾನೆ ಅನುಸರಿಸುವ ವಿಧಿ-ನಿಷೇಧಗಳ, ಶಿಸ್ತಿ ಅರಿವೂ ಅವರಿಗಿರಲಿಲ್ಲ. ಆದರೂ ಹತ್ತು ದಿನಗಳ ತಂಗಣೆಯು ರಸ ತಂತ್ರದಂತೆ ಅವರನ್ನು ಪರಿವರ್ತಿಸಿತು. ಬಾಬಾ ಅವರ ಹೃದಯಗಳನ್ನು ಹೊಕ್ಕು ಅವನ್ನು ಮಿದುವೂ, ನಿರ್ಮಲವೂ ಆಗುವಂ ಮಾಡಿದರು. ಧೂಮಪಾನ, ಕೆಟ್ಟವಸ್ತುಗಳನ್ನು ತಿನ್ನುವುದು, ಜೋರಾದ ಗಂಟಲಿಂದ ವಾದ ಮಾಡುವು ಇವೇ ಮೊದಲಾದ ದುರಾಭ್ಯಾಸಗಳನ್ನು ಒಂದು ಹನಿ ಕಣ್ಣೀರೂ ಇಲ್ಲದಂತೆ ತೊಲಗಿಸಲಾಯಿ ಅವರಲ್ಲಿ ಆಗಲೇ ಇದ್ದ ವೃತ್ತಿಕೌಶಲದ ಜೊತೆಗೆ ಒಂದು ಅರ್ಪಣ ಮನೋಭಾವ ಬೆರೆತುಕೊಂಡಿ ತಾವು ದೇಶಭಕ್ತ ವೀರಯೋಧರು ಎಂಬ ಅನುಭವ ಅವರಿಗಾಯಿತು. ಶಾಲೆಗಳಿಂದ ಆಲಸ್ಯ ಮತ್ತ ಸ್ವಾರ್ಥ ಎಂಬ ರಕ್ಕಸರನ್ನು ಹೊಡೆದೋಡಿಸಿ ಬಹುಕಾಲದಿಂದ ಮಕ್ಕಳು ವಂಚಿತರಾಗಿರುವ ಆ ಸಮೃದ್ಧ ಪರಂಪರೆಯನ್ನು ಅವರಿಗೆ ಮತ್ತೆ ಕಾಣಿಸಿಕೊಡುವ ಯೋಧರು ತಾವು ಎಂಬ ಭಾವ ಬಲಿಯಿತು. ಬೆಳಗಿನ ಅವಧಿಗಳಲ್ಲಿ ಒಳ್ಳೆಯ ಅಧ್ಯಾಪಕರಿಂದ ಉಪನ್ಯಾಸಗಳಾಗುತ್ತಿದ್ದವು. ತ ಮೂವತ್ತು ಉಪಾಧ್ಯಾಯರಂತೆ ಬಾಬಾ ಹತ್ತು ತಂಡಗಳನ್ನು ರೂಪಿಸಿದ್ದರು. ದಿನ ಬಿಟ್ಟು ದಿ ಅವರು ಕಲೆತು ಈ ಉಪನ್ಯಾಸಗಳಲ್ಲಿ ನಿರೂಪಿತವಾದ ಅಂಶಗಳ ಕಾರ್ಯಸಾಧ್ಯತೆಯನ್ನು ಚರ್ಚಿಸುತ್ತಿದ್ದ ಈ ಚರ್ಚೆಗಳ ವರದಿಯನ್ನು ಸಂಜೆ ಭಗವಾನರ ಸಮ್ಮುಖದಲ್ಲಿ ಮಂಡಿಸಲಾಗುತ್ತಿತ್ತು. ಅವುಗಳ ಯಾವುದಾದರೂ ಒಂದು ಅಂಶವನ್ನು ಎತ್ತಿಕೊಂಡು ಅವರು ಮತ್ತಷ್ಟು ವಿಶ್ಲೇಷಿಸಿ ವಿವರಿ ಸ್ಪಷ್ಟಪಡಿಸುತ್ತಿದ್ದರು.

ಆ ಶಿಕ್ಷಕರ ಊಟ, ವಸತಿ ಏರ್ಪಾಟುಗಳನ್ನು ಭಗವಾನರೆ ಸ್ವತಃ ಉಸ್ತುವಾರಿ ನೋಡಿದರು ಅವರ ಆರೋಗ್ಯವನ್ನು ವಿಚಾರಿಸಿದರು. ಉಲ್ಲನ್ ರಗ್ಗುಗಳನ್ನು ತರದವರಿಗೆ ಕೊಟ್ಟರು. ಕೆಲವ ಪುಸ್ತಕಗಳ ಸೆಟ್ಟುಗಳು, ಮತ್ತೆ ಕೆಲವರಿಗೆ ತಾವು ಹಾಡಿದ ಭಜನೆಗಳು ಮತ್ತು ಉಪನ್ಯಾಸಗಳ ಕ್ಯಾಸೆಟ್ಟುಗ ದೊರೆತವು. ಶಿಕ್ಷಕರು ಮತ್ತು ಪ್ರತಿ ಜಿಲ್ಲೆಯಿಂದ ಬಂದ ಶಿಬಿರಾರ್ಥಿಗಳೊಂದಿಗೆ ಭಗವಾನರು ಭಾವಚಿ ತೆಗೆಸಿಕೊಂಡರು. ಶಿಬಿರವು ಮುಕ್ತಾಯವಾದ ದಿನ ಅವರೆಲ್ಲರಿಗೂ ಒಂದೊಂದು ಪ್ರತಿ ಕೊಡಿಸಿದರು ಅನೇಕ ಜನ ಶಿಬಿರಾರ್ಥಿಗಳು ಬೆಂಗಳೂರಿನ ವಿವಿಧ ಭಾಗಗಳನ್ನೂ ಮೈಸೂರು ಮತ್ತು ಪುಟ್ಟಪರ್ತಿಗಳನ್ನೂ ನೋಡಲು ಬಯಸಿದರು. ಆದರೆ ಅದಕ್ಕೆ ತಗುಲುವ ವೆಚ್ಚ ಅವರ ಅಳವ ಮೀರುತ್ತಿದ್ದಿತು. ಆದ್ದರಿಂದ ಅವರೆಲ್ಲರೂ ಆಂಧ್ರಪ್ರದೇಶ ಸರಕಾರಕ್ಕೆ ಮನವಿ ಮಾಡಿಕೊಂಡು ಹಣವನ್ನು ಸಾಲವಾಗಿ ಕೊಡಬೇಕೆಂದೂ, ವೇತನದಿಂದ ಕಂತುಗಳಲ್ಲಿ ಮುರಿದುಕೊಳ್ಳಬೇಕೆಂದು ಕೇಳಿಕೊಂಡರು. ಬಾಬಾ ಅವರಿಗೆ ಇದು ತಿಳಿಯಿತು. ಒಡನೆಯೇ ಅವರು ಬಸ್ಸುಗಳ ವ್ಯವಸ್ಥೆ ಮಾಡಿ ಬೇಕಾದಷ್ಟು ಆಹಾ ಪದಾರ್ಥಗಳು ಹಣ್ಣು ಹಂಪಲುಗಳನ್ನು ತುಂಬಿ ಕಳಿಸಿಕೊಟ್ಟರು.

ತಮಗೆ ನೆರವಾಗುವುದಕ್ಕಾಗಿ ನಿಯಮಿತರಾಗಿದ್ದ ವಿದ್ಯಾರ್ಥಿ ಸ್ವಯಂಸೇವಕರು ಹೃತ್ಪೂರ್ವಕವಾಗಿ ಸಹಕರಿಸುತ್ತಿದ್ದುದನ್ನು ನೋಡಿ ಉಪಾಧ್ಯಾಯರಿಗೆ ತುಂಬಾ ಸಂತೋಷವಾಯಿತು. ಭಗವಾನರು ತಾವು ಆರಿಸಿಕೊಂಡ ವಿದ್ಯಾರ್ಥಿಗಳ ಮೇಲೆ ಅಪಾರ ಪ್ರೇಮವನ್ನು ವರ್ಷಿಸಿ, ದೇಶವು ಹೆಮ್ಮೆ ಪಡುವಂತಹ ಯುವ ಜನರನ್ನಾಗಿ ರೂಪಿಸಿದ್ದಾರೆ ಎಂಬುದು ಅವರಿಗೆ ಮನದಟ್ಟಾಯಿತು. ಬೃಂದಾವನ ಆವರಣವನ್ನೂ ಬಾಬಾ ಅವರ ದಿವ್ಯ ಸನ್ನಿಧಿಯನ್ನೂ ಬಿಟ್ಟು ಹೊರಡುವಾಗ ಈ ಶಿಕ್ಷಕರು ಕಣ್ಣಲ್ಲಿ ನೀರು ತುಂಬಿಕೊಂಡರು.

## ದಿವ್ಯತೆಯ ಮುಖ

ಶಿಬಿರದ ಕೊನೆಗೆ, ಎಂಟನೆಯ ದಿನ, ಶಿಬಿರಾರ್ಥಿಗಳಿಗೆ ಆರಿಜೋನಾ ವಿಶ್ವವಿದ್ಯಾನಿಲಯದ ಡಾ. ಫ್ರಾಂಕ್ ಜಿ. ಬಾರೋನೋಸ್ಕಿ ನೀಡಿದ ಉಪನ್ಯಾಸವನ್ನು ಕೇಳುವ ಸದವಕಾಶ ಲಭ್ಯವಾಯಿತು. ಭಗವಾನರ ಕಾಂತಿ ಪರಿವೇಷದ ವಿಶಿಷ್ಟತೆಯನ್ನು ಕುರಿತು ಅವರು ಮಾತನಾಡಿದರು. ಬಾಬಾ ಅವರ ದಿವ್ಯತ್ವದಲ್ಲಿ ಶ್ರದ್ಧೆಯಿಟ್ಟು ಮಾಡಿದ ಈ ಉಪನ್ಯಾಸ, ಅವರಿಗೆ ಜೀವನಪರ್ಯಂತ ರಕ್ಷಾ ಕವಚವಾಗುವಂತಹ ಅಮೂಲ್ಯ ಆಸ್ತಿಯಾಯಿತು. ಡಾ. ಬಾರೋನೋಸ್ಕಿ ಹೇಳಿದರು. "ನಾನು ಹುಟ್ಟಿನಿಂದ ಕ್ರಿಶ್ಚಿಯನ್, ರೋಮನ್ ಕ್ಯಾಥೋಲಿಕ್. ಆದರೂ ಯಾವುದೇ ಶ್ರದ್ಧೆಯನ್ನೂ ನಾನು ಬೆಳೆಸಿ ಕೊಳ್ಳಲಿಲ್ಲ. ನನ್ನ ದೇಶದ ವೈಜ್ಞಾನಿಕ ಸಮಾಜವು ದೇವರನ್ನು ಒಪ್ಪಿಕೊಳ್ಳುವುದು ಕಷ್ಟ." ಅದು ವೈಜ್ಞಾನಿಕವಲ್ಲ ಎನ್ನುತ್ತಾರವರು. ಆದರೆ ಸ್ವಾಮಿಯು ಹೊರ ಹೊಮ್ಮಿಸುವ ಕಾಂತಿಯು ಖಂಡಿತವಾಗಿಯೂ ಮಾನವ ಸಹಜವಾದ್ದಲ್ಲ. ಅದರಲ್ಲಿ ಸ್ವಾಮಿಯು ಹೊರ ಹೊಮ್ಮಿಸುವ ಕಾಂತಿಯು ಖಂಡಿತವಾಗಿಯೂ ಮಾನವ ಸಹಜವಾದ್ದಲ್ಲ. ಅದರಲ್ಲಿ ಬಿಳಿಯ ಬಣ್ಣವು ಸಾಮಾನ್ಯ ಮನುಷ್ಯನ ಕಾಂತಿಯಲ್ಲಿರುವುದರ ಎರಡು ಪಟ್ಟು ಇತ್ತು. ನೀಲಿಯಂತೂ ಕೊನೆಯೇ ಇಲ್ಲದಷ್ಟು. ಚಿನ್ನದ ಬೆಳ್ಳಿಯ ಕಾಂತಿ ರೇಖೆಗಳು ಅವುಗಳಿಂದಾಚೆಗೆ, ಕಟ್ಟಡದಿಂದ ಬಹುದೂರ ದಿಗಂತದವರೆಗೆ ಚಾಚಿಕೊಂಡಿದ್ದುವು. ಇದುವರೆಗೆ ನಾನು ಸಂಪಾದಿಸಿರುವ ಒಳ್ಳೆಯ ಹೆಸರನ್ನು ಪಣವಾಗಿಟ್ಟು ಈ ಮಾತನ್ನು ಹೇಳುತ್ತಿದ್ದೇನೆ. ಈಗ ಎರಡು ದಿನಗಳ ಹಿಂದೆ, ಈ ಸಭಾ ಭವನದ ಹೊರಗೆ ಅವರ ಕಣ್ಣುಗಳನ್ನು ನೋಡಿದೆ. ಅವುಗಳಲ್ಲಿ ಒಂದು ಅನಾದೃಶ್ಯ ಕಾಂತಿ ಮಿನುಗುತ್ತಿತ್ತು. ನಾನು ಭಗವಂತನ ಮುಖವನ್ನು ನೋಡಿದ್ದೇನೆ ಎಂದು ನನಗೆ ಖಚಿತವಾಯಿತು. ಒಂದು ನುಡಿಗಟ್ಟನ್ನು ಬಳಸಿ ಹೇಳುವುದಾದರೆ, 'ಪ್ರೇಮವು ಎರಡು ಕಾಲುಗಳಿಂದ ನಡೆಯುವುದನ್ನು' ನೋಡಿರುವುದು ಇಲ್ಲಿ ಮಾತ್ರವೇಯೆ."

1978ರ ಆಗಸ್ಟ್ 14ರಂದು ಭಗವಾನರು ಲೋಕ ಸೇವಾ ಸಂಸ್ಥೆಯನ್ನು ಒಂದು ಹೊಸ ಟ್ರಸ್ಟ್ ಆಗಿ ರಚಿಸಿದರು. ಅದು ಶ್ರೀ ಸತ್ಯಸಾಯಿ ಲೋಕ ಸೇವಾ ಟ್ರಸ್ಟ್. ಅದಕ್ಕೆ ತಾವೇ ಅಧ್ಯಕ್ಷರಾಗಿರಲು ಕೃಪೆಯಿಟ್ಟು ಸಮ್ಮತಿಸಿದರು. ಮುದ್ದೇನ ಹಳ್ಳಿಯಲ್ಲೂ ಸ್ವಾಮಿ ಇದೇ ಕೆಲಸ ಮಾಡಿದರು. ಅಲ್ಲೂ ಲೋಕ ಸೇವಾ ಸಂಕೀರ್ಣದ ಅಂಗವಾಗಿ ಶಾಲೆಗಳನ್ನೂ ಹಾಸ್ಟೆಲುಗಳನ್ನೂ ನಡೆಸಲಾಗುತ್ತಿದೆ. ವರ್ಗಾವಣೆಯ ವಿಧಿಗಳನ್ನೂ ಹೆಸರಿನ ಬದಲಾವಣೆಯನ್ನೂ ಮಾಡಿದ ನಂತರ ಟ್ರಸ್ಟಿನ ಸದಸ್ಯರು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. "ಈ ಪವಿತ್ರ ಸಂಸ್ಥೆಯನ್ನು

ನಾರಾಯಣ ಭಟ್ ಅವರು ತಮ್ಮ ಬದುಕಿನ ತೀರಾ ಪ್ರಾರಂಭದಲ್ಲೇ ಸ್ಥಾಪಿಸಿದರು. ಪರಿಶುದ್ಧವೂ ನಿಸ್ವಾರ್ಥವೂ ಆದ ಸೇವೆಗೈಯಲು ಅವರು ಹಾತೊರೆಯುತ್ತಿದ್ದರು. ಅಂದು ಅವರು ಬಿತ್ತಿದ ಬೀಜವು ಇಂದು ಮರವಾಗಿ ಬೆಳೆದಿದೆ. ಮರವು ಬಿಟ್ಟಿರುವ ಹಣ್ಣನ್ನು ತಿನ್ನುವ ಹಂತಕ್ಕೆ ನಾವೀಗ ಬಂದಿದ್ದೇವೆ. ಆದರೆ ಈ ಮರವನ್ನು ನಾವು ಚೆನ್ನಾಗಿ ನೋಡಿಕೊಳ್ಳಬೇಕು."

## ಮಸೀದಿ

1978ರ ರಂಜಾನ್ ಮುಸ್ಲಿಮರ ಹಬ್ಬ ಪುಟ್ಟಪರ್ತಿಯ ಇತಿಹಾಸದಲ್ಲಿ ಮೈಲಿಗಲ್ಲಾಯಿತು. ಏಕೆಂದರೆ ಅಂದು ಅಲ್ಲಿಯ ಮುಸ್ಲಿಮರು ಭಗವಾನರು ತಮಗಾಗಿ ಕಟ್ಟಿಸಿಕೊಟ್ಟ ಮಸೀದಿಯಲ್ಲಿ ಈದ್ ಅನ್ನು ಆಚರಿಸಿದರು. ಅದೊಂದು ಸರಳವಾದ ವಿಶಾಲವಾದ ಮಸೀದಿ, ಆಧ್ಯಾತ್ಮಿಕ ಪರಿಮಳ ಬೀರುವ ಸನ್ನಿವೇಶ. ಉಸ್ಮಾನಿಯ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಬಷೀರುದ್ದೀನ್ ಆ ಪ್ರದೇಶದ ಮುಸ್ಲಿಮರ ಪರವಾಗಿ ಭಗವಾನರಿಗೆ ಕೃತಜ್ಞತೆ ಸಮರ್ಪಿಸಿದರು. ಭಗವಾನರ ಬೋಧನೆಗಳು ಪವಿತ್ರ ಕುರಾನ್ ನೀಡುವ ಸಂದೇಶವನ್ನು ಹೆಚ್ಚು ಹೆಚ್ಚಾಗಿ ಅರ್ಥ ಮಾಡಿಕೊಳ್ಳಲು ನೆರವಾದುವು ಎಂದು ಹೇಳಿದರು. ಗ್ರಾಮದ ಮುಸ್ಲಿಂ ಸಮುದಾಯದ ಸಂಚಾಲಕ ಜನಾಬ್ ಫಕ್ರುದ್ದೀನ್ ಈ ಪ್ರೇಮಪೂರ್ವಕ ಕೊಡುಗೆಗಾಗಿ ಭಗವಾನರನ್ನು ವಂದಿಸಿದರು. "ಬಿಸಿಲು ಮಳೆಗಳಿಗೆ ಒಡ್ಡಿಕೊಂಡು, ನದಿಯ ಕೆಸರಲ್ಲಿ ಮರಳಲ್ಲಿ ನಡೆದು ನಾಲ್ಕು ಮೈಲಿ ಬುಕ್ಕಪಟ್ಟಣಕ್ಕೆ ಹೋಗಿ ನಾವು ಪ್ರಾರ್ಥನೆ ಸಲ್ಲಿಸಬೇಕಾಗಿತ್ತು" ಎಂದರು. ಭಗವಾನರು ನೆರೆದಿದ್ದ ಮುಸ್ಲಿಮರಿಗೆ ರಂಜಾನ್ ಉಪವಾಸದ ಅರ್ಥ "ಇಂದ್ರಿಯ ಕಾಮನೆಗಳನ್ನು ಕಳಚಿಕೊಂಡು ಭಗವಂತನ ಸನ್ನಿಧಿಯಲ್ಲಿರುವುದು" ಎಂದರು. ಮುಹಮ್ಮದನಿಗೆ ಪವಿತ್ರ ಕುರಾನನ್ನು ದೇವರು ನೀಡಿದ್ದು ರಂಜಾನ್ ತಿಂಗಳಲ್ಲಿ. ನಿಜವಾಗಿ ಧಾರ್ಮಿಕನಾಗಿರುವ ವ್ಯಕ್ತಿಯು ಯಾವುದೇ ಒಂದು ಧರ್ಮದ ಅಥವಾ ಧರ್ಮ ಸಮೂಹದ ಸಿಂಧುತ್ವವನ್ನು ಅಲ್ಲಗಳೆಯುವುದಿಲ್ಲ ; ಅಥವಾ ಒಂದು ದಾರಿಯಿಂದ ಮಾತ್ರವೇ ಮೋಕ್ಷವನ್ನು ಪಡೆಯುವುದು ಸಾಧ್ಯ ಎಂದು ಘೋಷಿಸುವುದಿಲ್ಲ. ಅವರವರು ನಂಬಿಕೊಂಡು ಅನುಸರಿಸುವ ಧರ್ಮದಲ್ಲೇ ಮುಂದುವರಿಯಲು ಪ್ರೋತ್ಸಾಹಿಸುತ್ತಾನೆ. ಎಲ್ಲ ಆಧ್ಯಾತ್ಮಿಕ ಪಥಗಳು ಒಂದೇ ಗುರಿಯ ಕಡೆಗೆ ಹೋಗುತ್ತವೆ ಎಂಬುದನ್ನು ಅವನು ಅರಿತಿರುತ್ತಾನೆ.

ಬಾಬಾ ಅವರ ಕರುಣೆ ಅಮಿತವಾದದ್ದು, ವಿಶ್ವಾತ್ಮಕವಾದದ್ದು ಎಂದೇ ಎಲ್ಲಾ ದೇಶಗಳಿಂದ ಎಲ್ಲಾ ಪಂಥಗಳ ಜನರು ಅವರ ಪಾದಸನ್ನಿಧಿಯಲ್ಲಿ ನೆರೆಯುತ್ತಾರೆ. ಭಾರತದ ಹಲವು ಮತ ಪಂಥಗಳ ಜನರು ಯುಗಾಂತರಗಳಿಂದ ಬಂದ ಗಡಿರೇಖೆಗಳನ್ನು ಅಲಕ್ಷಿಸಿ ಬಾಬಾ ಎಲ್ಲಿರುತ್ತಾರೋ ಅಲ್ಲಿಗೆ ಧಾವಿಸುತ್ತಾರೆ, ಸಹಸ್ರಗಟ್ಟಲೆ ನೆರೆಯುತ್ತಾರೆ. ತಾವು ಸಂಪ್ರದಾಯದಂತೆ ಆಚರಿಸುವ ಹಬ್ಬಗಳು ಸ್ವಾಮಿಯ ಸನ್ನಿಧಿಯಲ್ಲಿ ನಿಜವಾಗಿ ಅರ್ಥಪೂರ್ಣವಾಗುತ್ತವೆ ಎಂದು ಭಾವಿಸುತ್ತಾರೆ. ಮಲೆಯಾಳಿ ಮಾತನಾಡುವ ಕೇರಳೀಯರ-ಹಿಂದುಗಳು ಮತ್ತು ಕ್ರಿಶ್ಚಿಯನ್ನರು-ಓಣಂ ಹಬ್ಬವನ್ನು ವರ್ಷ ವರ್ಷವೂ ಸಾಂಪ್ರದಾಯಿಕ ಆಚರಣೆಗಳೊಂದಿಗೆ ನಡೆಸಲಾಗುತ್ತದೆ. ಓಣಂ ಹಬ್ಬದ ಹಿನ್ನೆಲೆಯಾಗಿರುವ ಪುರಾಣ

ಕತೆಗೆ ಭಗವಾನರು ಹೊಸ ಬೆಳಕನ್ನು ಚೆಲ್ಲಿದ್ದಾರೆ. ಅದುವರೆಗೂ ಜಾನಪದ ನಾಟಕ ನೃತ್ಯಗಳ ಋತುವಾಗಿದ್ದ ಓಣಂ ಈಗ ಆಧ್ಯಾತ್ಮಿಕತೆಯ ಸ್ವರೂಪವನ್ನು ಪಡೆದು ಸಾಧನಾ ಸಪ್ತಾಹವಾಗಿದೆ.

## ಆಯುಷ್ಯವನ್ನು ವಿಸ್ತರಿಸಿಕೊಳ್ಳಿ

1978ರ ದಸರಾ ಉತ್ಸವವು ಎಂದಿನಂತೆ ಪ್ರಶಾಂತಿ ಮಂದಿರದ ಮೇಲೆ ಪ್ರಶಾಂತಿ ಧ್ವಜವನ್ನು ಹಾರಿಸುವುದರೊಂದಿಗೆ ಪ್ರಾರಂಭವಾಯಿತು. ಅಂದೇ ಸಂಜೆ ಶ್ರೀ ಸತ್ಯಸಾಯಿ ಆಸ್ಪತ್ರೆಯ ವಾರ್ಷಿಕೋತ್ಸವ. ನೆರೆದಿದ್ದ ಅಗಾಧ ಜನಸ್ತೋಮವನ್ನುದ್ದೇಶಿಸಿ ದೇಹಾರೋಗ್ಯವನ್ನು ಏಕೆ ಕಾಪಾಡಿಕೊಳ್ಳಬೇಕು ಎಂಬುದನ್ನು ಹೃದಯಸ್ಪರ್ಶಿಯಾಗಿ ವಿವರಿಸಿದರು. "ನಾವು ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಒಂದು ಮುಖ್ಯವಾದ ಕಾರಣವಿದೆ. ಇದುವರೆಗೆ ನೀವು ನೋಡಿರುವುದಕ್ಕಿಂತ ಅತ್ಯಂತ ಶ್ರೇಷ್ಠವಾದ, ಮಹತ್ವದ ಇನ್ನೂ ಅನೇಕ ಲೀಲೆಗಳನ್ನು ಮಹಿಮೆಗಳನ್ನು ನೀವು ಇನ್ನೂ ನೋಡಬೇಕಾಗಿದೆ. ಅನೇಕ ಅದ್ಭುತಗಳಿಗೆ, ವಿಜಯಗಳಿಗೆ ಸಾಕ್ಷಿಗಳಾಗಬೇಕಾಗಿದೆ. ಅವುಗಳನ್ನು ನೋಡಿದಾಗ ನೀವು ಆನಂದದಿಂದ ರೋಮಾಂಚಿತರಾಗುವಿರಿ. ಆದ್ದರಿಂದ ನಿಮ್ಮನ್ನು ನೀವು ಜಾಗರೂಕತೆಯಿಂದ ನೋಡಿಕೊಳ್ಳಿ, ಆರೋಗ್ಯ ಕಾಪಾಡಿಕೊಂಡು ಹೃದಯದಲ್ಲಿ ಸದಾ ಆನಂದವು ತುಂಬಿರುವಂತೆ ಮಾಡಿಕೊಳ್ಳಿ,"ಎಂದರು.

ಇಡೀ ವಾರ ನಡೆದ ವೇದ ಯಜ್ಞಕ್ಕೆ ಸಂಬಂಧಿಸಿದಂತೆ ನೀಡಿದ ದಿವ್ಯೋಪನ್ಯಾಸಗಳಲ್ಲಿ ಬಾಬಾ ಶಾಸ್ತ್ರಗ್ರಂಥಗಳಲ್ಲಿ ಬರುವ ಅನೇಕ ಭಾಗಗಳ ಅರ್ಥವನ್ನು ವಿವರವಾಗಿ ನಿರೂಪಿಸಿದರು. ಪ್ರತಿ ಸಾರಿ ಆಹಾರ ಸೇವಿಸುವಾಗಲೂ ಅದಕ್ಕೆ ಮೊದಲು ಪಠಿಸಬೇಕಾದ ಗೀತಾಶ್ಲೋಕಗಳನ್ನು ವಿಶೇಷವಾಗಿ ವಿವರಿಸಿದರು. ಸಿದ್ಧವಾಗಿರುವ ಆಹಾರದಲ್ಲಿ, ಆಹಾರ ಬೇಯಿಸಲು ಬಳಸಿದ ಅಗ್ನಿಯಲ್ಲಿ, ಅಡಿಗೆ ಮಾಡಿದವನಲ್ಲಿ, ಆಹಾರ ಸೇವಿಸಿದವನಲ್ಲಿ ಭಗವಂತನಿರುವುದನ್ನು ಆ ಶ್ಲೋಕಗಳು ನೆನಪಿಗೆ ತರುತ್ತವೆ. ಆ ಆಹಾರವು ನೀಡಿದ ಶಕ್ತಿ ಸಾಮರ್ಥ್ಯದ ಫಲವಾಗಿ ಸೇವಿಸಿದವನು ಹಲವು ಕಾರ್ಯ ಚಟುವಟಿಕೆಗಳಲ್ಲಿ ತೊಡಗುತ್ತಾನೆ. ಅವುಗಳಲ್ಲೂ ಪರಮಾತ್ಮನಿದ್ದಾನೆ.

ದೇಶದ ವಿವಿಧ ಭಾಗಗಳಿಂದಲೂ, ವಿದೇಶಗಳಿಂದಲೂ ಸಾವಿರಗಟ್ಟಲೆ ಜನರು ಬಂದು ನೆರೆಯುವ ಸಂದರ್ಭ ದಸರಾ. ಸಾಯಿಶಿಕ್ಷಣದ ತ್ರಿವಳಿ ಆದರ್ಶಗಳಾದ ಕರ್ತವ್ಯ, ಶ್ರದ್ಧೆ ಮತ್ತು ಶಿಸ್ತು (Duty, Devotion and Discipline) ಗಳನ್ನು ಭಗವಾನರ ಕಾಲೇಜುಗಳ ಬಾಲಕ ಬಾಲಿಕೆಯರು ಚುಟ್ಟುನಿಟ್ಟಾಗಿ ಆಚರಿಸುವುದನ್ನು ಅವರು ಸಾಕ್ಷಾತ್ತಾಗಿ ನೋಡಿ ಆನಂದಿಸುತ್ತಾರೆ. ಹಲವಾರು ವಿಷಯಗಳ ಬಗೆಗೆ ಈ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪ್ರೌಢವಾಗಿ ಮಾತನಾಡುತ್ತಾರೆ. ಸಾಯಿ ಪ್ರೇಮ ಸೇವೆಗಳ ಆತ್ಮೀಯ ಅನುಭವಗಳನ್ನು ಹಂಚಿಕೊಳ್ಳುತ್ತಾರೆ. ಭಾರತದ ಬೇರೆ ಬೇರೆ ಭಾಗಗಳಿಂದ ಬಂದ ವಿದ್ಯಾರ್ಥಿಗಳು ಪ್ರದರ್ಶಿಸುವ ನಾಟಕಗಳು, ಸಮೂಹಗಾನಗಳು, ವಾದ್ಯ ಸಂಗೀತ ಇವುಗಳನ್ನು ನೋಡುತ್ತಾರೆ, ಕೇಳುತ್ತಾರೆ. ವಿದ್ಯಾರ್ಥಿಗಳು ಹವಾಯಿ, ಫಿಜಿ, ಶ್ರೀಲಂಕಾ, ಟಾಂಜಾನಿಯ, ಲಿಬ್ಯ

ಮೊದಲಾದ ದೂರದ ದೇಶಗಳಿಂದಲೂ ಬರುತ್ತಾರೆ. ಮಾನವ ಜನಾಂಗದ ಸಂಘಟನೆ ಇನ್ನು ಮುಂದೆ ಆರಾಮ ಕುರ್ಚಿಯ ಕನಸಾಗಬೇಕಾಗಿಲ್ಲ ; ಅದು ಇಲ್ಲಿ ವಾಸ್ತವವಾಗಿದೆ.

## ಹಳ್ಳಿಗಳನ್ನು ನಗರಗಳಿಂದ ರಕ್ಷಿಸಿ

1978ರಲ್ಲಿ ಜನ್ಮದಿನೋತ್ಸವ ಸಮಾರಂಭಕ್ಕಾಗಿ ಇಪ್ಪತ್ತೈದು ಸಾವಿರ ಜನರು ಪ್ರಶಾಂತಿ ನಿಲಯದಲ್ಲಿ ನೆರೆದಿದ್ದರು. ಹುಟ್ಟಿದ ಹಬ್ಬ ಎಂಬುದಕ್ಕಾಗಿ ಅಷ್ಟು ಜನರು ಅಲ್ಲಿ ಸೇರಿದ್ದಾರೆ ಎನ್ನುವುದಕ್ಕಿಂತ ಅಷ್ಟು ಜನರು ಸೇರಿರುವುದರಿಂದ ಹುಟ್ಟಿದ ಹಬ್ಬವನ್ನು ಆಚರಿಸಲಾಗುತ್ತಿದೆ ಎನ್ನುವುದು ಮೇಲು ಎಂದರು ಬಾಬಾ. "ನಾನು ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಸಂಕಲ್ಪಿಸಿದ ಈ ದೇಹವು ಮಾನವ ಜನಾಂಗದ ನಡುವೆ ಕಾಣಿಸಿಕೊಂಡ ದಿನವನ್ನು ಪ್ರಚಾರ ಮಾಡುವುದಕ್ಕೆ ನನಗೆ ಸ್ವಲ್ಪವೂ ಆಸಕ್ತಿಯಿಲ್ಲ. ನಿಮ್ಮಲ್ಲಿ ಪ್ರತಿಯೊಬ್ಬರೂ ಎಂದು ನನ್ನನ್ನು ನಿಮ್ಮ ಹೃದಯಗಳಲ್ಲಿ ಪ್ರತಿಷ್ಠಾಪಿಸಿಕೊಳ್ಳುವಿರೋ ಆ ದಿನವನ್ನು ನನ್ನ ಜನ್ಮದಿನವೆಂದು ಕೊಂಡಾಡಬೇಕೆಂದು ನಾನು ಇಚ್ಛಿಸುತ್ತೇನೆ."

"ಜನ್ಮದಿನವು ಸಂತೋಷಮಯವಾಗಲಿ" ಎಂದು ಹಾರೈಸಿದವರಿಗೆ ಅವರು "ಇದು ಅನಗತ್ಯವಾದ ಹಾರೈಕೆ. ಏಕೆಂದರೆ ನಾನು ಸದಾಕಾಲವೂ ಸಂತೋಷವಾಗಿಯೇ ಇರುತ್ತೇನೆ" ಎಂದರು. ಉತ್ಸವದ ಅಂಗವಾಗಿ ವಿದ್ಯಾರ್ಥಿಗಳು ವಾದ್ಯಮೇಳದೊಂದಿಗೆ ಸಾಯಿ ಅವತಾರದ ಕಥೆಯನ್ನು ಹಾಡಿದರು. ಪ್ರತಿಯೊಬ್ಬರೂ ದೈನಂದಿನ ಬದುಕನ್ನು ನಿಜವಾದ ಬದುಕಾಗಿ ಪರಿವರ್ತಿಸಿಕೊಳ್ಳಬೇಕು, ಭಗವಂತನೇ ಜೀವದುಸಿರಾಗಿದ್ದಾನೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು ಎಂದು ಬಾಬಾ ಕರೆಯಿತ್ತರು. ಭಗವಾನರು ದೇಶದ ಮೂಲೆ ಮೂಲೆಗಳಿಂದ ಸೇವಾದಳ ಘಟಕಗಳನ್ನು ಕರೆದಿದ್ದರು. (ಸಾಯಿ ಆದರ್ಶಗಳನ್ನಿಟ್ಟುಕೊಂಡು ಜೀವಿಸುತ್ತಾ, ನೊಂದವರಿಗೆ, ದೀನ ದುಃಖಿತರಿಗೆ, ವಿಕಲಾಂಗರಿಗೆ ಸೇವೆಸಲ್ಲಿಸುವುದಕ್ಕಾಗಿ ತರಬೇತಿ ಪಡೆದ ಗಂಡಸರು ಮತ್ತು ಹೆಂಗಸರು.). ಅವರು ನಗರ ಜೀವನದ ಕೆಡುಕುಗಳು ತೀವ್ರಗತಿಯಲ್ಲಿ ಹರಡುತ್ತಿರುವ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಕೆಲಸ ಮಾಡಬೇಕೆಂದು ಬಾಬಾ ಆದೇಶಿಸಿದರು. ಹಳ್ಳಿಗರನ್ನು ತಪ್ಪು ದಾರಿಗೆಳೆಯಲಾಗುತ್ತಿದೆ. ನಗರದ ಜನರು ಸಿನಿಮಾ ಮಂದಿರಗಳು ಮತ್ತು ಕಾರುಗಳ ನಡುವೆ, ಅದ್ದೂರಿಯ ಹಾಗೂ ಮಾದಕ ಜೀವನ ನಡೆಸುತ್ತಾ, ಸುಖವಾಗಿದ್ದಾರೆಂದು ಹಳ್ಳಿಯ ಜನರು ಕಲ್ಪಿಸಿಕೊಂಡಿದ್ದಾರೆ. ಜೂಜು ಮೊದಲಾದ ದುರ್ವ್ಯಸನಗಳಿಂದ, ಸದ್ದುಗದ್ದಲಗಳಿಂದ, ಗೂಂಡಾಗಿರಿಯಿಂದ ಅವರು ದೈಹಿಕ ಸುಖವಾಗಿದ್ದಾರೆಂದು ಹಳ್ಳಿಯ ಜನರು ಕಲ್ಪಿಸಿಕೊಂಡಿದ್ದಾರೆಂದರೆ ಕುಡಿತ.ಮತ್ತು ನೈತಿಕ, ಆರ್ಥಿಕ ಬಲವು ಹಾಳಾಗುತ್ತಿದೆ ಎಂಬುದು ಅವರಿಗೆ ತಿಳಿದಿಲ್ಲ. "ಅವರನ್ನು ನೈತಿಕ ಹಾಗೂ ದೈಹಿಕ ಮಾಲಿನ್ಯದಿಂದ ರಕ್ಷಿಸಿ" ಎಂದು ಅಪ್ಪಣೆ ಮಾಡಿದವರು ಬಾಬಾ. ಪ್ರತಿಯೊಬ್ಬ ಸೇವಾದಳ ಕಾರ್ಯಕರ್ತನೂ ಸದಾ ತನ್ನೊಂದಿಗೆ ಒಂದು ಪ್ರಥಮ ಚಿಕಿತ್ಸಾ ಪೆಟ್ಟಿಗೆಯನ್ನು ಕೊಂಡೊಯ್ಯಬೇಕು. ಇದರಿಂದ ಅವನು ಅಗತ್ಯವುಳ್ಳವರಿಗೆ ತ್ವರಿತವಾಗಿ ಸೇವೆ ಸಲ್ಲಿಸುವುದು ಸಾಧ್ಯವಾಗುತ್ತದೆ ಎಂದು ಯಾರೋ ಒಬ್ಬರು ಸಲಹೆ ಮಾಡಿದರು. ಆಗ ಬಾಬಾ ಪ್ರಥಮ ಚಿಕಿತ್ಸೆ ಪೆಟ್ಟಿಗೆಯಲ್ಲಿ ಏನಿರಬೇಕೆಂಬುದನ್ನು ತಿದ್ದುಪಡಿ ಮಾಡಿ ಹೇಳಿದರು. "ಅದರಲ್ಲಿ

ವಿವೇಕ, ವೈರಾಗ್ಯಗಳೆಂಬ ಕೆಲವು ಮಾತ್ರೆಗಳನ್ನು ಇಟ್ಟುಕೊಳ್ಳಿರಿ. ಒಂದೆರಡು ಔನ್ಸು ಇಂದ್ರಿಯ ನಿಗ್ರಹವನ್ನೂ, ಪ್ರೇಮದ ಒಂದು ಪೊಟ್ಟಣವನ್ನೂ, ಸಹನೆಯೆಂಬ ಬ್ಯಾಂಡೇಜು ಪಟ್ಟಿಯನ್ನೂ ಇಟ್ಟುಕೊಳ್ಳಿರಿ. ಆಗಲೀಗ ನೀವು ಅಹಂಕಾರದ ಲಕ್ವಾ ಹೊಡೆದಿರುವವರಿಗೆ, ದುರಾಸೆಯ ರೋಗ ಕರಳಿರುವವರಿಗೆ, ದೃಷ್ಟಿಯ ಕಾಮಾಲೆಯಿರುವವರಿಗೆ, ಸೇವಾಕಾರ್ಯವೆಂಬುದು ಅಲರ್ಜಿಯಾಗಿರುವವರಿಗೆ ಪರಿಣಾಮಕಾರಿಯಾಗಿ ಉಪಚಾರ ಮಾಡಬಹುದು."

1978ರ ನವೆಂಬರ್ 28ರಂದು ಬಾಬಾ ಪ್ರಶಾಂತಿ ನಿಲಯದಲ್ಲಿ ಆರ್ಟ್ಸ್, ಸೈನ್ಸ್, ಕಾಮರ್ಸ್ ಕಾಲೇಜಿನ ಶಂಕುಸ್ಥಾಪನೆ ಮಾಡಿದರು. ಈಶಾನ್ಯ ಮೂಲೆಯಲ್ಲಿ ತಾವು ಅಂಗೈಯಿಂದ ಸೃಷ್ಟಿಸಿದ ನವರತ್ನಗಳನ್ನು ಇಡುವುದರ ಮೂಲಕ ಪವಿತ್ರಗೊಳಿಸಿದ ಮೇಲೆ ಮೊದಲನೆಯ ಸಾಲು ಕಲ್ಲುಗಳನ್ನು ಇಟ್ಟರು. ಪ್ರತಿಯೊಂದು ಕಾಲೇಜಿನಲ್ಲೂ ಅಷ್ಟೇ ಭವ್ಯವಾದೊಂದು ಸಭಾಭವನ ಇರಬೇಕೆಂದು ಬಾಬಾ ಬಯಸುತ್ತಾರೆ. ಭವ್ಯವಾದ ಒಂದು ಗ್ರಂಥಾಲಯ ಕಟ್ಟಡವೂ ಇರಬೇಕೆಂದೂ ಅದು ಶೈಕ್ಷಣಿಕ ಸಂಸ್ಥೆಯ ಮೂಲಭೂತ ಅಂಗವೆಂದೂ ಅವರು ಪರಿಗಣಿಸುತ್ತಾರೆ. ಈ ಎರಡು ಅಂಗ ರಚನೆಗಳ ಅಡಿಗಲ್ಲು ಇಡಲು ಭಗವಾನರು ಮಧುರೆಯ ಶ್ರೀ ರಾಮನಾಥನ್ ಚೆಟ್ಟಿಯಾರರನ್ನೂ ನವನಗರದ ರಾಜಮಾತೆಯನ್ನೂ ಆರಿಸಿದರು.

## ಈಸ-ಸಾಯಿ

ಕ್ರಿಸ್‌ಮಸ್ ಬಂತೆಂದರೆ ಸಹಸ್ರಾರು ಜನರು ಬಾಬಾ ಅವರ ಸನ್ನಿಧಿಯಲ್ಲಿ ನೆರೆಯುತ್ತಾರೆ. ಏಕೆಂದರೆ ಅವರು ಏಸುವಿನ ನಿಜವಾದ ದಿವ್ಯವೈಭವವನ್ನು ತೋರಿಸಿಕೊಡುವ ಹಾಗೂ ದೇವ ಪುತ್ರನು ಬೆಳಗಿದ ದಾರಿಯಲ್ಲಿ ಅವರನ್ನು ಕೊಂಡೊಯ್ಯುವ ಪರಮಗುರುವನ್ನು ಭಗವಾನರಲ್ಲಿ ಕಾಣುತ್ತಾರೆ. ಅಂದು ಬಾಬಾ ಅವರಿಗೆ ಹೇಳಿದರು : "ಸ್ತೋತ್ರಗಳು, ಮೇಣದಬತ್ತಿಗಳು, ಬೈಬಲ್ ಪಠಣ, ಜೀಸಸನ ಜೀವಿತದ ಘಟನೆಗಳನ್ನು ಕುರಿತ ನಾಟಕಗಳ ಅಭಿನಯ ಇವಿಷ್ಟು ಸಾಲದು. ಅಂತಿಮ ಭೋಜನವಾದ ಬ್ರೆಡ್ಡು ತನ್ನ ದೇಹದ ಮಾಂಸವೆಂದೂ, ವೈನು ತನ್ನ ರಕ್ತವೆಂದೂ ಜೀಸಸನು ಘೋಷಿಸಿದನಷ್ಟೆ. ಅದರ ಅರ್ಥ ಏನು ? ರಕ್ತ ಮಾಂಸಗಳಿಂದ ಕೂಡಿದ ಪ್ರತಿಯೊಬ್ಬ ಜೀವಿಯೂ ತಾನೇ ಆಗಿದ್ದೇನೆ, ಅವನ್ನು ತನ್ನಂತೆಯೇ ವ್ಯವಹರಿಸಬೇಕು ಎಂದು. ಅಂದರೆ, ಪ್ರತಿಯೊಬ್ಬ ಜೀವಿಯೂ ದೈವಿಕವೆ ಆಗಿದ್ದಾನೆ. ಆದ್ದರಿಂದ ಬೇರೆ ಬೇರೆ ವ್ಯಕ್ತಿಗಳ ನಡುವೆ ಒಳ್ಳೆಯವರು-ಕೆಟ್ಟವರು, ಗೆಳೆಯರು-ವೈರಿಗಳು, ನಾವು-ಅವರು ಎಂಬಿತ್ಯಾದಿ ಭೇದಗಳನ್ನು ಮಾಡಕೂಡದು. ಜೀಸಸನಿಗೆ ಅವನ ತಂದೆ ತಾಯಿ ಇಟ್ಟ ಹೆಸರು ಈಸ (Isa) ಎಂದು. ಅದನ್ನು ಒಂದೇ ಸಮನೆ ಉಚ್ಚರಿಸಿದರೆ ಸಾಯಿ ಎಂಬ ಹೆಸರು ಹೊರಡುತ್ತದೆ ! ಎರಡರ ಅರ್ಥವೂ ಈಶ್ವರ ಎಂದೇ. "ಜೀಸನು ಅನೇಕ ವರ್ಷ ಕಳೆದ ಟಿಬೆಟನ್ ಮಠದಲ್ಲಿ ಅವನ ಹೆಸರನ್ನು ಈಸ ಎಂದೇ ದಾಖಲು ಮಾಡಲಾಗಿದೆ. ಅರ್ಥ 'ಎಲ್ಲ ಜೀವಿಗಳ ಒಡೆಯ' ಎಂಬುದಾಗಿ" ಎಂದು ಬಾಬಾ ನುಡಿದರು.

ತಮಿಳುಜನ ಜನವರಿ 14ರಂದು ನೂತನ ವರ್ಷಾರಂಭವನ್ನು ಆಚರಿಸಿದರು. ಬಾಬಾ ವಿಮಾನದಲ್ಲಿ ಮದರಾಸಿಗೆ ಹೋಗಿ ಆ ಪವಿತ್ರ ದಿವಸದಂದು ಭಕ್ತರನ್ನು ಆಶೀರ್ವದಿಸಿದರು. ಅಲ್ಲಿಂದು

ಧರ್ಮಕ್ಷೇತ್ರವನ್ನು ಉದ್ಘಾಟಿಸಿದರು. ಅದರ ಹೆಸರು 'ಸುಂದರಂ'. ಇದರಿಂದ ಮುಂಬಯಿಯಲ್ಲಿ 'ಸತ್ಯಂ' ಆಗಿ ಪ್ರಾರಂಭವಾದದ್ದು, ಹೈದರಾಬಾದಿನಲ್ಲಿ 'ಶಿವಂ' ಆಗಿ ಬೆಳೆದು ಮದರಾಸಿನಲ್ಲಿ ಸಂಪೂರ್ಣ ಮುಕ್ತಾಯಗೊಂಡಿತು. ಈ ಉತ್ಸವದ ಜೊತೆಗೆ ತಮಿಳುನಾಡಿನ ಬೇಸಾಯಗಾರರ ಸುಗ್ಗಿ ಹಬ್ಬ ಕೂಡ. ಆಹಾರಧಾನ್ಯ ಬೆಳೆಯಲು ನೆರವಾದ ಎತ್ತುಗಳಿಗೂ, ಹಾಲು ನೀಡುವ ಹಸುಗಳಿಗೂ ಕೃತಜ್ಞತೆ ಅರ್ಪಿಸುವುದು ಈ ಹಬ್ಬದ ಒಂದು ಅಂಗ. ಸಮೃದ್ಧಿಯ ಸಂಕೇತವಾಗಿ ಹಾಲನ್ನು ಉಕ್ಕಿಸುತ್ತಾರೆ. ತೆಲುಗು ನೂತನ ವರ್ಷಾರಂಭವನ್ನು ಮಾರ್ಚಿ ತಿಂಗಳಲ್ಲಿ ಆಚರಿಸಲಾಯಿತು. ಇಡೀ ವಾರ ಒಂದು ಕಾಲ ಹೈದರಾಬಾದಿನಲ್ಲಿದ್ದು ಬಾಬಾ ಹಬ್ಬದ ಸಂತೋಷವನ್ನು ದ್ವಿಗುಣಗೊಳಿಸಿದರು. ನಗರದ ಜನರು ಹಳ್ಳಿಗಳಿಗೆ ಹೋಗಿ ಸೇವೆ ಸಲ್ಲಿಸಬೇಕು, ಬಡತನ, ಅನಾರೋಗ್ಯ, ಶೋಷಣೆಗಳ ವಿರುದ್ಧ ಅವರು ಹೋರಾಡುವುದಕ್ಕೆ ಸಹಾಯ ಮಾಡಬೇಕು ಎಂದು ಕರೆಯಿತ್ತರು.

ಈ ಮಧ್ಯೆ 1979 ಜನವರಿ 30ನೆಯ ತಾರೀಕು ಸ್ವಾಮಿ ಪಶ್ಚಿಮ ಕರಾವಳಿ ನಗರ ಮಂಗಳೂರಿಗೆ ಹೋಗಿ ಅಲ್ಲಿಂದ ಶ್ರೀ ಸತ್ಯಸಾಯಿ ಲೋಕಸೇವಾ ಟ್ರಸ್ಟ್ ಎರಡು ಬೃಹತ್ ಶೈಕ್ಷಣಿಕ ಸಂಕೀರ್ಣಗಳನ್ನು ನಡೆಸುತ್ತಿರುವ ಅಳಿಕೆಗೆ ಹೋದರು. ಎರಡು ಸಂಸ್ಥೆಗಳಲ್ಲಿ ಒಂದು ಅಳಿಕೆಯಲ್ಲೇ ಇದೆ. ಸುಂದರವಾದ ಪಶ್ಚಿಮಘಟ್ಟದ ಕಣಿವೆಗಳ ನಡುವೆ ಚೇತೋಹಾರಿ ಪರಿಸರದಲ್ಲಿದೆ. ಇನ್ನೊಂದು ನಂದಿಬೆಟ್ಟದ ಸುತ್ತಮುತ್ತಿನ ಬೆಟ್ಟಗಳ ನಡುವೆ ಬಯಲು ಪ್ರದೇಶದಲ್ಲಿ ಮುದ್ದೇನಹಳ್ಳಿಯಲ್ಲಿದೆ. ಅಳಿಕೆ ಒಂದು ಸ್ವಪ್ನದ ಸಾಕಾರರೂಪ. ಶ್ರದ್ಧೆ ಮತ್ತು ಆಸೆಗಳು ಮೂರ್ತಿವೆತ್ತ ಸಂದರ್ಭ ಅಲ್ಲಿನ ಡಾರ್ಮಿಟರಿಗಳಲ್ಲಿ, ಆಟದ ಬಯಲಿನಲ್ಲಿ, ಗ್ರಂಥಾಲಯ ತರಗತಿ ಕೊಠಡಿಗಳಲ್ಲಿ, ಸುತ್ತಣ ಉದ್ಯಾನದಲ್ಲಿ ದೈವೀಕೃಪೆ ಮೈವೆತ್ತಿದೆ. ಶ್ರದ್ಧಾವಂತ ಅಧ್ಯಾಪಕರ ತಂಡದ ಚಟುವಟಿಕೆಗಳಲ್ಲಿ ಮಡಿಯಾಲ ನಾರಾಯಣ ಭಟ್ ಅವರ ಹೃದಯ ಮಿಡಿಯುತ್ತದೆ. ಅದೊಂದು ಋಷ್ಯಾಶ್ರಮದಂತಿದೆ. ಗಾಳಿಯ ಒಂದೊಂದು ಬೀಸಿಗೂ ತುಂಬಿ ನಿಂತ ತೆಂಗು ಅಡಕೆ ತೋಟಗಳು 'ಸಾಯಿ ರಾಂ' ಎಂದು ಪಿಸುಗುಟ್ಟುತ್ತವೆ.

## ಬೆಳಕಿನತ್ತ ಒಯ್ದರು

ಅಳಿಕೆಯ ಸಂಸ್ಥೆಯ ಪೋಷಕ ನಾರಾಯಣ ಭಟ್ ಅವರು ಕಾರು ಅಪಘಾತದಲ್ಲಿ ಮಡಿದುದರಿಂದ ಇಡೀ ಜಿಲ್ಲೆಗೇ ದುಃಖ ಬಂದಡರಿತ್ತು. ಬಾಬಾ ಅವರ ದಿವ್ಯೋಪನ್ಯಾಸಗಳು ಆ ದುಃಖವನ್ನು ಹೋಗಲಾಡಿಸಿದುವು. ಸುಮಾರು ಒಂದು ಸಾವಿರಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿದ್ದ ವಿದ್ಯಾರ್ಥಿಗಳ ಹೃದಯದಲ್ಲಿ ಆನಂದವನ್ನು ತುಂಬಿದರು. ಸುಮಾರು ಅರವತ್ತು ಜನ ಅಧ್ಯಾಪಕರು, ಸ್ಥಾಪಕ ನಾರಾಯಣ ಭಟ್ ಅವರೊಡನೆ ಸಮಸಮವಾಗಿ ನಿಂತು ದುಡಿದ ಹಿತೈಷಿಗಳು, ಸಾವಿರಾರು ವಿದ್ಯಾರ್ಥಿ ವಿದ್ಯಾರ್ಥಿನಿಯರ ಪಾಲಕರು, ವಿವಿಧ ಕಾರ್ಯಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಹಳೆಯ ವಿದ್ಯಾರ್ಥಿಗಳು, ಸ್ಥಳದ ಹಳ್ಳಿಗಳು ಮತ್ತು ತೋಟಗಳ ರೈತರು, ಕುಶಲ ಕರ್ಮಿಗಳು, ಕೆಲಸಗಾರರು ಇವರೆಲ್ಲರಿಗೂ ಬಾಬಾ ಶ್ರದ್ಧೆ ಉತ್ಸಾಹ ತುಂಬುವಂತೆ ಮಾಡಿದರು. ಅವರು ಅಳಿಕೆಯನ್ನು ಒಂದು ಪಾವನ ಯಾತ್ರಾ ಸ್ಥಳ ಎಂದರು. "ನಿಮ್ಮ ವಶಕ್ಕೆ ಬಂದ ಮಕ್ಕಳನ್ನು ಜತನವಾಗಿ ಕಾಪಾಡಿಕೊಂಡು ಅವರನ್ನು ಭಾರತದ ಸುಪುತ್ರರಾಗುವಂತೆ ಬೆಳೆಸುತ್ತಿದ್ದೀರಿ" ಎಂದರು. ಬೃಂದಾವನಕ್ಕೆ ಹಿಂದಿರುಗುವ

ಮೊದಲು ಅಳಿಕೆಯ ಸಮೀಪದ ಗ್ರಾಮಗಳಾದ ಪುತ್ತೂರು, ಚೊಕ್ಕಾಡಿಗಳಿಗೂ, ಮಂಗಳೂರಿಗೂ, ಮಣಿಪಾಲಕ್ಕೂ ಭೇಟಿ ನೀಡಿದರು. ಮಣಿಪಾಲ ಸುವ್ಯವಸ್ಥಿತ ಶಿಕ್ಷಣ ಕೇಂದ್ರ. ಸುಸಜ್ಜಿತ ವೈದ್ಯಕೀಯ ಕಾಲೇಜು ಹಾಗೂ ಎಂಜಿನಿಯರಿಂಗ್ ಕಾಲೇಜುಗಳು ಇಲ್ಲಿವೆ. ಬಾಬಾ ಅಲ್ಲಿಗೆ ಹೋದಾಗ ರಾತ್ರಿ 11.00 ಗಂಟೆ. ಕೊನೆಯ ಪಕ್ಷ ಹದಿನೈದು ಸಾವಿರ ಜನ ಅವರ ದರ್ಶನ ಪಡೆಯಲು ಕಾದು ಕುಳಿತಿದ್ದರು. ಭಗವಂತನ ದರ್ಶನ ಪಡೆದು, ಆತನ ವಾಣಿಯನ್ನು ಆಲಿಸಲು ಅವರಿಗೆ ಅಂತಹ ಉತ್ಕಟ ಆಸೆಯಿತ್ತು.

ಭಾರತೀಯ ಸಂಸ್ಕೃತಿ ಮತ್ತು ಆಧ್ಯಾತ್ಮಿಕತೆಯನ್ನು ಕುರಿತ 1979ರ ಬೇಸಿಗೆ ಶಿಬಿರ ಭಗವದ್ಗೀತೆಯನ್ನು ಮುಖ್ಯ ವಿಷಯವಾಗಿ ಇಟ್ಟುಕೊಂಡಿತ್ತು. ಒಂದು ವಾರ ಈ ವಿಶ್ವ ಪ್ರಸಿದ್ಧ ಗ್ರಂಥವು ಪ್ರತಿಪಾದಿಸುವ ಕರ್ಮ, ಭಕ್ತಿ, ಜ್ಞಾನ ಮಾರ್ಗಗಳ ವಿವೇಚನೆಗೆ ಮೀಸಲಾಗಿತ್ತು. ಭಗವಾನ್ ಕೃಷ್ಣನು ತನ್ನ ಅಧೀರನೂ, ಭ್ರಮಿತನೂ ಆದ ಯೋದ್ಧ-ಗೆಳೆಯ ಅರ್ಜುನನಿಗೆ ಬೋಧಿಸಿದ ತತ್ತ್ವಗಳನ್ನು ಕುರಿತು ಸರಳವೂ ತೃಪ್ತಿಕರವೂ ಆದ ವ್ಯಾಖ್ಯಾನವನ್ನೂ ಭಗವಾನರ ದಿವ್ಯೋಪಖ್ಯಾನಗಳು ನೀಡಿದುವು. ವಿದ್ಯಾರ್ಥಿಗಳು ಅಡ್ಡಿಗಳನ್ನು ಲೆಕ್ಕ ಹಾಕುತ್ತಾ ಕುಳಿತುಕೊಳ್ಳದೆ ತಮ್ಮ ಶಕ್ತಿ ಮೀರಿ ಪ್ರಯತ್ನ ಮಾಡಬೇಕು, ಮಿಕ್ಕುದೆಲ್ಲವನ್ನೂ ಭಗವಂತನಿಗೆ ಬಿಟ್ಟು ಬಿಡಬೇಕು. ಕೃಷ್ಣನು ಯುದ್ಧರಂಗದಲ್ಲಿ ಘೋಷಿಸಿದಂತೆಯೇ ಅವರು, ವಿಜಯ ದೊರಕುವುದು ಧೀರರಿಗೆ ಮಾತ್ರ, ಆ ಧೈರ್ಯವನ್ನು ಆತ್ಮನಿಂದ ಪಡೆದುಕೊಳ್ಳಬೇಕು ಎಂದು ಘೋಷಿಸಿದರು. ಭಾರತದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಜಸ್ಟಿಸ್ ವಿ. ಆರ್. ಕೃಷ್ಣ ಅಯ್ಯರ್ ಅವರು ಒಂದು ತಿಂಗಳ ಅವಧಿಯ ಈ ಶಿಬಿರವನ್ನು ಉದ್ಘಾಟಿಸುತ್ತಾ ಭಗವಾನರ ಸನ್ನಿಧಿಯಲ್ಲಿ ಹೀಗೆ ನುಡಿದರು : "ನಮ್ಮ ಕಾಲೇಜುಗಳು ದುರಭ್ಯಾಸಗಳ, ಹಿಂಸಾಚಾರದ ನೆಲೆಯಾಗುವುದನ್ನು ನಾವು ತಪ್ಪಿಸಬೇಕಾಗಿದೆ. ವಿದ್ಯಾರ್ಥಿಗಳು ಮಾದಕ ದ್ರವ್ಯ ವ್ಯಸನಿಗಳಾಗುತ್ತಿದ್ದಾರೆ, ಕೇವಲ ಭೌತಿಕ ಕಾಮನೆಗಳ ದಾಸರಾಗುತ್ತಿದ್ದಾರೆ. ಅದನ್ನು ಮೊದಲು ನಿವಾರಿಸಬೇಕು. ಬಾಬಾ ಅವರ ಪ್ರೇಮವೆಂಬ ಅಂಜನವು ಕರ್ಮವನ್ನು ಪ್ರವೇಶಿಸಬೇಕು, ಜ್ಞಾನವನ್ನು ಬೆಳಗಬೇಕು, ಧರ್ಮದ ಔನ್ನತ್ಯಕ್ಕೆ ಏರಬೇಕು". ವಿಜ್ಞಾನದ ಅಸಮರ್ಪಕತೆ ಹಾಗೂ ಶಾಂತಿ ಶಿಸ್ತು ನೈತಿಕತೆ ಹಾಗೂ ಸೋದರಿಕೆಗಳ ಪುನರ್ ಸ್ಥಾಪನೆಯಲ್ಲಿ ಅದು ವಿಫಲವಾಗಿರುವಿಕೆಗಳನ್ನು ಅವರು ಹೇಳಿದರು. ಭಾರತವು ತನ್ನ ಆತ್ಮವನ್ನು ಪುನರ್ದರ್ಶನ ಮಾಡಬೇಕು. ಋಷಿಮುನಿಗಳ ದಿವ್ಯವಾಣಿಯನ್ನು ಆಲಿಸಬೇಕು. ಭಗವಾನರು ಮಾತನಾಡುತ್ತಾ, ಇಂದಿನ ಜನನಾಯಕರಿಗೆ ಜನರಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಔನ್ನತ್ಯವನ್ನು ಬೆಳೆಸುವ ಕಡೆಗೆ ಯಾವ ಆಸಕ್ತಿಯೂ ಇಲ್ಲ, ಜನರಿಗಾದರೋ ನಾಯಕರು ತಮ್ಮ ಕರ್ತವ್ಯಗಳನ್ನು ಅಲಕ್ಷಿಸಿದಾಗ ಉಂಟಾಗಬಹುದಾದ ಗಂಡಾಂತರಗಳ ಬಗೆಗೆ ಎಚ್ಚರಿಕೆ ಕೊಡುವ ಶಕ್ತಿಯೂ ಇಲ್ಲ.

## ಓಹ್!

ಶಿಬಿರದಲ್ಲಿ ಇನ್ನೂರು ಜನ ವಿದೇಶೀ ವಿದ್ಯಾರ್ಥಿಗಳ ನಡುವೆ ಒಬ್ಬಳಾಗಿದ್ದ ಡೆನಿಸ್ ಎವರ್‌ಸೋಲ್, ಶಿಬಿರವು ತನ್ನ ಮೇಲೆ ಎಂತಹ ಪ್ರಭಾವ ಬೀರಿತು ಎಂಬುದನ್ನು ವಿವರಿಸಿದ್ದಾಳೆ : "ಬೇಸಿಗೆ ಶಿಬಿರದಲ್ಲಿ ಹೇಗಿರುತ್ತದೆ ? ಕೆಲವು ವಿಶೇಷಣಗಳ ಮೂಲಕ ಅದರ ಸಾರಾಂಶವನ್ನು ಹೇಳಬಯಸುತ್ತೇನೆ. ಗಿಡಿದು ತುಂಬಿದ, ವಿಪರೀತ ಸೆಕೆಯಲ್ಲಿ, ಕುಳಿತುಕೊಳ್ಳಲು ಹಿತವಾಗಿಲ್ಲದ,

ರೋಮಾಂಚಕವಾದ, ಭಯಗೊಳಿಸುವ, ಶುದ್ಧ ಸತ್ವವಾದ, ಪ್ರಬೋಧಕವಾದ, ವ್ಯಾಪಕ, ಆನಂದದಾಯಕ, ಪರಿಣಾಮಕಾರಕ, ಭಾವ ವಿರೇಚಕ, ಪುನಶ್ಚೇತಕ, ಪರಿವರ್ತಕ, ಸುಂದರ... ಐತಿಹಾಸಿಕವಾಗಿ ಐದು ಸಾವಿರ ವರ್ಷಗಳ ಹಿಂದೆ ಅರ್ಜುನನಿಗೆ ಯಾರು ಭಗವದ್ಗೀತೆಯನ್ನು ಬೋಧಿಸಿದನೋ ಅದೇ ದೇವನ ಪಾದ ಸನ್ನಿಧಿಯಲ್ಲಿ ನಾವು ಕುಳಿತಿದ್ದೆವು. ಸಾಯಿಬಾಬಾ ಅವರು ವಿದ್ಯಾರ್ಥಿಗಳಿಗೆ ಆಧ್ಯಾತ್ಮಿಕ ಜೀವನದ ನಿಜವಾದ ಅರ್ಥವನ್ನು, ಅದನ್ನು ಬದುಕುವುದು ಹೇಗೆ ಎಂಬುದನ್ನು ವಿವರಿಸುತ್ತಾ ಹೋದಂತೆ ನನ್ನ ಮನಸ್ಸಿನಲ್ಲಿ ಎದ್ದಿದ್ದ ಎಲ್ಲ ಪ್ರಶ್ನೆಗಳಿಗೂ ಸಂಪೂರ್ಣವಾಗಿ ಉತ್ತರ ದೊರಕಿತು."

ಕರೆನ್ ಎಫ್ ಬ್ಲಾಂಕ್ ಬಾಬಾ ಅವರ ಸಂದೇಶವನ್ನು ಹೀಗೆ ಸಂಗ್ರಹಿಸುತ್ತಾರೆ. "ಇಡೀ ಜೀವನವೇ ಒಂದು ಧ್ಯಾನ. ಸಾಂಪ್ರದಾಯಿಕವಾದ ಪ್ರಾರ್ಥನೆಯಾಗಲಿ, ನೀವು ಧ್ಯಾನ ಎಂದು ಭಾವಿಸುವುದಾಗಲಿ ದಾರಿಗಳೇ ಹೊರತು ಗುರಿಗಳಲ್ಲ. ಅವು ಬಹಳ ಒಳ್ಳೆಯ ಸಾಧನೆಗಳು, ಮನಸ್ಸನ್ನು ಕೇಂದ್ರೀಕರಿಸುವುದಕ್ಕೆ ಸಹಕಾರಿಯಾದಂಥವು. ಆದರೆ ಈ ಆಧ್ಯಾತ್ಮಿಕ ಅಭ್ಯಾಸಗಳು, ಮತ್ತು ಆಚರಣೆಗಳ ಜೊತೆ ಜೊತೆಗೆ ವೈಯಕ್ತಿಕ ಹಾಗೂ ಸಾಮೂಹಿಕ ಪ್ರವೃತ್ತಿಗಳ ಪರೀಕ್ಷೆಯಿರಬೇಕು. ಎಲ್ಲಾ ಧರ್ಮಗಳ ಬಗೆಗೆ ಪ್ರೇಮವನ್ನೂ ಗೌರವವನ್ನೂ ಬೆಳೆಸಿಕೊಳ್ಳಿರಿ. ನಿಮ್ಮ ನಿಮ್ಮ ಮನೆಗೆ ಹಿಂದಿರುಗಿ, ಎಲ್ಲೇ ಇದ್ದರೂ ಶ್ರದ್ಧೆಯಿಂದ, ಉತ್ಸಾಹದಿಂದ, ಆತ್ಮವಿಶ್ವಾಸದಿಂದ ಭಗವತ್ಕಾರ್ಯವನ್ನು ಮಾಡುತ್ತಾ ಹೋಗಿರಿ. ಬದುಕು ಹೊರೆಯೆನಿಸಿದಾಗ ಈ ಸಂಜೆಗಳನ್ನೂ ನನ್ನನ್ನೂ ನೆನೆಯಿರಿ, ನನ್ನ ಹೆಸರನ್ನು ಕರೆಯಿರಿ, ನಿಮ್ಮ ಕರೆಗೆ ಖಂಡಿತವಾಗಿಯೂ ನಾನು ಓಗೊಡುತ್ತೇನೆ ಎಂದು ಭರವಸೆ ಕೊಡುತ್ತೇನೆ. ನೀವು ಮತ್ತೆ ಎಂದೆಂದೂ ಒಂಟಿಯಾಗಿರುವುದಿಲ್ಲ."

ಒಂದು ಸಂಜೆ ನಡೆದ ಒಂದು ಪವಾಡವನ್ನು ಕರೆನ್ ವರ್ಣಿಸುತ್ತಾರೆ. ಬಾಬಾ ಅವರ ಸನ್ನಿಧಿಯಲ್ಲಿರುವಾಗ ಶಿಬಿರಾರ್ಥಿಗಳು ಪದೇ ಪದೇ ಬಾಬಾ ಅವರ ಪವಾಡಗಳನ್ನು ನೋಡಿ ರೋಮಾಂಚಿತರಾಗಿದ್ದರು. ಇದಾದರೋ ಬಹುದೊಡ್ಡ ಪವಾಡ, ನಿಜವಾಗಿ ಪ್ರಥಮ ಶ್ರೇಣಿಯದು ಎಂದು ಕರೆನ್ ಹೇಳಿದರು. ಜಗತ್ ಪ್ರಸಿದ್ಧ ಜಾಸ್ ಕಲಾವಿದ ಮೇನಾರ್ಡ್ ಫರ್ಗ್ಯುಸನ್ ಒಂದು ರಾತ್ರಿ ಕಾಲೇಜಿನ ಸಭಾಂಗಣದಲ್ಲಿ ನಮಗಾಗಿ ಒಂದು ಕಾರ್ಯಕ್ರಮ ನೀಡಿದರು. ಬಾಬಾ ಅವರು ವೇದಿಕೆಯ ಮಧ್ಯೆ ಕುಳಿತಿದ್ದರು. ಮೇನಾರ್ಡ್ ಫರ್ಗ್ಯುಸನ್ ಅವರ ಬಲಗಡೆಗೆ ನಿಂತಿದ್ದರು. ಭಾರತದ ಶಾಸ್ತ್ರೀಯ ಸಂಗೀತವನ್ನು ಜಾಸ್‌ಗೆ ಅಳವಡಿಸಿ ನುಡಿಸಿದರು. ಬಾಬಾ ಮಿದುವಾಗಿ ತಾಳ ಹಾಕುತ್ತಿದ್ದರು. ಅದಾದ ನಂತರ ಫರ್ಗ್ಯುಸನ್ ಪೂರ್ತಿ ಮನಸ್ಸಿಟ್ಟು ಟ್ರಂಪೆಟ್ ನುಡಿಸಿದರು. ಬಾಬಾ ಎದ್ದು ನಿಂತರು. ಬಲಗೈಯನ್ನು ಎಡದಿಂದ ಬಲಕ್ಕೆ ವರ್ತುಲಾಕಾರವಾಗಿ ಆಡಿಸಿದರು. ಓಹ್ ! ಎಲ್ಲರೆದುರಿಗೆ ಗಾಳಿಯಿಂದಲೇ ಬಾಬಾ ಒಂದು ಚಿನ್ನದ ಪದಕವನ್ನು ತೆಗೆದರು. ಅದಕ್ಕೆ ಸರಪಣಿಯೂ ಇತ್ತು. ಅದನ್ನು ಅವರು ಫರ್ಗ್ಯುಸನ್ ಅವರ ಕೊರಳಿಗೆ ತೊಡಿಸಿದರು. ತಮ್ಮೆದುರಿಗೆ ನಡೆದ ಈ ಘಟನೆಯನ್ನು ಕಂಡು ಜನ ನಿಬ್ಬೆರಗಾದರು. ಫರ್ಗ್ಯುಸನ್ ಮಗುವಿನ ಹಾಗೆ ಅತ್ತುಬಿಟ್ಟರು. ನಮ್ಮ ಕಣ್ಣುಗಳಲ್ಲಿ ನೀರು ತುಂಬಿತು, ಕೊರಳು ಉಬ್ಬಿತ್ತು.

"ಅದು ಅಷ್ಟೊಂದು ಸುಂದರವಾಗಿದ್ದುದೇಕೆ ? ಏಕೆಂದರೆ ಆ ಕ್ಷಣದಲ್ಲಿ ಬಹಳ ಹಿಂದೆ ಮಕ್ಕಳಾಗಿದ್ದಾಗ ಪ್ರಶ್ನೆ ಮಾಡದೆ ಯಾವುದನ್ನು ನಾವು ತಿಳಿದುಕೊಂಡಿದ್ದೆವೋ ಮತ್ತೆ ಆಗಿನಿಂದ ಮರೆತು ಬಿಟ್ಟಿದ್ದೆವೋ ಅದನ್ನು ಈಗ ನೋಡಿದ್ದೆವು. ನಮ್ಮ ವ್ಯಕ್ತಿತ್ವದ ಸಾರಭೂತವಾದ ಒಂದು ಭಾಗವಿದೆ ಅದು ದೇವರನ್ನು ನಂಬಲು ಇಚ್ಛಿಸುತ್ತದೆ. ಕೆಡುಕಿನ ಮೇಲೆ ಒಳಿತು ವಿಜಯ ಸಾಧಿಸುವುದನ್ನು ನಂಬುತ್ತದೆ, ಯೇಸುವು ನಿಜವಾಗಿಯೂ ನೀರಿನ ಮೇಲೆ ನಡೆದನು, ಮೋಸೆಸ್ ಕೆಂಪು ಸಮುದ್ರವನ್ನು ಎರಡು ಭಾಗವಾಗಿ ಮಾಡಿ ದಾರಿಬಿಡಿಸಿದ್ದನು... ಎಂದೆಲ್ಲ ನಾವು ನಂಬಲು ಬಯಸುತ್ತೇವೆ. ಬಾಯಲ್ಲಿ ಏನೇ ಹೇಳಲಿ, ಒಳ್ಳೆಯವರ ಜೊತೆಗೆ ಇರಲು ಬಯಸುತ್ತೇವೆ. ನಾವೇ ಒಳ್ಳೆಯವರಾಗಿರಲು ಇಷ್ಟಪಡುತ್ತೇವೆ. ಆದ್ದರಿಂದಲೇ ನಮಗೆ ಅಳು ಬಂದದ್ದು, ಆದ್ದರಿಂದಲೇ ಅದು ಅಷ್ಟೊಂದು ಸುಂದರವಾಗಿದ್ದದ್ದು. ... ಪದಕ ಮಂತ್ರವಾದಿಯ ಕೈಚಳಕವಾಗಿರಲಿಲ್ಲ. ಅದು ನಮ್ಮೆಲ್ಲರೆದುರಿಗೆ ಸೃಷ್ಟಿಸಿದ್ದು. ಅನುಮಾನವೇ ಇಲ್ಲದೆ ನಾವು ತಿಳಿದುಕೊಳ್ಳಬೇಕೆಂದು ಮಾಡಿದ್ದು."

ಬೇಸಿಗೆ ಶಿಬಿರ ಮುಗಿದೊಡನೆ ಬಾಬಾ ಪ್ರಶಾಂತಿ ನಿಲಯಕ್ಕೆ ಹಿಂದಿರುಗಿದರು. ಬೇರೆ ಬೇರೆ ಕಾಲೇಜುಗಳಿಂದ ಬಂದಿದ್ದ ನೂರಾರು ಜನ ವಿದ್ಯಾರ್ಥಿಗಳು ಅವರ ಸನ್ನಿಧಿಯಲ್ಲಿ ಪ್ರಶಾಂತಿ ನಿಲಯದಲ್ಲಿ ಇನ್ನೂ ಕೆಲವು ದಿನ ಇರಬೇಕೆಂದು ಬಯಸಿದುದರಿಂದ ಅವರನ್ನು ಕರೆದುಕೊಂಡು ಬಂದರು. ಜುಲೈ 1ನೆಯ ತಾರೀಕು ಅಲ್ಲಿ ಸತ್ಯಸಾಯಿ ಕಾಲೇಜು ಕಟ್ಟಡವನ್ನು ಉದ್ಘಾಟಿಸಿದರು. ಮೊದಲನೆಯ ವರ್ಷದ ತರಗತಿಗಳು ಈಶ್ವರಮ್ಮ ಪ್ರೌಢಶಾಲೆಯ ಕಟ್ಟಡದಲ್ಲೇ ನಡೆದಿದ್ದುವು.

## ಮೊಗ್ಗು ಅರಳುವುದು

ಮಾನವ ಜನಾಂಗವನ್ನು ಮತ್ತೆ ಮಾನವತ್ವದ ನೆಲೆಗೆ ನಿಲ್ಲಿಸಿ ಅಲ್ಲಿಂದ ದೈವತ್ವಕ್ಕೆ ಏರಿಸುವ ಅವತಾರೋದ್ದೇಶವನ್ನು ಭಗವಾನರು ಶಿಕ್ಷಣದ ಪುನರ್ನವೀಕರಣದ ಮೂಲಕ ಸಾಧಿಸುತ್ತಿದ್ದಾರೆ. ರಾಜ್ಯ ಸರಕಾರವು ಸಾಂಸ್ಥಿಕವಾಗಿ ನಡೆಸುವ ಜಾತ್ಯತೀಯ ಸಾಂಪ್ರದಾಯಿಕ ಶಿಕ್ಷಣಕ್ಕೆ ಪೂರಕವಾಗಿ ವಿಶ್ವಾದ್ಯಂತ ಹರಡಿಕೊಂಡಿರುವ ಒಂದು ಮಹತ್ ಯೋಜನೆಯನ್ನು ಬಾಬಾ ಅನುಗ್ರಹಿಸಿದ್ದಾರೆ. ಅದೇ ಬಾಲವಿಕಾಸ. ಮಗುವು ಅರಳುವುದು ಎಂದು ಅದರರ್ಥ. ಅಭಿವೃದ್ಧಿ ರಾಷ್ಟ್ರಗಳಲ್ಲಿ, ಅವುಗಳ ಸಂಪರ್ಕದಿಂದಾಗಿ ಅಭಿವೃದ್ಧಿಶೀಲ ದೇಶಗಳಲ್ಲಿ ಕೂಡ ಮಕ್ಕಳು ಯಂತ್ರಯುಗದ ಕೆಡುಕುಗಳಿಗೆ, ಇಸಂಗಳ ಸಂಘರ್ಷಕ್ಕೆ, ಜನಾಂಗ ಘರ್ಷಣೆಗೆ, ಯುದ್ಧದ ಗೀಳಿಗೆ, ಹಿಂಸೆಯ ಮೇಲಾಟಕ್ಕೆ ಇಂದ್ರಿಯ ಸುಖಗಳ ಅತ್ಯಾಸಕ್ತಿಗೆ ಬಲಿಯಾಗಿದ್ದಾರೆ, ನೈತಿಕತೆಯನ್ನು ತಳ್ಳಿಹಾಕಿದ್ದಾರೆ. ಬಾಲವಿಕಾಸವು ಮಗುವನ್ನು ಯುಗಾಂತರಗಳಿಂದ ಬಂದ ನಮ್ಮ ಸಂಸ್ಕೃತಿಯ ನೆಲೆಗೆ ಹಿಂದಕ್ಕೆ ಕರೆತರುತ್ತದೆ, ಅದು ಬಲವಾಗಿಯೂ ನೇರವಾಗಿಯೂ ಬೆಳೆಯುವಂತೆ ಮಾಡುತ್ತದೆ. ತಂದೆ ತಾಯಿಯರನ್ನು ಕುರಿತು, ಹಿರಿಯರು ಮತ್ತು ಗುರುಗಳನ್ನು ಕುರಿತು ಭಕ್ತಿ ಗೌರವಗಳನ್ನು ಮಗುವಿನ ಮನಸ್ಸಿನಲ್ಲಿ ನಾಟಿ ಬೆಳೆಸುತ್ತದೆ. ಆತ್ಮಜ್ಞಾನ, ಆತ್ಮಗೌರವ ಮತ್ತು ಆತ್ಮಸಂಯಮಗಳನ್ನು ಪ್ರೋತ್ಸಾಹಿಸಿ ದೈವ ಪ್ರೀತಿಯ ಹಿತವಾದ ಬಿಸುಪಿನಲ್ಲಿ ಮಗುವು ನೆಮ್ಮದಿಯಾಗಿರುವಂತೆ ಮಾಡುತ್ತದೆ. ಶಿಕ್ಷಕರನ್ನು ಬಾಬಾ 'ಗುರು' ಎಂಬ ಪದದಿಂದ ಅನುಗ್ರಹಿಸಿದ್ದಾರೆ. ಈ ಗುರುಗಳ ಜಾಗರೂಕತೆಯ ತೆಕ್ಕೆಯಲ್ಲಿ ಮಕ್ಕಳು ಬೆಳೆಯುತ್ತಾರೆ. ಈ

ಪದವಿಯಿಂದ ಅಲಂಕೃತನಾದ ಶಿಕ್ಷಕನು ಶಿವನಂತೆ, ಎಳೆಯವಯಸ್ಸಿನಿಂದ ದುಷ್ಟತನದ ಕಳೆಯನ್ನು ತೆಗೆದು ನಾಶಪಡಿಸುತ್ತಾನೆ ; ಬ್ರಹ್ಮನಂತೆ ಧೈರ್ಯ ಮತ್ತು ಸಹಾನುಭೂತಿಗಳ ಬೀಜವನ್ನು ಬಿತ್ತುತ್ತಾನೆ ; ವಿಷ್ಣುವಿನಂತೆ ಸಚ್ಚಿಂತನೆ, ಸತ್ ಸಂಭಾಷಣೆ ಮತ್ತು ಸತ್ಕಾರ್ಯಗಳನ್ನು ಪೋಷಿಸುತ್ತಾನೆ. ಈ ಮೂಲಕ ಶಿಕ್ಷಕನ ವೃತ್ತಿಯನ್ನು ತ್ರಿಮೂರ್ತಿಗಳ ಪವಿತ್ರ ಕರ್ತವ್ಯದ ಮಟ್ಟಕ್ಕೆ ಏರಿಸುತ್ತಾನೆ. ಬಾಬಾ ಅವರು ವಿದ್ಯಾವಿಹಾರ ಎಂಬ ಹೆಸರಿನ ಶಾಲೆಗಳನ್ನು ರೂಪಿಸಿದ್ದಾರೆ. ಆ ವಸತಿ ಶಾಲೆಗಳಿಗೆ ಮಕ್ಕಳನ್ನು ಸೇರಿಸಿಕೊಂಡು ಉತ್ತಮ ಗುಣಮಟ್ಟದಿಂದ ಬೆಳೆಸಲಾಗುತ್ತದೆ. ಮಕ್ಕಳು ಹದಿಹರಯಕ್ಕೆ ಕಾಲಿಟ್ಟಾಗ ಆಧ್ಯಾತ್ಮಿಕ ವಿಚಾರಗಳ ಪ್ರಾಥಮಿಕ ಪುಸ್ತಕಗಳನ್ನು ಕಲಿಸಲಾಗುತ್ತದೆ. ಜೊತೆಗೆ ಯೋಗ, ಸಮಾಜ ಸೇವೆ, ಗಾನ ಮೇಳ, ಧ್ಯಾನ ಮೊದಲಾದವುಗಳ ತರಬೇತಿ ನೀಡಲಾಗುತ್ತದೆ. ಈ ತರಗತಿಗಳನ್ನು 'ಸೇವಾದಳಪೂರ್ವ' ತರಗತಿಗಳೆನ್ನಲಾಗುತ್ತದೆ. ಬೇರೆ ಬೇರೆ ಸ್ಥಳಗಳಲ್ಲಿ ಬಾಬಾ ಸ್ಥಾಪಿಸಿರುವ ಪ್ರೌಢಶಾಲೆಗಳು ಶೀಲವರ್ಧನೆಗೆ ವಿಶೇಷ ಗಮನ ಕೊಡುತ್ತವೆ, ಸಾಧನೆ ಮತ್ತು ಸಮಾಜಸೇವಾ ಕಾರ್ಯಕ್ರಮಗಳನ್ನು ಮುಖ್ಯವಾಗಿಟ್ಟುಕೊಳ್ಳುತ್ತವೆ. ಆಮೇಲೆ ಕಾಲೇಜುಗಳು, ವಿದ್ಯಾರ್ಥಿಗಳು ಹದಿಹರೆಯ ಹಾಗೂ ತಾರುಣ್ಯದ ವರ್ಷಗಳನ್ನು ಅಲ್ಲಿ ಭಗವಾನರ ನೇರ ನಿರ್ದೇಶನದಲ್ಲಿ, ಅವರ ಕೃಪಾಶೀರ್ವಾದದ ತೆಕ್ಕೆಯಲ್ಲಿ ಅತ್ಯಂತ ಫಲಪ್ರದವಾಗಿ ಕಳೆಯುತ್ತಾರೆ. "ವಿದ್ಯಾರ್ಥಿಗಳೇ ನನ್ನ ಆಸ್ತಿ ನನ್ನ ಆನಂದದ ಮೂಲ, ಅವರ ಮೂಲಕವೇ ನಾನಿರುವುದು" ಎನ್ನುತ್ತಾರೆ ಬಾಬಾ.

## ಅವರ ಸಾಮ್ರಾಜ್ಯ

1979ರ ದಸರಾ ಉತ್ಸವದಲ್ಲಿ ಪುಟ್ಟಪರ್ತಿಯ ಶ್ರೀ ಸತ್ಯಸಾಯಿ ಕಾಲೇಜಿನ, ವಿವಿಧ ಧರ್ಮಗಳಿಗೆ ಸೇರಿದ ವಿದ್ಯಾರ್ಥಿಗಳು, ಸಾಂಪ್ರದಾಯಿಕ ಉಡುಗೆ ತೊಡುಗೆ ಧರಿಸಿ ಪ್ರತಿಯೊಂದೂ ಧರ್ಮದ ಮುಖ್ಯತತ್ವಗಳನ್ನು ವಿವರಿಸಿ ಅಗಾಧ ಜನಸ್ತೋಮಕ್ಕೆ ಮುದ ನೀಡಿದರು. ನವದೆಹಲಿಯಿಂದ ಬಂದಿದ್ದ ಒಬ್ಬ ಸಿಖ್, ಮುಂಬಯಿಯ ಒಬ್ಬ ಜೋರಾಸ್ಟ್ರಿಯನ್, ಹವಾಯಿಯಿಂದ ಬಂದ ಒಬ್ಬ ಕ್ರಿಶ್ಚಿಯನ್, ಲಿಬ್ಯದಿಂದ ಒಬ್ಬ ಮುಸ್ಲಿಂ, ಸಿಕ್ಕಿಂನ ಒಬ್ಬ ಬೌದ್ಧ, ಕಾಬೂಲಿನ ಒಬ್ಬ ಹಿಂದೂ ಇವರೆಲ್ಲ ಭಾಗವಹಿಸಿದ್ದ ವಿದ್ಯಾರ್ಥಿಗಳು. ಕಾರ್ಯಕ್ರಮದ ಮುಕ್ತಾಯದಲ್ಲಿ ವೇದಿಕೆ ಮೇಲೆ ಅವರೆಲ್ಲರ ನಡುವೆ ಬಾಬಾ ನಿಂತಾಗ, ಸಕಲಧರ್ಮಗಳ ಸಾರವಾದ, ಎಲ್ಲ ಸಾಧನೆಗಳ ಗುರಿಯಾದ ಸಾಯಿ ಜನತೆಗೆ ಈ ರೀತಿಯಲ್ಲಿ ಸರ್ವಧರ್ಮ ಐಕ್ಯವನ್ನು ಬೋಧಿಸಿದದಲ್ಲ ಎಂದು ಸಂತೋಷಾಶ್ಚರ್ಯಗಳಾದುವು. ಸಾಯಿ ಕಾಲೇಜುಗಳ ವಿದ್ಯಾರ್ಥಿಗಳು ಸುಸಂಘಟಿತ ಶ್ರಮದಾನ ಮಾಡುವ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ. ಅವರು ವಾದ್ಯಮೇಳಗಳನ್ನು ರೂಪಿಸಿದ್ದಾರೆ. ಶ್ರೀ ರಾಮಕೃಷ್ಣ, ಶಂಕರಾಚಾರ್ಯ ಮತ್ತು ಜೀಸಸ್‌ರನ್ನು ಕುರಿತ ನಾಟಕಗಳನ್ನು ಅಭಿನಯಿಸಿದ್ದಾರೆ. ರಾಮಾಯಣ ಮತ್ತು ಸಾಯಿ ಕಥೆಗಳನ್ನು ಸಂಗೀತಕ್ಕೆ ಅಳವಡಿಸಿ ಪ್ರದರ್ಶಿಸಿದ್ದಾರೆ. ಭಗವಂತ ದೃಷ್ಟಿಗೆ ಅಗೋಚರನು. ಆದರೆ ಅವನೆ ಈ ವಿದ್ಯಾರ್ಥಿಗಳ ಸಾಧನೆಗಳಿಗೆ ಗೋಚರ ಮೂಲನಾಗಿದ್ದಾನೆ. ಬೃಂದಾವನದ ಶ್ರೀ ಸತ್ಯಸಾಯಿ ಕಾಲೇಜಿನ ಹಳೆಯ ವಿದ್ಯಾರ್ಥಿಗಳ ಸಂಘದ ಮೊದಲನೆಯ ವಾರ್ಷಿಕೋತ್ಸವವನ್ನು ಉದ್ಘಾಟಿಸುತ್ತಾ ಬಾಬಾ ಬೃಂದಾವನದ ಸುತ್ತುಮುತ್ತು ಇರುವ ಹಳ್ಳಿಗಳ ಜನರ ತುರ್ತು ಅಗತ್ಯವನ್ನು ಚೆನ್ನಾಗಿ ಅಧ್ಯಯನ

ಮಾಡಿ ಅವರ ಸೇವೆಗಾಗಿ ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳನ್ನು ವಿನಿಯೋಗಿಸಬೇಕು ಎಂದು ಕರೆ ಕೊಟ್ಟರು. "ಹಳ್ಳಿಗಳೆಂಬ ರಂಗಕ್ಕೆ ವಿದ್ಯಾರ್ಥಿಗಳು ಹುಲಿಯ ಮರಿಗಳ ಹಾಗೆ ನೆಗೆದು ಅಲ್ಲಿಯ ಮಾಲಿನ್ಯವೆಲ್ಲ ತೊಳೆದು ಹಾಕಬೇಕು. ಹಳ್ಳಿಯ ನಿರಕ್ಷರರಾದ ನಿವಾಸಿಗಳಿಗೆ ಸಂತೋಷವಾಗಿ ಮತ್ತು ಗೌರವಯುತವಾಗಿ ಬದುಕುವುದು ಹೇಗೆ ಎಂದು ಕಲಿಸಿಕೊಡಬೇಕು. ಹಳ್ಳಿಗರ ಜೊತೆ ಜೊತೆಗೇ ಶ್ರಮಿಸಿ ಅವರನ್ನು ಮುಂದು ಮುಂದಕ್ಕೊಯ್ಯಬೇಕು." ಅದೇ ಸಂದರ್ಭದಲ್ಲಿ ಬಾಬಾ ಈ ಮಾತನ್ನೂ ಹೇಳಿದರು : "ನನ್ನ ಸಂದೇಶವನ್ನು ನಿರಂತರವಾಗಿ ಅಭ್ಯಾಸಮಾಡುವುದರಿಂದ ಇಂತಹ ಶಕ್ತಿ ಮತ್ತು ಸಮಚಿತ್ತತೆ ಬರುತ್ತದೆ ಎನ್ನುವುದಕ್ಕೆ ಮಾದರಿಯಾಗುವಂತೆ ಈ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಿದ್ದೇನೆ. ಅವರು ಈ ಸಂದೇಶವನ್ನು ಆಡಬೇಕು, ಹಾಡಬೇಕು, ಪಠಿಸಬೇಕು, ಅಭಿನಯಿಸಬೇಕು, ಗ್ರಾಮಸ್ಥರ ಹೃದಯಗಳಲ್ಲಿ ಅದು ಬೇರು ಬಿಟ್ಟು ನಿಲ್ಲಬೇಕು. ನಾನು ಏನನ್ನೇ ಮಾಡಲಿ ಅಥವಾ ಮಾಡಿಸಲಿ, ಆಡಲಿ ಅಥವಾ ಆಡಿಸಲಿ, ಅದು ಮಾನವನ ಆತ್ಮ ಸತ್ಯ ಎಂಬ ಈ ಸಂದೇಶವನ್ನು ಒತ್ತಿ ಹೇಳುವುದಕ್ಕಾಗಿ ಸ್ಪಷ್ಟಪಡಿಸುವುದಕ್ಕಾಗಿ ಅಥವಾ ಅದಕ್ಕೆ ನಿದರ್ಶನವಾಗುವ ಸಲುವಾಗಿ."

ಭಗವಾನರ ಸಂದೇಶದಿಂದಲೂ ಅದರ ಸಾಕ್ಷಾತ್ಕಾರಕ್ಕಾಗಿ ಅವರು ಹಾಕಿಕೊಟ್ಟಿರುವ ಯೋಜನೆಗಳಿಂದಲೂ ಪ್ರೇರಿತರಾಗಿ ಅನೇಕಾನೇಕ ಜನ ಶಿಕ್ಷಣ ತಜ್ಞರು, ಆಡಳಿತಗಾರರು, ವಿಜ್ಞಾನಿಗಳು, ಸಮೂಹ ಮಾಧ್ಯಮ ಪರಿಣತರು, ಮಾನವಶಾಸ್ತ್ರಜ್ಞರು ಅವರು ಸ್ಥಾಪಿಸಿರುವ ಕಾಲೇಜುಗಳಿಗೆ ಬಂದರು. ಆಧ್ಯಾತ್ಮಿಕ ಮತ್ತು ನೈತಿಕ ವಿಚಾರಗಳನ್ನು ಕುರಿತ ವಿಚಾರ ಸಂಕಿರಣಗಳು ಬೃಂದಾವನ ಕಾಲೇಜಿನಲ್ಲಿ ನಡೆದುವು. ಬೇಸಿಗೆ ಶಿಬಿರಗಳು ದೇಶದ ಎಲ್ಲಾ ಕಡೆಗಳಿಂದ ಪ್ರಾಧ್ಯಾಪಕರನ್ನು ಒಂದೆಡೆ ತಂದು ಸೇರಿಸಿದುವು. ಸಿಂಗಾಪುರ, ಫಿಲಿಪೀನ್ಸ್, ಫಿಜಿ, ಇಟಲಿ, ಜಪಾನ್, ಯು.ಕೆ. ಮತ್ತು ಅಮೆರಿಕಾಗಳಿಂದಲೂ ಪ್ರಾಧ್ಯಾಪಕರು ಬಂದರು. ಬಾಬಾ ಕುಲಪತಿಗಳೊಂದಿಗೆ, ಮುಖ್ಯೋಪಧ್ಯಾಯರು, ಪ್ರಾಧ್ಯಾಪಕರು, ವಿಜ್ಞಾನಿಗಳು, ತಂತ್ರಜ್ಞರು ಮುಂತಾದವರೊಂದಿಗೆ ಸಂಭಾಷಣೆ ನಡೆಸಿದರು. ವಿಶ್ವಾದ್ಯಂತ ಹರಡಿಕೊಂಡಿರುವ ರೋಗದ ಮೂಲ ಕಾರಣಗಳಾವುವು, ಅತ್ಯಂತ ತುರ್ತಾಗಿ ಕೈಗೊಳ್ಳಬೇಕಾದ ಪರಿಹಾರ ಕ್ರಮಗಳಾವುವು ಎಂಬುದನ್ನು ಅವರಿಗೆ ಮನವರಿಕೆ ಮಾಡಿಕೊಟ್ಟರು. ಈ ಸಂಭಾಷಣೆಗಳ ಪ್ರಭಾವದ ಫಲವಾಗಿ ಬೆಂಗಳೂರಿನಲ್ಲಿ ಸತ್ಯಸಾಯಿ ಸ್ಟಡಿ ಸರ್ಕಲ್ ಪ್ರಾರಂಭವಾಯಿತು. ಶಿಕ್ಷಣ ವ್ಯವಸ್ಥೆಯಲ್ಲಿರುವ ದೋಷಗಳನ್ನು ಬೆದಕಿ ನೋಡಿ, ಸಾಯಿ ನಿರ್ದೇಶಕ ತತ್ವಗಳ ಆಧಾರದಿಂದ ಶಿಕ್ಷಣದ ಪುನರ್ ನಿರ್ಮಾಣ ಮತ್ತು ಸುಧಾರಣೆಗಳನ್ನು ಕೈಗೊಳ್ಳುವುದು ಇದರ ಉದ್ದೇಶವಾಗಿತ್ತು. ಸ್ವಾಮಿ ಆ ತಂಡಕ್ಕೆ ಭರವಸೆ ಕೊಟ್ಟರು : "ನಾನು ಸದಾ ನಿಮ್ಮೊಂದಿಗೆ ಇದ್ದು ನಿಮ್ಮ ಸ್ಟಡಿ ಸರ್ಕಲಿನ ಚಟುವಟಿಕೆಗಳಿಗೆ ಮಾರ್ಗದರ್ಶನ ನೀಡುತ್ತೇನೆ." ನಿಜ, ಅವತಾರ ಪುರುಷನಿಗೆ ವಿಶ್ರಾಂತಿಯೆಂಬುದೇ ಇಲ್ಲ. ಭಗವಾನರೇ ಹೇಳುವಂತೆ, "ನನಗೆ ವಿಶ್ರಾಂತಿ ಅಗತ್ಯವಾಗಿದ್ದರೆ ಅವತರಿಸುತ್ತಲೇ ಇರಲಿಲ್ಲ."

1979ರ ಹುಟ್ಟುಹಬ್ಬದ ವಾರದಲ್ಲಿ ಎರಡುಸಾವಿರ ಜನ ಬಾಲವಿಕಾಸ ಗುರುಗಳು ಪ್ರಶಾಂತಿ ನಿಲಯದಲ್ಲಿ ಸಮ್ಮೇಳನಕ್ಕಾಗಿ ನೆರೆದರು. ಭಗವಾನರು ಅವರನ್ನು ಆಶೀರ್ವದಿಸಿ, ಅವರು ಎದುರಿಸಬೇಕಾಗಿರುವ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದರು. ಯಾವಾಗ ಬೆಳಕು ಬೇಕೆಂದು ಪ್ರಾರ್ಥಿಸುವರೋ ಆಗ ತಪ್ಪದೆ ಸಮಸ್ಯೆಗಳನ್ನು ಪರಿಹರಿಸುವುದಾಗಿ ಭರವಸೆ ನೀಡಿದರು. ನವೆಂಬರ್

22ರಂದು ವಿದ್ಯಾರ್ಥಿಗಳು 'ಜೀಸಸ್' ಎಂಬ ನಾಟಕವನ್ನು ಅಭಿನಯಿಸಿದರು. ಉಡುಗೆ, ತೊಡುಗೆ, ಪ್ರಸಾಧನ, ರಂಗಾಲಂಕಾರ, ಅಭಿನಯ ಇವೆಲ್ಲ ಎಷ್ಟು ಉತ್ಕೃಷ್ಟವಾಗಿದ್ದುವೆಂದರೆ ಇಪ್ಪತ್ತೈದು ಸಾವಿರಕ್ಕೂ ಹೆಚ್ಚಾಗಿದ್ದ ಪ್ರೇಕ್ಷಕ ವರ್ಗ ಹಲವಾರು ನಿಮಿಷಗಳ ಕಾಲ ಕೈಚಪ್ಪಾಳೆ ತಟ್ಟಿ ತಮ್ಮ ಸಂತೋಷ ವ್ಯಕ್ತಪಡಿಸಿದರು. ಕ್ರಿಸ್ತನ ಪಾತ್ರಧಾರಿಯು ತನ್ನ ದನಿ, ಹಾವಭಾವ, ಪ್ರತಿಕ್ರಿಯೆ ಮೊದಲಾದುವುಗಳಲ್ಲಿ ಕರಾರುವಕ್ಕಾಗಿ ದೇವಪುತ್ರನನ್ನೇ ಪ್ರೇಕ್ಷಕರೆದುರಿಗೆ ತಂದು ನಿಲ್ಲಿಸಿದ್ದನು.

## ಸ್ಥಳದಲ್ಲಿ ಶಿವ

ಪುಟ್ಟಪರ್ತಿಯಲ್ಲಿ ಭಗವಾನರು ಸತ್ಯನಾರಾಯಣನಾಗಿ ಅವತರಿಸಿದ ಮನೆಯನ್ನು, ತಂದೆತಾಯಿಗಳಾದ ಪೆದ್ದ ವೆಂಕಪ್ಪ ರಾಜು ಮತ್ತು ಈಶ್ವರಮ್ಮ ಅವರ ಮನೆಯನ್ನು ನೋಡಲೆಂದು ಹೋದ ಭಕ್ತರಿಗೆ ಅನೇಕ ವರ್ಷಗಳ ಕಾಲ ಒಂದು ಇಕ್ಕಟ್ಟಾದ ಓಣಿಯ ತುದಿಯಲ್ಲಿದ್ದ ಒಂದು ಖಾಲಿ ಜಾಗವನ್ನು ತೋರಿಸುತ್ತಿದ್ದರು. ಆ ಸ್ಥಾನದಲ್ಲಿ ಯಾವುದೇ ಒಂದು ಪವಿತ್ರ ಸ್ಮಾರಕವನ್ನು ನಿರ್ಮಿಸಲಿಲ್ಲವಲ್ಲ ಎಂದು ಭಕ್ತರು ಕೊರಗುತ್ತಿದ್ದರು. ಮಾನವ ಇತಿಹಾಸದಲ್ಲೇ ಅತ್ಯಂತ ಶ್ರೇಷ್ಠ ಅವತಾರ ಪುರುಷನು ಹುಟ್ಟಿದ, ಶೈಶವ, ಬಾಲ್ಯಗಳನ್ನು ಕಳೆದ ಆ ಹಳ್ಳಿಯ ಹೊರವಲಯದಲ್ಲಿ ಪ್ರಶಾಂತಿ ಮಂದಿರ, ಗಣೇಶನ ಗುಡಿ ಮೇಲೆದ್ದ ಬಳಿಕವೂ ಜನ್ಮಸ್ಥಾನದಲ್ಲಿ ಯಾವುದೇ ನಿರ್ಮಾಣವಾಗಿರಲಿಲ್ಲ. ಅವರು ಒಟ್ಟಾಗಿ ಭಗವಾನರಲ್ಲಿ ಮೊರೆಯಿಟ್ಟರು. ಅಲ್ಲಿ ತುಂಬ ಸರಳವಾದ ಆದರೆ ಮೋಹಕವಾದ ಒಂದು ದೇವಾಲಯವನ್ನು ಕಟ್ಟಲಾಯಿತು. 1979 ನವೆಂಬರ್ 22ರಂದು ಬಾಬಾ ಅಲ್ಲಿ ಶಿವನ ವಿಗ್ರಹವನ್ನು ಸ್ಥಾಪನೆ ಮಾಡಿ ಲಕ್ಷಾಂತರ ಭಕ್ತರ ಆಸೆಯನ್ನು ಪೂರೈಸಿದರು.

ಹಲವಾರು ಮೂಲಭೂತ ಸೌಲಭ್ಯಗಳ ಕೊರತೆ ಈಗಲೂ ಇರುವ ಕುಗ್ರಾಮ ಪುಟ್ಟಪರ್ತಿಯನ್ನು ಸಾಯಿ ಧರ್ಮ ಚಕ್ರದ ಕೇಂದ್ರ ಬಿಂದುವಾಗಿ ಮಾಡುತ್ತೇನೆಂದು ಅವತಾರ ಪುರುಷನು ಘೋಷಿಸಿದ್ದನಷ್ಟೇ. ಅದಕ್ಕೆ ತಕ್ಕಂತೆ ಮಂದಿರದ ಸುತ್ತ ಮೂರು ಮಹಡಿಯ ನಿವಾಸಗಳು ಮೇಲೆದ್ದುವು, ಬ್ಯಾಂಕು, ಅಂಗಡಿಗಳು, ಬಸ್ ನಿಲ್ದಾಣ ಇವೆಲ್ಲ ಬಂದುವು. ಎರಡೂ ತುದಿಗಳಲ್ಲಿ ಅಲಂಕಾರ ಕಮಾನು ದ್ವಾರಗಳಿಂದ ಶೋಭಿತವಾದ ಬಡಾವಣೆಯೊಂದು ರೂಪುಗೊಂಡಿತು. ಪ್ರಾಥಮಿಕ ಮತ್ತು ಪ್ರೌಢಶಾಲೆಗಳ, ಆರ್ಟ್ಸ್, ಸೈನ್ಸ್, ಕಾಮರ್ಸ್ ಕಾಲೇಜಿನ, ಜೊತೆಗೆ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ವಾಸಮಾಡಲು ಅವಕಾಶವಿರುವ ವಿದ್ಯಾರ್ಥಿನಿಲಯದ ಭವ್ಯ ಕಟ್ಟಡಗಳು ಮೇಲೆದ್ದುವು.

1980ರ ಜೂನ್ ತಿಂಗಳಲ್ಲಿ ಭಗವಾನರು ಜಮ್ಮು ಮತ್ತು ಕಾಶ್ಮೀರ ರಾಜ್ಯಕ್ಕೆ ಭೇಟಿ ನೀಡಿದರು. ಉತ್ತರದ ಕೊಟ್ಟ ಕೊನೆಯ ರಾಜ್ಯ ಅದು. ಶತಮಾನಗಳಿಂದ ಜನರ ಕಲಾವಂತಿಕೆಗೆ, ಹಲವು ನದಿಗಳ ಉಗಮ ಸ್ಥಾನವಾದ ಪರ್ವತ ಶ್ರೇಣಿಗಳಿಗೆ, ವಿವಿಧ ಸಾಂಸ್ಕೃತಿಕ ಜನಾಂಗಗಳ ಮಧುರ ಮಿಶ್ರಣಕ್ಕೆ ಹೆಸರಾಂತ ರಾಜ್ಯವದು. ಅಲ್ಲಿ ಭಗವಾನರು ಜನರ ನಡುವೆ ಹತ್ತು ದಿನ ಕಳೆದರು. ಯಾರು ಯಾರನ್ನು ಹೆಚ್ಚಾಗಿ ಪ್ರೀತಿಸಿದರು-ಭಗವಾನರೋ, ರಾಜ್ಯದ ಜನರೋ ಎಂದು ತಿಳಿಯಲು ಕಷ್ಟವಾಗಿ ಪರಿಣಮಿಸಿತು.

ಹೀಗೆಯೇ ಪ್ರೇಮವು ಮುಂದೆ ಮುಂದೆ ನಡೆದಿದೆ-ಸದಾ ಹೊಚ್ಚ ಹೊಸತಾಗಿ, ಪೂರ್ಣವಾಗಿ ಅನಿರ್ಬಂಧಿತವಾಗಿ.

# ಕರೆ ಮತ್ತು ಪ್ರತಿಕ್ರಿಯೆ

## ಕೊಟ್ಟಮಾತು

"ನಾನು ಮಾಡಬೇಕಾದ ಕೆಲಸವಿದೆ ; ನನ್ನ ಭಕ್ತರು ನನ್ನನ್ನು ಕರೆಯುತ್ತಿದ್ದಾರೆ." ಹದಿನಾಲ್ಕು ವರ್ಷದ ಬಾಲಕನಾಗಿದ್ದಾಗ ಬಾಬಾ ಹಾಗೆಂದು ಘೋಷಿಸಿದರು.

ಈ ಮಾತುಗಳನ್ನಾಡುತ್ತಲೇ ಅವರು ಶಾಲೆಯಿಂದ, ಮನೆಯಿಂದ ಹೊರನಡೆದರು. ತೋಟದೊಳಗೆ ನಡೆದರು. ಮಾನವ ಜನಾಂಗವನ್ನು ಅಸತ್ಯದಿಂದ ಸತ್ಯದ ಕಡೆಗೆ, ಕತ್ತಲಿನಿಂದ ಬೆಳಕಿನ ಕಡೆಗೆ, ಮೃತ್ಯುವಿನಿಂದ ಅಮೃತತ್ವದ ಕಡೆಗೆ ಒಯ್ಯಲು ಸಿದ್ಧವಾಗಿ ಬಂದಿದ್ದ ಆ ದಿವ್ಯ ಪಾದಗಳನ್ನು ಅರ್ಚಿಸಲು ನೆರೆದಿದ್ದ ಜನಸಮೂಹಕ್ಕೆ ಉಪದೇಶ ನೀಡಿದರು. ಹದಿನಾರನೆಯ ವರ್ಷ ನಡೆಯುತ್ತಿದ್ದಾಗ ಪ್ರಸ್ತುತ ಅವತಾರದಲ್ಲಿ ತಮ್ಮ ಉದ್ದೇಶ ಎಲ್ಲೆಲ್ಲೂ ಇರುವ ಎಲ್ಲ ಜೀವಿಗಳ ಮೇಲೂ ಆನಂದವನ್ನು ವರ್ಷಿಸುವುದೇ ಆಗಿದೆ ಎಂದು ಪ್ರಕಟಿಸಿದರು.

ಆಗ ಪುಟ್ಟಪರ್ತಿಯೆನ್ನುವುದು ಕೆಲವು ಇಟ್ಟಿಗೆಯ ಮನೆಗಳ ಸುತ್ತ ಅಸ್ತವ್ಯಸ್ತವಾಗಿ ಹರಡಿದ್ದ ಹಲವಾರು ಗುಡಿಸಲುಗಳ ರಾಶಿಯಾಗಿತ್ತು. "ಶಿಲಾಯುಗದಿಂದ ಕೇವಲ ಐದು ಮಿನಿಟುಗಳ ದೂರ ಅಷ್ಟೇ", ಷುಲ್‌ಮನ್ ವಿವರಿಸಿದ ಹಾಗೆ. ಈ ಗ್ರಾಮದ ಹೊಲವಲಯದಲ್ಲಿದ್ದ ಕಲ್ಲು ಬಂಡೆಗಳು ತುಂಬಿದ ಗುಡ್ಡಬೆಟ್ಟಗಳನ್ನು ತೋರಿಸುತ್ತಾ ಸ್ವಾಮಿ - ಆಗ ಅವರಿಗೆ ಹದಿನೇಳು ವರ್ಷ, ಪೂಜಾರಿ ಲಕ್ಷ್ಮಯ್ಯನಿಗೆ ಹೇಳಿದ್ದರು : "ಸಾಯಿಪ್ರವೇಶವು ಈ ಪ್ರದೇಶವನ್ನು ಪ್ರಶಾಂತಿ ಪ್ರದೇಶವನ್ನಾಗಿ ಮಾರ್ಪಡಿಸುತ್ತದೆ. ಅದೋ, ಆ ಗುಡ್ಡದ ಮೇಲೆ ಭವ್ಯ ಭವನವೊಂದು ಮೇಲೇಳುತ್ತದೆ. (ಏಳು ವರ್ಷಗಳ ನಂತರ ಅದನ್ನು ಉದ್ಘಾಟಿಸಲಾಯಿತು). ಆಗ ನೂರಾರು ಜನ ನೂರೇ ಏಕೇ ಸಾವಿರಾರು ಸಾವಿರವೇಕೆ ? ಲಕ್ಷಾಂತರ ಲಕ್ಷಗಳೇನು ಮಹಾ ? - ಇಡೀ ಭಾರತವೇ ಇಲ್ಲಿರುತ್ತದೆ. ಇಡೀ ಜಗತ್ತು ಬಂದು ಸಾಯಿ ದರ್ಶನಕ್ಕಾಗಿ ಇಲ್ಲಿ ಕಾದು ನಿಲ್ಲುತ್ತದೆ." ಪೂಜಾರಿ ಲಕ್ಷ್ಮಯ್ಯನಿಗೆ ತನ್ನ ಕಿವಿಗಳನ್ನೇ ನಂಬಲು ಸಾಧ್ಯವಾಗಲಿಲ್ಲ. "ಇಲ್ಲ, ನಾನಿದನ್ನು ನಂಬಲಾರೆ. ಅದು ಹೇಗೆ ತಾನೆ ಸಾಧ್ಯ ?" ಬಾಬಾ ಉತ್ತರಿಸಿದರು : ನಾವು ಈಗ ನಿಂತಿರುವ ಸ್ಥಳದಲ್ಲಿ ನಿಂತುಕೊಂಡು, ಆ ಭವ್ಯವಾದ ಭವನದ ಮಾಳಿಗೆಯ ಮೇಲೆ ನಾನು ನಿಂತಿರುವ ದೃಶ್ಯದ ಒಂದು ಇಣುಕು ನೋಟವನ್ನಾದರೂ ಪಡೆಯಲೆಂದು ನೀನು ಪ್ರಯತ್ನಿಸುವೆಯಲ್ಲ, ಆಗ ನಿನಗೆ ನಂಬಿಕೆಯಾಗುತ್ತದೆ". ಲಕ್ಷ್ಮಯ್ಯ ಇಂದೂ ಬದುಕಿದ್ದಾರೆ. ಅದೇ ಸ್ಥಳದಲ್ಲಿ ನಿಂತು ಕೊಂಡು ಸ್ವಾಮಿಯ ದರ್ಶನ ಪಡೆಯಲು ಪ್ರಯತ್ನಿಸುತ್ತಾ ಇರುತ್ತಾರೆ.

ಆ ಭಾರೀ ಜನಸಮೂಹವನ್ನು ಆಕರ್ಷಿಸಲು ಸ್ವಾಮಿ ಬಳಸುವ 'ತಂತ್ರ' ಯಾವುದು ? 1975 ನವೆಂಬರ್ 23ನೇ ತಾರೀಕು ಭಗವಾನರ 50ನೆಯ ಜನ್ಮದಿನೋತ್ಸವ. ನ್ಯೂಜಿಲೆಂಡಿನಿಂದ ಐಸ್‌ಲೆಂಡಿನವರೆಗೆ ಜಗತ್ತಿನ ನಲವತ್ತಾರು ದೇಶಗಳಿಂದ ಬಂದ ಭಕ್ತರು ಭಗವಾನರಿಗೆ ತಮ್ಮ ಹೃತ್ಪೂರ್ವಕ ವಂದನೆ ಸಲ್ಲಿಸಿದರು. ಅಷ್ಟೆಲ್ಲ ದೂರಗಳಿಂದ, ಅಷ್ಟೊಂದು ಹಣ ಹಾಗೂ ಸಮಯ

ವೆಚ್ಚ ಮಾಡಿಕೊಂಡು ವಿದೇಶದ ಆಹಾರ, ಜೀವನವಿಧಾನಗಳಿಂದಾಗುವ ಅನಾನುಕೂಲಗಳನ್ನು ಸಹಿಸಿಕೊಂಡು ಅಷ್ಟೊಂದು ಜನ ಏಕೆ ಬರುತ್ತಾರೆ?

ಒಂದು ಹಂಚಿಕೆ ಹಾಕಬೇಕೆಂಬ ಒತ್ತಡ ಅವರಿಗೇನೂ ಇಲ್ಲ, ಬಲಾತ್ಕಾರವೂ ಇಲ್ಲ, ಅದರ ಅಗತ್ಯವಂತೂ ಇಲ್ಲವೇ ಇಲ್ಲ. ಸಹಜವಾಗಿ ಅವರು ವರ್ತಿಸುತ್ತಾರೆ. ಈ ಕ್ರಿಯೆಗಳಿಗೆ 'ಹಂಚಿಕೆ' ಎಂಬ ಹಣೆಪಟ್ಟಿ ಅಂಟಿಸುವವರು ನಾವು. 'ನಾನು' ನೆಲೆಯಿಂದ 'ನಾವು' ನೆಲೆಗೆ ಹೋಗಬೇಕು ಎಂದು ಅವರು ಕರೆಕೊಡುತ್ತಾರೆ. ಅದು ಆಕರ್ಷಿಸಲೇ ಬೇಕು ; ಏಕೆಂದರೆ, ಆ ಕರೆ ವ್ಯಕ್ತಿಯ ಹೃದಯಾಂತರಾಳದಿಂದ ಮೂಡಿಬರುವ ಕರೆ. 'ಭೂಮ ಏವ ಸುಖಂ' - ಆನಂದವಿರುವುದು ಭವ್ಯತೆಯಲ್ಲಿ ಎಂದು ಉಪನಿಷತ್ತು ಹೇಳುತ್ತದೆ. 'ವಿಸ್ತರಣವೇ ಬದುಕು ; ಸಂಕೋಚವೇ ಸಾವು' ಎಂದು ಬಾಬಾ ಹೇಳುತ್ತಾರೆ. ನಮ್ಮನ್ನು ಅವರು ಆ 'ವಿಸ್ತಾರ'ಕ್ಕೆ, 'ನಾವು' ನೆಲೆಗೆ ಕರೆದೊಯ್ಯುತ್ತಾರೆ. ಅವರು ಅದನ್ನು ಹೇಗೆ ಸಾಧಿಸುತ್ತಾರೆ ಎಂಬುದೇ ವಿಶಿಷ್ಟ ಕಾರ್ಯ ನೀತಿ. ನಾವು ಭಜನಗೋಷ್ಠಿಯ ಕೊನೆಯಲ್ಲಿ ಹಾಡಬೇಕೆಂದು ಅವರು ವಿಧಿಸುವ 'ಸುಬ್ರಹ್ಮಣ್ಯಂ' ಎದೆಯನ್ನು ತಟ್ಟಿ ಕುಣಿಸುವ ಹಾಡು ( ಸು-ಬ್ರಹ್ಮನ್-ಯಂ). ಅದು ಬ್ರಹ್ಮಮಾರ್ಗವನ್ನು ಬೋಧಿಸುತ್ತದೆ. ಬ್ರಹ್ಮವೇ ದಿವ್ಯ ; ಅದು ಅಂತಸ್ಥವೂ ಹೌದು, ಅತೀತವೂ ಹೌದು ; ಅದು ಮಾತಿಗೆ ಮೀರಿದ್ದು, ಕಲ್ಪನೆಗೆ ಸಿಕ್ಕದ್ದು. ಈ ಪಥದ ಅನುಸರಣೆಗೆ ಅಗತ್ಯವಾದ ಸಾಧನೆ ಸರ್ವವ್ಯಾಪಕವಾದ ಪ್ರೇಮ ಮತ್ತು ಸದಾ ವಿಸ್ತಾರಗೊಳ್ಳುವ ನಂಟು. ಸಮಸ್ತ ವಿಶ್ವವನ್ನೂ ಒಳಗೊಳ್ಳುವವರೆಗೂ ಈ ಪ್ರಕ್ರಿಯೆ ಮುಂದುವರಿಯುತ್ತದೆ. ಬಾಬಾ ಹೇಳುತ್ತಾರೆ. "ಸಮಸ್ತ ಜೀವಿಗಳೂ ಇವೆ, ಅವು ಅರಿವು ಪಡೆದಿವೆ, ಮತ್ತು ಆನಂದವನ್ನು ಸವಿಯುತ್ತವೆ. ಏಕೆಂದರೆ ಅದೇ ಭಗವಂತನ ಸಂಕಲ್ಪ. ಅವನು ಸತ್-ಚಿತ್-ಆನಂದ ಆಗಿದ್ದಾನೆ. ಒಂದೇ ಒಂದು ಜೀವಿಯೂ ಭಗವಂತನ ಕರುಣೆಗೆ ಪಾತ್ರವಾಗದೆ ಉಳಿಯುವುದಿಲ್ಲ. ಅವನು ಸರ್ವವ್ಯಾಪಿಯಾಗಿದ್ದಾನೆ, ಯಾವ ಜೀವಿಯೂ ಅವನನ್ನು ಹೊರ ನೂಕಲಾರನು."

"ಮಾನವನನ್ನು ಮಾಧವನ ಕಡೆಗೊಯ್ಯುವ ಪ್ರಾಚೀನ ಹೆದ್ದಾರಿಯನ್ನು ರಿಪೇರಿ ಮಾಡಲು ನಾನು ಬಂದಿದ್ದೇನೆ" ಎನ್ನುತ್ತಾರೆ ಬಾಬಾ. "ಆ ಹೆದ್ದಾರಿಯನ್ನು ದುರಸ್ತುಪಡಿಸಿರೆಂದು ಋಷಿಗಳು, ಸಾಧುಸಂತರು, ಸಾಧಕರು ಮೊರೆಯಿಟ್ಟುದರಿಂದ, ಆ ಪ್ರಾರ್ಥನೆಗೆ ಪ್ರತಿಸ್ಪಂದಿಸಿ ನಾನು ಬಂದಿದ್ದೇನೆ." ಆದ್ದರಿಂದ ನೊಂದ ಸ್ತ್ರೀ ಪುರುಷರ, ಆಧ್ಯಾತ್ಮಿಕ ಸಾಧಕರ ಪ್ರವಾಹ ಭಗವಾನರು ಎಲ್ಲಿರುತ್ತಾರೋ ಅಲ್ಲಿಗೆ ಒಂದೇ ಸಮನೆ ಹರಿಯುತ್ತದೆ. ಕುತೂಹಲಿಗಳಾದ ಸತ್ಯಾನ್ವೇಷಕರೂ, ಸಾಕ್ಷಾತ್ಕಾರದ ಪಥದಲ್ಲಿ ಗಣನೀಯವಾದ ಸಾಧನೆ ಮಾಡಿರುವವರೂ ಧಾವಿಸುತ್ತಾರೆ. ಅವರಿಗೆ ದಿವ್ಯವಾದ ಭರವಸೆ ತುಂಬಿದ ಮುಗುಳ್ನಗೆ, ಸಾಂತ್ವನ ನೀಡುವ ಮೃದುವಾದ ಮಾತು ಅಲ್ಲಿ ದೊರೆತೇ ತೀರುತ್ತದೆ ಎಂದು ವಿಶ್ವಾಸವಿದೆ. ಅವರ ದಿವ್ಯ ಸನ್ನಿಧಿಯಲ್ಲಿ (ಅಥವಾ ಬಹುದೂರದಲ್ಲಿದ್ದರೂ ಆ ಆನಂದದ ಕ್ಷಣಗಳನ್ನು ನೆನೆದುಕೊಂಡಾಗ, ನಮ್ಮನ್ನು, ನಮ್ಮಲ್ಲಿ ಅತ್ಯಂತ ದೀನನಾದವನನ್ನೂ, ಮೇಲೆತ್ತಿದ ಅನುಭವವಾಗುತ್ತದೆ. ಏಕೆಂದರೆ ನಾವು ಆತನದೇ ಅಂಶ, ಆತನಂತೆಯೇ ದಿವ್ಯಾತ್ಮರು ಎಂದು ಅವರು ನೆನಪು ಮಾಡಿಕೊಡುತ್ತಾರೆ. ಅವರು ನಮ್ಮನ್ನು ಆಗಾಗ ಸಂಬೋಧಿಸುವ ಹಾಗೆ ನಾವೆಲ್ಲ ದಿವ್ಯಾತ್ಮ ಸ್ವರೂಪರು.

## ಅನಂತ ಬಿಂದು

ಅವರಲ್ಲಿ ನಾವು ನಮ್ಮ ಹೃದಯದ ಮಿಡಿತವನ್ನು ಸರಿಯಾದ ವೇಗದಲ್ಲಿ ಒಯ್ಯುವ ನಾಯಕನನ್ನು ಪಡೆದಿದ್ದೇವೆ ಎಂದು ನಮಗೆ ಗೊತ್ತು. ಅವರ ದಿವ್ಯ ನಿರ್ದೇಶನದಲ್ಲಿ ನಾವು ಪೂರ್ಣತೆಯ ಅನಂತ ಬಿಂದುವನ್ನು ಮುಟ್ಟುತ್ತೇವೆ. "ನಾನು ದೇವರು ; ನೀವೂ ದೇವರು. ನನಗೆ ಅದು ತಿಳಿದಿದೆ, ನಿಮಗಿನ್ನೂ ತಿಳಿದಿಲ್ಲ. ಅಷ್ಟೇ ವ್ಯತ್ಯಾಸ" - ಎಂದು ಅವರು ಹೇಳುತ್ತಾರೆ. 1300 ವರ್ಷಗಳ ಹಿಂದೆ ಶಂಕರಾಚಾರ್ಯರು ಮಾಡಿದ ಹಾಗೆ, ಸೋऽಹಂ ('ನಾನು ಅವನೇ') ಮತ್ತು ಶಿವೋऽಹಂ (ನಾನೇ ಶಿವ) ಅನುಭವವನ್ನು ಪಡೆಯಬೇಕು ಎಂದು ಅವರು ಹೇಳುತ್ತಿದ್ದಾರೆ. ನಮ್ಮೊಳಗೆ ಸುಪ್ತವಾಗಿರುವ ದಿವ್ಯತ್ವವನ್ನು ತೋರಿಸಿಕೊಡಲು ಬಾಬಾ ಅವರು ಕನ್ನಡಿ ಹಿಡಿದಾಗ ಅಜ್ಞಾನಿಗಳಾದ ಜನರು ಅಪಹಾಸ್ಯ ಮಾಡುತ್ತಾರೆ. ಅಂಥವರಲ್ಲೊಬ್ಬನು ಒಮ್ಮೆ ಹೀಗೆ ಹೇಳಿದ್ದುಂಟು : "ಬಾಬಾ ತಾವು ದೇವರೆಂದು ಹೇಳಿಕೊಂಡುದಕ್ಕಾಗಿ ಯಾರೂ ಟೀಕಿಸದಿರಲಿ ಎಂದು ನಮ್ಮನ್ನೂ ತಮ್ಮ 'ದಿವ್ಯತೆ'ಯ ತೆಕ್ಕೆಯೊಳಕ್ಕೆ ಸೆಳೆದುಕೊಂಡು ತಮ್ಮ ನಟನೆಯಲ್ಲಿ ನಮ್ಮನ್ನೂ ಭಾಗಿಗಳನ್ನಾಗಿ ಮಾಡಿಕೊಳ್ಳುತ್ತಿದ್ದಾರೆ". ಆದರೆ ಸಕಲ ಜೀವಿಗಳೂ ಒಬ್ಬನೇ ಭಗವಂತನ ಅಂಶಗಳು ಎಂಬ ನಂಬಿಕೆ ವೇದಾಂತದಷ್ಟೇ ಪುರಾತನವಾದದ್ದು, ಅಷ್ಟೇ ವಿಶ್ವಾತ್ಮಕವಾದದ್ದು. ಸೂಫಿ ಸಂತ ಬಯಾಜಿದ್ ಹೇಳಿದ : "ನಾನು ದೇವರಿಂದ ದೇವರ ಬಳಿಗೆ ಅಲೆಯುತ್ತಲೇ ಹೋದೆ, ಕೊನೆಗೆ ನನ್ನೊಳಗೇ ನನಗೆ ದೇವರ ಕರೆ ಕೇಳಿಸಿತು ಓ ನೀನು ನಾನೇ". ಬೌದ್ಧ ಅನುಭಾವಿ ಹ್ಯುಯಿನೆಂಗ್ ಹೇಳಿದನು : "ಬೋಧಿ ಪಡೆಯದಿದ್ದಾಗ ಬುದ್ಧರು ಸಾಮಾನ್ಯರಿಗಿಂತ ಬೇರೆಯೇನಲ್ಲ ; ಬೋಧಿ ದೊರೆತೊಡನೆ ಸಾಮಾನ್ಯ ಜೀವಿಗಳೂ ಬದ್ಧರಾಗಿಬಿಡುತ್ತಾರೆ". ಕ್ರಿಶ್ಚಿಯನ್ ಅನುಭಾವಿ ಎಕ್‌ಹಾರ್ಟ್ ಹೀಗೆ ಘೋಷಿಸಿದ : ಭಗವಂತನ ಬೀಜ ನಮ್ಮೊಳಗಿದೆ, ಬೀಜಗಳು ಭಗವಂತನಾಗಿ ಬೆಳೆಯುತ್ತವೆ."

ಸಾವಿರಾರು ಜನ ಅವರ ಸನಿಹಕ್ಕೆ ಅವರ ಶಕ್ತಿಯ ಮೂಲಕ, ಅವರ ಜ್ಞಾನದ ಅವರ ಪ್ರೇಮದ ಮೂಲಕ ಆಕರ್ಷಿತರಾಗುತ್ತಾರೆ. ಸಾಯಿಬಾಬಾ ಎಂದರೆಯೇ ದಿವ್ಯ ಮಾತೆ ಮತ್ತು ಪಿತ ಎಂದು ಅರ್ಥ. ತಾಯಿಯ ಎಲ್ಲೆಯರಿಯದ ಪ್ರೇಮ ಬಾಬಾ ಅವರಲ್ಲಿದೆ ; ಹಾಗೆಯೇ ತಂದೆಯ ಕಲುಷಿತವಾಗದ ವಿಶ್ವಾತ್ಮಕ ಜ್ಞಾನ ಮತ್ತು ಯಾರೂ ಮೀರಿಸಲಾಗದ ಶಕ್ತಿ ಅವರಲ್ಲಿದೆ. ಇಂತಹ ಅನ್ಯಾದೃಶ ಅವತಾರಪುರುಷನ ಪ್ರಭಾವಕ್ಕೆ ಒಳಗಾಗದವರು ಯಾರು ?

## ಅಗತ್ಯವಿರುವ ಎಲ್ಲರೂ

ಅನಂತ ಪ್ರೇಮ ! ಹೊರಗಿನ ಗೋಪುರದ ಮೇಲೆ, ಒಳಗಿನ ಬಾಗಿಲ ಕಮಾನಿನ ಮೇಲೆ, ಪ್ರಾರ್ಥನಾ ಮಂದಿರದ ವೇದಿಕೆಯ ಮೇಲೆ ವ್ಯಕ್ತಿಯು ತನ್ನ ಪ್ರಿಯ ಧರ್ಮದ ಸಂಕೇತವನ್ನೂ, ಇತರ ಧರ್ಮಗಳ ಅಷ್ಟೇ ಮಟ್ಟಿಗೆ ಗೌರವಾನ್ವಿತವಾದ ಸಂಕೇತಗಳೊಂದಿಗೆ ನೋಡುತ್ತಾನೆ. ನೀವು ಹಿಂದೂ ಎಂದೋ ಮುಸ್ಲಿಂ, ಬೌದ್ಧ, ಪಾರ್ಸಿ, ಕ್ರಿಶ್ಚಿಯನ್ ಎಂದೋ, ಕೊನೆಗೆ ನಾಸ್ತಿಕನೆಂದೋ ಹೇಳಿಕೊಂಡರೆ ಸಾಯಿಬಳಗಕ್ಕೆ ಸೇರಿದ್ದ ಯಾರೂ ನಿಮ್ಮನ್ನು ಪ್ರಶ್ನೆ ಮಾಡುವುದಿಲ್ಲ, ಯಾರ ಹುಬ್ಬೂ

ಮೇಲೇರುವುದಿಲ್ಲ. ಕೇಳುವ ಒಂದೇ ಒಂದು ಪ್ರಶ್ನೆ ಮತ್ತು ಬಾಬಾ ಅವರಿಗೆ ಅಗತ್ಯವಾಗಿರುವ ವಿಚಾರ ಒಂದೇ ; ನೀವು ಎಷ್ಟು ಮಟ್ಟಿಗೆ ಪ್ರಾಮಾಣಿಕರಾಗಿದ್ದೀರಿ, ಕಷ್ಟಕ್ಕೆ ಸಿಲುಕಿದ್ದೀರಿ, ಎಷ್ಟು ಮಟ್ಟಿಗೆ ಕರುಣಾಮಯರಾಗಿದ್ದೀರಿ, ಎಷ್ಟು ಮಟ್ಟಿಗೆ ಆತ್ಮ ಸಂಯಮವುಳ್ಳವರಾಗಿದ್ದೀರಿ ಎಂಬುದು. ಪೂರ್ವ ಆಫ್ರಿಕಾದ ಎಂಟಿಬೆಯಿಂದ ವನ್ಯ ಮೃಗಧಾಮವಿರುವ ಸೆರೆಂಗೆಟಿಗೆ ತಮ್ಮನ್ನು ಅವಳಿ ಎಂಜಿನುಗಳ ವಿಮಾನದಲ್ಲಿ ಕರೆದೊಯ್ದ ವಿಮಾನ ಚಾಲಕನಿಗೆ ಬಾಬಾ ಒಂದು ಕ್ರಾಸ್ ಸೃಷ್ಟಿಸಿಕೊಟ್ಟರು. ಬಂಡೀಪುರದ ಕಾಡಿನಲ್ಲಿ ಒಂದು ತುಂಡು ಒಣಗಿದ ಕಡ್ಡಿಯನ್ನು ಇನ್ನೊಂದು ತುಂಡಿನ ಮೇಲೆ ಅಡ್ಡಡ್ಡಲಾಗಿಟ್ಟು ಬಾಯಿಂದ ಊದಿದರು. ಮರುಕ್ಷಣ ಅದು ಡಾ. ಹಿಸ್ಲಾಪರಿಗಾಗಿ ಮರದ ಶಿಲುಬೆ, ಅದರ ಮೇಲೆ ಮಟ್ಟಿದ ಕ್ರಿಸ್ತನ ಬೆಳ್ಳಿಯ ವಿಗ್ರಹ ಆಗಿ ಪರಿವರ್ತಿತವಾಯಿತು. ಪ್ರೊಫೆಸರ್ ಬಷೀರುದ್ದೀನ್ ಅವರಿಗೆ ಒಂದು ಬೆಳ್ಳಿಯ ಭರಣಿಯನ್ನು ಸೃಷ್ಟಿಸಿ ಕೊಟ್ಟರು. ಅದರ ಮುಚ್ಚಳದ ಮೇಲೆ ಅರಾಬಿಕ್ ಭಾಷೆಯಲ್ಲಿ ಅಲ್ಲಾಹ್ ಎಂದು ಕೆತ್ತಿತ್ತು. ಬಕ್ರೀದ್ ದಿನದಂದು ಅವರು ಪ್ರಶಾಂತಿ ನಿಲಯದಲ್ಲಿದ್ದ ಕೆಲವು ಅರಬ್ ಯಾತ್ರಿಗಳ ತಂಡಕ್ಕೆ ಅದೇ ಕ್ಷಣದಲ್ಲಿ ಅರೇಬಿಯದಲ್ಲಿ ಕಾಬಾದ ಎದುರು ಮಂಡಿಯೂರಿ ಅಗಾಧ ಜನಕೋಟಿ ಪ್ರಾರ್ಥಿಸುತ್ತಿದ್ದ ದೃಶ್ಯವನ್ನು ತೋರಿಸಿದರು. ಯಾತ್ರಿಗಳ ಕಣ್ಣೆದುರಿಗೆ ಬಾಬಾ ತಮ್ಮ ಅಂಗೈ ಹಿಡಿದರು, ಅದರಲ್ಲಿ ಅವರೆಲ್ಲರೂ ಆ ದಿವ್ಯದೃಶ್ಯವನ್ನು ನೋಡಿದರು. ಡಾ. ಸ್ಯಾಂಡ್‌ವಿಸ್ ಅಂತಹ ಅನೇಕ ಯೆಹೂದ್ಯರಿದ್ದಾರೆ, ಆತ ಬಾಬಾ ಅವರಿಗೆ ಈ ಮಾತುಗಳಲ್ಲಿ ಗೌರವ ಅರ್ಪಿಸುತ್ತಾನೆ : "ಬಾಬಾ ಭಗವಂತನ ಅವತಾರವೆಂದು ನಾನು ನಂಬುತ್ತೇನೆ. ಹಿಂದೂ, ಕ್ರಿಶ್ಚಿಯನ್ ಮತ್ತು ಹೀಬ್ರೂ ಸಾಹಿತ್ಯದಲ್ಲಿ ಕಂಡುಬರುವ ಕಥೆಗಳು ಸಂಕೇತ ಮಾತ್ರಗಳಲ್ಲ ; ಆಧ್ಯಾತ್ಮಿಕ ಸತ್ಯವೊಂದಿದೆ, ಅದು ತನ್ನನ್ನು ಪ್ರಕಟ ಪಡಿಸಿಕೊಳ್ಳಬಲ್ಲುದು."

ಸಿಲೋನಿನಲ್ಲಿ ಮಲೇಶಿಯದಲ್ಲಿ ಬೌದ್ಧ ಭಿಕ್ಷುಗಳು ಸಾಯಿ ಪ್ರಾರ್ಥನಾ ಮಂದಿರಗಳನ್ನೂ, ಸೇವಾ ಕೇಂದ್ರಗಳನ್ನೂ ಕಟ್ಟಿದ್ದಾರೆ. ಬಾಬಾ ನವಜ್ಯೋತಿ ವಿಧಿಯನ್ನು ಆಚರಿಸಿ ಪಾರ್ಸಿ ಬಾಲಕರಿಗೆ ಆಧ್ಯಾತ್ಮಿಕ ಸಾಧನೆಯ ದೀಕ್ಷೆ ಕೊಡುತ್ತಾರೆ. ಅವರು ತೋರುವ ಈ ವಿಶೇಷ ಕೃಪೆಗಾಗಿ ಆ ಬಾಲಕರ ತಂದೆ ತಾಯಿ ಅವರಿಗೆ ಕೃತಜ್ಞರಾಗಿರುತ್ತಾರೆಯ ಯಾರೂ ಅಲ್ಲಿ ಹೊಸಬರಲ್ಲ ; ಇವನು ತೀರಾ ಚಿಕ್ಕವನು ಇವನು ತೀರಾ ವಯಸ್ಸಾದವನು, ಇವನು ಉದ್ಧಟ, ಇವನು ತಿದ್ದಲಸಾಧ್ಯನು ಇತ್ಯಾದಿ ಯಾವುದೇ ಕಾರಣಗಳಿಂದ ಯಾರನ್ನು ಹೊರಗಿಡುವುದಿಲ್ಲ. ಭಗವಾನರು ಸೂರ್ಯನ ಪ್ರಖರವಾದ ಬಿಸಿಲು ಇದ್ದ ಹಾಗೆ. ಅದು ಎಲ್ಲಾ ಧರ್ಮಗಳ ಹಾಗೂ ನಂಬಿಕೆಗಳಲ್ಲಿರುವ ಕಶ್ಮಲಗಳನ್ನು ತೆಗೆದು ಹಾಕಿ ಶುದ್ಧಪಡಿಸುತ್ತದೆ. ಯಾರು ಧರ್ಮದ ನೇರವಾದ ಪಥವನ್ನು ಬಿಟ್ಟು ಅತ್ತಿತ್ತ ಅಲೆಯುತ್ತಿದ್ದಾರೋ, ಶಾಂತಿ ಪ್ರೇಮ ಆನಂದಗಳ ಕ್ಷೇತ್ರದಿಂದ ತಪ್ಪಿಸಿಕೊಂಡು ಬಿಟ್ಟಿದ್ದಾರೋ ಅವರನ್ನು ಕೈಹಿಡಿದು ನಡೆಸುವುದಾಗಿ ಅವರು ಘೋಷಿಸಿದ್ದಾರೆ. ನಾಸ್ತಿಕರನ್ನು ಅವರು ಬಹಿಷ್ಕರಿಸುವುದಿಲ್ಲ. ಏಕೆಂದರೆ ಅವರೂ ಏನಾದರೊಂದನ್ನು-ಪ್ರಾಣಿಯೋ, ಸಸ್ಯವೋ, ವ್ಯಕ್ತಿಯೋ, ಪಂಥವೋ, ಆದರ್ಶವೋ ಅಥವಾ ಇಸಮ್ಮೋ-ಏನನ್ನಾದರೂ ಪ್ರೀತಿಸುತ್ತಾರೆ. ಆ ಪ್ರೇಮವೇ ಭಗವಂತ ಎನ್ನುತ್ತಾರೆ ಬಾಬಾ. ಅಂಥವರೂ ಕೂಡ ಯಾರಾದರೂ ತಮ್ಮನ್ನು ಸುಳ್ಳುಗಾರರೆಂದರೆ ಸಹಿಸುವುದಿಲ್ಲ, ಸತ್ಯವನ್ನಾಡುವುದರಲ್ಲಿ ಸಂತೋಷಪಡುತ್ತಾರೆ. ಅವರು ಸತ್ಯಕ್ಕೆ ತೋರುವ ಈ ಮನ್ನಣೆ ಏನಿದೆ, ಅದು ಅವರು ಸತ್ಯಪ

ಆಗಿರುವ ಭಗವಂತನನ್ನು ಗೌರವಿಸುತ್ತಾರೆ ಎಂಬುದಕ್ಕೆ ಕುರುಹಾಗಿದೆ. ಹದಿನಾರನೆಯ ಶತಮಾನದ ಡಚ್ ದಾರ್ಶನಿಕ ಎರಾಸ್ಮಸ್ ಹೇಳಿದ : "ಎಲ್ಲೇ ಆಗಲಿ ನಿಮಗೆ ಸತ್ಯವು ಗೋಚರಿಸಿದರೆ ಅದನ್ನು ಕ್ರೈಸ್ತಧರ್ಮವೆಂದು ತಿಳಿಯಿರಿ". ನಿರೀಶ್ವರವಾದಿಗಳು ಸೌಂದರ್ಯವನ್ನು ಮೆಚ್ಚುತ್ತಾರೆ, ಅದರಿಂದ ಮೋಹಿತರಾಗುತ್ತಾರೆ. ಭಗವಂತನೇ ಸೌಂದರ್ಯ. ಅದರ ಮೂಲಕ ಅವರ ಮೇಲೆ ಅವನು ಪ್ರಭಾವ ಬೀರುತ್ತಾನೆ.

ಬಾಬಾ ಯಾವುದೇ ಪಂಥದ ಮೂಷೆಯಲ್ಲಿ ಜನರನ್ನು ರೂಪಿಸಲು ಪ್ರಯತ್ನಿಸುವುದಿಲ್ಲ. ಜನರ ಕಷ್ಟ ಸಂಕಟಗಳನ್ನು ಪರಿಹರಿಸಲು ಯಾವುದೇ ಒಂದು ನಿರ್ದಿಷ್ಟ ಆಧ್ಯಾತ್ಮಿಕ ಸಾಧನೆಯನ್ನಾಗಲೀ, ಯಾವುದೇ ಒಂದು ಸಿದ್ಧಾಂತವನ್ನಾಗಲಿ ವಿಧಿಸುವುದಿಲ್ಲ. ಇಂದಿಗೂ ಇಲ್ಲಿನ ಸಂದೇಶ : "ದುಡಿಯುವವರು, ಭಾರಹೊತ್ತವರು, ದಣಿದವರು ನನ್ನ ಬಳಿಗೆ ಬನ್ನಿ, ನಿಮಗೆ ಸಾಂತ್ವನ ನೀಡುತ್ತೇನೆ" ಎಂಬುದೇ ಆಗಿದೆ. ಜನರು ಒಡೆದ ಹೃದಯಗಳಿಂದ, ಭ್ರಮೆಗಳಳಿದು, ಅತೃಪ್ತ ಬಯಕೆಗಳು ಮಡುಗಟ್ಟಿ ಇಲ್ಲಿಗೆ ಬರುತ್ತಾರೆ. ನಿಜವಾದ ಹಾಗೂ ತಪ್ಪಾಗಿ ಭ್ರಮಿಸಿರುವ ಸಂಕಟವನ್ನು ಹೊತ್ತು ತರುತ್ತಾರೆ. ಭಗವಂತನನ್ನು ಸಂಧಿಸಿ ಅವರು ಬೇಡುತ್ತಾರೆ. "ನಾವು ನಿನ್ನನ್ನು ಅದು ಇದು ಕೊಡೆಂದು ಕೇಳುವುದಿಲ್ಲ. ಏಕೆಂದರೆ ನಮ್ಮ ಅಗತ್ಯಗಳೇನೆಂದು ನಿನಗೇ ಗೊತ್ತಿದೆ, ವಾಸ್ತವವಾಗಿ ನೀನೊಬ್ಬನೇ ನಮ್ಮ ಅತ್ಯಗತ್ಯ ವಸ್ತು." ಹಾಗೆ ಹೇಳಿಕೊಂಡು ಅಲ್ಲಿ ಉಳಿದುಕೊಳ್ಳುತ್ತಾರೆ.

ಬಹುತೇಕ ಗುರುಗಳು ಜನರ ಕಷ್ಟನಿವಾರಣೆಗಾಗಿ ವಿಧಿಸುವ ಯಂತ್ರಗಳು ಮತ್ತಿತರ ಸಾಧನಗಳು ಹಾಗೂ ಅವುಗಳಿಗೆ ಪ್ರತಿಯಾಗಿ ತಾವು ಪಡೆಯುವ ದಕ್ಷಿಣೆ ಅಥವಾ ಉಡುಗೊರೆಗಳ ಬಗೆಗೆ ಆಸಕ್ತರಾಗಿದ್ದರೆ, ಬಾಬಾ ಕೇವಲ ನಮ್ಮಲ್ಲಿ ಆಸಕ್ತರಾಗಿದ್ದಾರೆ. ನಾವು ಸಾಧನೆ ಮಾಡುತ್ತೇವೋ, ಯಾವುದೇ ನೀತಿ ಕೈಗೊಳ್ಳುತ್ತೇವೋ ಇಲ್ಲವೋ ಅದೆಲ್ಲ ಮುಖ್ಯವಲ್ಲವೇ ಅಲ್ಲ. ಅಲ್ಲದೆ ಭಗವಂತನ ಕಿಡಿಯು ಮನುಷ್ಯನಲ್ಲಿ ಐದು ಕೋಶಗಳ ಒಳಗಡೆ ಅಡಗಿದೆ. (ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಹಾಗೂ ಆನಂದಮಯ). ಇವು ಒಂದರೊಳಗೊಂದು ಸೇರಿವೆ. ಬಾಬಾ ವಾತ್ಸಲ್ಯಪೂರ್ಣ ಕಾಳಜಿಯಿಂದ ಅವನ್ನು ಒಂದೊಂದಾಗಿ ಸರಿಪಡಿಸುತ್ತಾರೆ, ತೀರಾ ಒಳಗಿರುವ ಕಿಡಿಯ ಬಗೆಗೆ ನಾವು ಚಿಂತನೆ ಮಾಡಲು ನೆರವು ನೀಡುತ್ತಾರೆ.

"ನನ್ನನ್ನು ಗಳಿಸಿಕೊಳ್ಳಿ, ಎಂದು ನಾನು ಎಂದೂ ಹೇಳುವುದಿಲ್ಲ ; ನನ್ನ ಅಗತ್ಯ ನಿಮಗೆ ಬರಲಿ ಎಂದಷ್ಟೆ ಇಚ್ಛಿಸುತ್ತೇನೆ" ಎನ್ನುತ್ತಾರೆ ಅವರು. ಈ ವೈದ್ಯನ, ಈ ಮನೋವೈದ್ಯನ, ಮಾರ್ಗದರ್ಶಕನ, ಶಿಕ್ಷಕನ, ಗೆಳೆಯನ ವಾತ್ಸಲ್ಯ ಪೂರ್ವಕ ಕಾಳಜಿಯಲ್ಲಿ, ನಾವಿನ್ನೂ ಉಪಯೋಗ ಮಾಡಿಕೊಂಡಿಲ್ಲದ ಧೈರ್ಯ, ಸಹಿಷ್ಣುತೆ, ಉದಾತ್ತ ಬಯಕೆ ಮತ್ತು ಸಾಹಸ ಪ್ರವೃತ್ತಿಗಳ ಒರತೆಗಳು ನಮ್ಮ ಅರಿವಿಗೆ ಬರುತ್ತವೆ. ಯಾವ ಸಮಾಜದಲ್ಲಿ ನಾವು ಹುಟ್ಟಿಬೆಳೆದೆವೋ ಯಾವುದು ಭವಿಷ್ಯತ್ತನ್ನು ಎದುರಿಸಲು, ಕರ್ತವ್ಯಗಳನ್ನು ನಿರ್ವಹಿಸಲು ನಮ್ಮನ್ನು ಸಿದ್ಧಮಾಡಿತೋ ಆ ಸಮಾಜದ ಬಗೆಗೆ ನಮ್ಮ ಚಿಂತನೆಗಳು, ಕಾರ್ಯಗಳು ಹೇಗಿರಬೇಕು, ಏನಿರಬೇಕು ಎಂದು ಕೂಡ ಬಾಬಾ ನಮಗೆ ತೋರಿಸಿಕೊಡುತ್ತಾರೆ. ಷೂಮೇಕರ್ ಹೀಗೆ ಹೇಳಿದ್ದಾನೆ : "ನಾವು ಇತರ ಮಾನವ ಜೀವಿಗಳೊಂದಿಗೆ

ಯಾವ ಬಗೆಯ ಸಂಬಂಧವನ್ನು ಇಟ್ಟುಕೊಳ್ಳುತ್ತೇವೆ ಎನ್ನುವುದರ ಮೇಲೆ ನಮ್ಮ ಬದುಕನ್ನು ಕಟ್ಟುವುದಾಗಲಿ ಕೆಡುವುವುದಾಗಲಿ ನಿಲ್ಲುತ್ತದೆ. ಇದನ್ನು ಮರೆಯಲು ಎಷ್ಟೆಷ್ಟೋ ಆಮಿಷಗಳು ನಮಗೆ ಎದುರಾಗುತ್ತಿದ್ದರೂ ಇದು ಸತ್ಯ. ಈ ಸಂಬಂಧಗಳು ಇಲ್ಲದೆ ಹೋದ ಪಕ್ಷದಲ್ಲಿ ಎಷ್ಟೇ ಪ್ರಮಾಣದ ಆರೋಗ್ಯ, ಸಂಪತ್ತು, ಅಧಿಕಾರ, ಕೀರ್ತಿಗಳಿದ್ದರೂ ಅವು ನಷ್ಟವನ್ನು ಭರ್ತಿ ಮಾಡಲಾರವು. ಇತರರನ್ನು ಅರ್ಥ ಮಾಡಿಕೊಳ್ಳಲು ನಮಗಿರುವ ಸಾಮರ್ಥ್ಯ ಹಾಗೂ ನಮ್ಮನ್ನು ಅರ್ಥಮಾಡಿಕೊಳ್ಳಲು ಇತರರಿಗಿರುವ ಸಾಮರ್ಥ್ಯ ಇವುಗಳ ಮೇಲೆ ಅವೆಲ್ಲ ನಿಂತಿವೆ." ಇತರರ ಬಗೆಗೆ ನಮ್ಮಲ್ಲಿ ಕಾಳಜಿ ಇಲ್ಲದೆ ಹೋದರೆ, ವಿಶ್ವಾಸವಿಲ್ಲದೆ ಹೋದರೆ, ಸಹಾನುಭೂತಿಯಿರದೇ ಹೋದರೆ ನಮ್ಮ ಬದುಕು ಪೂರ್ಣತೆ ಹೊಂದುವುದಿಲ್ಲ ಎಂದು ಬಾಬಾ ಸಾರಿ ಹೇಳುತ್ತಾರೆ.

ಬಾಬಾ ಅವರ ಅನಂತ ಪ್ರೇಮ, ಜ್ಞಾನ ಮತ್ತು ಶಕ್ತಿ ನಮ್ಮ ಪ್ರತಿಯೊಬ್ಬರ ಮೇಲೂ ಅಳಿಸಲಾಗದ ಮುದ್ರೆಯೊತ್ತುತ್ತವೆ. ಅವರ ಸಂದೇಶವನ್ನು ಆಲಿಸಿ ಅರಗಿಸಿಕೊಳ್ಳಲೆಂದು ಅವರ ಸನ್ನಿಧಿಯಲ್ಲಿ ಕುಳಿತಾಗ ಕೆಲವೊಮ್ಮೆ ಒಂದು ಕ್ಷಣದಲ್ಲಿ ಈ ಪ್ರಭಾವ ಬೀಳುತ್ತದೆ. ಪಾಲ್ ರಾಬರ್ಟ್ಸ್ ಭಗವಾನರ ದಿವ್ಯ ಸನ್ನಿಧಿಯಲ್ಲಿ ಕಳೆದ ಕೆಲವು ಕ್ಷಣಗಳ ಬಗೆಗೆ ವೋಗ್ ಪತ್ರಿಕೆಯಲ್ಲಿ (1976 ಕ್ರಿಸ್‌ಮಸ್ ಸಂಚಿಕೆ) ಬರೆಯುತ್ತಾರೆ : ನಾನು ಅನೇಕ ತಿಂಗಳುಗಳಿಂದ ಗಮನಿಸುತ್ತ ಬಂದ, ದೂರದ ಮತ್ತು ಅತಿ ಸಮರ್ಥ ವ್ಯಕ್ತಿಯಾದ ಬಾಬಾ, ಬಹಳಕಾಲದ ಹಿಂದೆ ಕಳೆದುಹೋಗಿದ್ದ ಗೆಳೆಯನೋ ಎಂಬಂತೆ ನನ್ನನ್ನು ಅಪ್ಪಿಕೊಂಡರು. ಅತಿಶಯವಾದ ಪ್ರೇಮದಿಂದ ನನ್ನಲ್ಲಿರುವ ದೋಷ ದೌರ್ಬಲ್ಯಗಳನ್ನು ಹೇಳತೊಡಗಿದರು. ವಾಸ್ತವವಾಗಿ ಬೇರೆ ಯಾರಿಗೂ ತಿಳಿದಿರಲು ಸಾಧ್ಯವೇ ಇಲ್ಲದಿದ್ದಂತಹ ವಿಷಯಗಳನ್ನು ಅವರು ಹೇಳಿದರು. ನಾನು ಕೇಳಬಹುದಾಗಿದ್ದ ಎಲ್ಲ ಪ್ರಶ್ನೆಗಳಿಗೂ ಉತ್ತರ ನೀಡಿದರು. ನನಗೆ ಒಳ್ಳೆಯ ಬುದ್ಧಿವಾದ ಹೇಳಿದರು. ಅದನ್ನು ಅಮೂಲ್ಯವೆಂದು ಕಾಪಾಡಿ ಇಟ್ಟುಕೊಂಡಿದ್ದೇನೆ... ಈ ಜಗತ್ತಿನಲ್ಲಿ ಬೇರೆ ಯಾರಿಗಿಂತಲೂ ಹೆಚ್ಚಾಗಿ ಅವರಿಗೆ ನಾನು ನಿಕಟವಾಗಿದ್ದೇನೆ. ಮಾತಿನಲ್ಲಿ ವಿವರಿಸಲಾಗದಷ್ಟು ಹತ್ತಿರವಾಗಿದ್ದೇನೆ ಎಂಬ ಭಾವನೆ ಬಂದಿತು, ಈಗಲೂ ಇದೆ."

ಆರ್ ಕೆ ಕರಂಜಿಯಾ ಬ್ಲಿಟ್ಜ್ ಪತ್ರಿಕೆಯ ಸಂಪಾದಕರು. ಅವರು ತಮ್ಮನ್ನು ನಾಸ್ತಿಕ, ವಿಮರ್ಶಕ, ಮಾರ್ಕ್ಸಿಸ್ಟ್ ಎಂದು ಬಣ್ಣಿಸಿಕೊಂಡಿದ್ದರು. ಹಿಂದೆ ಸತ್ಯ ಸಾಯಿಬಾಬಾ ಅವರನ್ನು ಬಹಿರಂಗವಾಗಿ ಪ್ರಶ್ನಿಸಿದ್ದರು, ಟೀಕಿಸಿದ್ದರು. (ಇತರ ಅನೇಕ ಸಂದೇಹವಾದಿಗಳ ಹಾಗೆ, ಟೀಕಾಕಾರರು ಮತ್ತು ಮಾರ್ಕ್ಸಿಸ್ಟರ ಹಾಗೆ) ಅವರು ಬಾಬಾ ಅವರನ್ನು ಸಂಧಿಸಿದರು. ಅವರಿಗೆ ಒಂದು ಆತ್ಮೀಯ ಸಂದರ್ಶನ ದೊರಕಿತು. "ಅದೊಂದು ಅದ್ಭುತ ಸಂದರ್ಶನ, ವ್ಯಕ್ತಿಯನ್ನು ಹೆಚ್ಚುಕಡಿಮೆ ಹುಡಿಗಟ್ಟಿಬಿಡುವ ಸಂದರ್ಶನ. ನನ್ನ ಜೀವನ ಮತ್ತು ವೃತ್ತಿಯಲ್ಲಿ ನಡೆದು ಬಂದಿದ್ದ ಅತ್ಯಂತ ಖಾಸಗಿಯಾದ, ಬೆಳವಣಿಗೆಗಳನ್ನೆಲ್ಲ ಅವರು ತಿಳಿದಿದ್ದರು, ಬಣ್ಣಿಸುತ್ತಾ ಹೋದರು." ಎಂದು ಬರೆದರು.

## ಒಂದು ತೆರಪು, ಒಂದು ಮೇಲುಸಿರು

ಕ್ಯಾಲಿಫೋರ್ನಿಯಾದ ಸ್ಯಾನ್‌ಡಿಗೋದ ಸುಪ್ರಸಿದ್ಧ ಮನೋವೈದ್ಯ ಡಾ. ಸ್ಯಾಮ್ಯುಯೆಲ್ ಸ್ಯಾಂಡ್‌ವೀಸ್ ಬಣ್ಣಿಸುತ್ತಾರೆ "ಮೊದಲು ನಾನು ಸಾಯಿಬಾಬಾ ಅವರನ್ನು ಸಂಧಿಸಿದ ಮೇಲೆ

ಒಂದು ಒಳ ಜಾಗೃತಿ ಅನುಭವಕ್ಕೆ ಬರತೊಡಗಿತು. ಒಮ್ಮೆ ತುಂಬಾ ಆತ್ಮೀಯವಾಗಿದ್ದ ನಾನು ಮರೆತು ಬಿಟ್ಟಿದ್ದ ನನ್ನದೇ ವ್ಯಕ್ತಿತ್ವದ ಒಂದು ಭಾಗ ನನಗೆ ಪರಿಚಯವಾಗುತ್ತಿರುವಂತೆ, ಅನುಭವವಾಯಿತು. ಈ ಅನುಭವವನ್ನು ನಾನು ಭಕ್ತಿ ಎಂದು ಗುರುತಿಸಿದೆ. ನಮ್ಮ ಎಲ್ಲರ ಅಂತರ್ಯದಲ್ಲೂ ಅಂಥದೊಂದು ಕೇಂದ್ರ ಸುಪ್ತವಾಗಿದೆಯೋ, ಯಾವುದಾದರೊಂದು ಖಾಸಗಿಯಾದ ಆಧ್ಯಾತ್ಮಿಕ ಅನುಭವದ ಮೂಲಕವಾಗಿ ಅದು ಬಿಡುಗಡೆಗೊಳ್ಳಲು ಕಾದಿದೆಯೋ ಎಂದು ಆಶ್ಚರ್ಯ ಪಡತೊಡಗಿದನು. ಈ ಜಾಗೃತಿ, ಈ ತೆರೆಯುವಿಕೆ ನನಗೆ ಅಪಾರವಾದ ಆನಂದದ ಮೂಲ ಸೆಲೆಯಾಯಿತು. ಅದರ ಜೊತೆಯಲ್ಲೇ ಬಾಬಾ ಅವರ ಬಗೆಗೆ, ಸಾಮಾನ್ಯವಾಗಿ ಜನತೆಯ ಬಗೆಗೆ ಆಳವಾದ ಪ್ರೇಮಭಾವ ಮೂಡಿಬಂದಿತು. " ತಮ್ಮ ಸನ್ನಿಧಿಯಲ್ಲಿರುವಾಗ ಹೀಗಾಗುತ್ತದೆ ಎಂದು ಸ್ವತಃ ಬಾಬಾ ಅವರೇ ಹೇಳಿದ್ದಾರೆ. "ನಿಮ್ಮಲ್ಲಿ ಪ್ರತಿಯೊಬ್ಬರೂ ನಿಮ್ಮೊಳಗೆ ಒಂದು ತೆರಪನ್ನು ಮನಗಾಣುವಿರಿ. ಅದೊಂದು ತೃಷೆ, ಒಂದು ಪ್ರಚೋದನೆ, ಒಂದು 'ದಿವ್ಯ' ಅತೃಪ್ತಿ ; ಪ್ರತಿಕ್ರಿಯೆಯು ದುರ್ಬಲವೂ ಚಂಚಲವೂ ಆದ ಒಂದು ಕರೆ. ಬಹಳ ದೂರಗಳಿಂದ ಪ್ರಯಾಣ ಮಾಡಿ ನನ್ನ ಬಳಿಗೆ ಬರುವಂತೆ ಮಾಡಿರುವುದು ಇದೇ. ಶಾಂತಿ, ಶಕ್ತಿ, ಮಾರ್ಗದರ್ಶನಗಳನ್ನು ಗಳಿಸುವ ಅನೇಕ ಅಡ್ಡಿಗಳನ್ನು ದಾಟಿ, ಅನಾನುಕೂಲಗಳನ್ನು ಸಹಿಸಿ ನೀವು ಬಂದಿದ್ದೀರಿ."

ವಿಶ್ವಸಂಸ್ಥೆಯ ಗಂಡಿಕೋಟ ವಿ. ಸುಬ್ಬರಾವ್ ಬರೆಯುತ್ತಾರೆ : "ಅವರನ್ನು ಸಂಧಿಸುವುದೆಂದರೆ ಅದೊಂದು ತೀರಾ ಆತ್ಮೀಯವಾದ, ಭಾವಾತ್ಮಕವಾದ, ಆತ್ಮೋನ್ನತಿಕರವಾದ ಅನುಭವ. ಸತ್ಯಸಾಯಿಬಾಬಾ ಅವರನ್ನು ವೈಭವೀಕರಿಸುವ ಹಾಗೂ ಅವರ ಆಧ್ಯಾತ್ಮಿಕ ಗರಿಮೆ ಮತ್ತು ಭವ್ಯತೆಗಳ ಬಗೆಗೆ ಹಾಡುವ ಆಸೆ ಅದಮ್ಯವಾಗುತ್ತದೆ." ಕಾಕಿನಾಡಾದ ಪ್ರಾಚೀನ ಶಾಸ್ತ್ರಜ್ಞಾನದ ಭಂಡಾರವೆನಿಸಿರುವ, ಶ್ರೀಭಾಷ್ಯಂ ಅಪ್ಪಲಾಚಾರ್ಯರು ಕೆಲವು ದಿನ ಪ್ರಶಾಂತಿ ನಿಲಯದಲ್ಲಿದ್ದು ಬಂದ ನಂತರ ಬರೆಯುತ್ತಾರೆ : "ಭಗವಾನರೇ ವೇದ- ಅವರು ಏನು ಹೇಳುತ್ತಾರೋ ಅದು ಸಂಭವಿಸುತ್ತದೆ ; ಭಗವಾನರೇ ಶಾಸ್ತ್ರ- ಅವರು ಏನು ಮಾಡುತ್ತಾರೋ ಅದು ಮಾದರಿಯಾಗುತ್ತದೆ ; ಅವರು ಪುರಾಣದ ಹಾಗೆ ಸತ್ಯವನ್ನು ಹಲವಾರು ಉಪಮೆಗಳಿಂದ, ರೂಪಕಗಳಿಂದ, ಕಥೆಗಳಿಂದ ಬಣ್ಣಿಸುತ್ತಾರೆ ; ಅವರ ಮಾತುಗಳು ಅತ್ಯುನ್ನತ ಶ್ರೇಣಿಯ ಕಾವ್ಯ. ಏಕೆಂದರೆ ಅವು ಮಾನವನ ಸಣ್ಣತನವನ್ನು ಅಳಿಸಿಹಾಕಿ ಅವನಿಗೆ ಆನಂದ ನೀಡುತ್ತವೆ."

ಚಿಕಾಗೋ ವಿಶ್ವವಿದ್ಯಾನಿಲಯದ ಡಾ. ಎಫ್ ಜೆ. ಗೋಲ್ಡ್ ಹೇಳುತ್ತಾರೆ : "ನಂಬಲು ಸಾಧ್ಯವೇ ಆಗದಂತಹ ಅಂತರ್ದೃಷ್ಟಿಯಿಂದ ಅವರು ವ್ಯಕ್ತಿಯ ಅಗತ್ಯಗಳನ್ನು ಗ್ರಹಿಸುತ್ತಾರೆ, ಕೆಲವೊಮ್ಮೆ ಸಮರ್ಥಿಸುತ್ತಾರೆ, ಕೆಲವೊಮ್ಮೆ ಮುರಿದು ಹಾಕುತ್ತಾರೆ. ನಡವಳಿಕೆಯನ್ನು ಅದರ ನಿರ್ಧಾರಕಾಂಶಗಳನ್ನು ಅವರು ಅಧ್ಯಯನ ಮಾಡುತ್ತಾರೆ. ಯಾವುದೇ ವಿಧಾನದಲ್ಲಿ ಅವರು ವ್ಯಕ್ತಿಯನ್ನು ಒಂದು ಸಂದರ್ಭದಿಂದ ಇನ್ನೊಂದಕ್ಕೆ ವರ್ಗಾಯಿಸುತ್ತಾರೆ... ಅನೇಕ ಭಕ್ತರು ತಮ್ಮಲ್ಲಿ ಆಗಿರುವ ಬದಲಾವಣೆಗಳಿಂದಾಗಿ ಅವರ ಪ್ರಭಾವವನ್ನು ಮನಗಂಡಿದ್ದಾರೆ. ಹೊಸ ವಿಷಯಗಳು ಮುಖ್ಯವಾಗುತ್ತವೆ; ಹೊಸ ಮೌಲ್ಯಗಳು ಪ್ರಧಾನವಾಗುತ್ತವೆ. ತಾಂತ್ರಿಕವಾದ ಪರಿಭಾಷೆಯಲ್ಲಿ ಹೇಳುವುದಾದರೆ, ವ್ಯಕ್ತಿಯ ಉಪಯೋಗತಾ ರಚನೆಯೇ ವ್ಯತ್ಯಾಸಗೊಳ್ಳುತ್ತದೆ."

## ಇಂದ್ರಜಾಲಿಗನ ತಪ್ಪೊಪ್ಪಿಗೆ

ಮುಂಬಯಿಯ ಡಾ. ಇ. ಬಿ. ಫೇನಿಬುಂಡಾ ಒಬ್ಬ ದಂತ ವೈದ್ಯರು ಮತ್ತು ಹವ್ಯಾಸಿ ಇಂದ್ರಜಾಲಿಗ. ಇಂದ್ರಜಾಲದ ತತ್ವ ಮತ್ತು ಆಚರಣೆ ಎರಡರಲ್ಲೂ ಚೆನ್ನಾಗಿಯೇ ಪಳಗಿದವರು. ಮ್ಯಾಜಿಕ್ ಮಾಡುವವರು, ಮನೋವಾಚಕರು ಅನುಸರಿಸಬಹುದಾದ ಹಲವು ಮೂಲಭೂತವೂ ಪರಿಣಾಮಕಾರಿಯೂ ಆದ ವಿಧಾನಗಳನ್ನು ಕುರಿತ ಒಂದು ಪುಸ್ತಕವನ್ನು ಅವರು 1954ರಲ್ಲಿ ಪ್ರಕಟಿಸಿದರು. ಅವರ ಪರಿಣತಿಯನ್ನು ಮೆಚ್ಚಿ ಅಮೆರಿಕದಲ್ಲಿರುವ ಇಂದ್ರಜಾಲಿಗರ ಅಂತರರಾಷ್ಟ್ರೀಯ ಸೋದರ ಸಂಘವು ಅವರಿಗೆ 'ಲಿಂಕಿಂಗ್ ರಿಂಗ್' ಪುರಸ್ಕಾರವನ್ನಿತ್ತಿತು. ಬಾಬಾ ಅವರ ಬಗೆಗೆ ಫೇನಿಬುಂಡಾ ಪ್ರತಿಕ್ರಿಯಿಸಿರುವುದು ಹೀಗೆ : "ಶ್ರೀ ಮುನ್ನಿಯವರ ಮನೆಯ ದಿವಾನಖಾನೆಯಲ್ಲಿ ಸುಮಾರು ಹತ್ತು-ಹನ್ನೆರಡು ಜನ ಕಾಯುತ್ತಿದ್ದರು. ಸ್ವಲ್ಪ ಸಮಯದಲ್ಲೇ ಮನೆಯ ಒಳಗಿನಿಂದ ಬಾಬಾ ಅವರು ಅಲ್ಲಿಗೆ ಬರುವವರಿದ್ದರು. ಈ ಲೇಖಕನು (ಅವರು ತಮ್ಮನ್ನು ಪ್ರಥಮ ಪುರುಷದಲ್ಲೇ ಬರೆದುಕೊಂಡಿದ್ದಾರೆ) ಕೊಠಡಿಯ ಒಂದು ಮೂಲೆಯಲ್ಲಿ ನಿಂತಿದ್ದನು. ಬಾಬಾ ಕೊಠಡಿಯನ್ನು ಪ್ರವೇಶಿಸಿದೊಡನೆ ಎಲ್ಲರೂ ಎದ್ದು ನಿಂತರು. ಅವರ ಸಮೀಪಕ್ಕೆ ಹೋಗಲು ನುಗ್ಗುತ್ತಿದ್ದರು. ಆದರೆ ಬಾಬಾ ನೇರವಾಗಿ ಲೇಖಕನ ಎದುರಿಗೆ ಬಂದು ನಿಂತರು. ಎಷ್ಟು ಹತ್ತಿರ ಎಂದರೆ, ಲೇಖಕನಿಗೆ ಅವರ ದೇಹದ ಎಡಭಾಗ ತಗುಲುವಷ್ಟು. ಆ ವೇಳೆಗಾಗಲೇ ಲೇಖಕನ ತಜ್ಞ ದೃಷ್ಟಿಯು ಬಾಬಾ ಅವರು ಧರಿಸಿದ ಗೌನನ್ನು ಸೂಕ್ಷ್ಮವಾಗಿ ಗಮನಿಸಿಯಾಗಿತ್ತು. ಅಲ್ಲೇನೂ ಕಂಡು ಹಿಡಿಯುವಂಥದಿರಲಿಲ್ಲ. ಗುಂಪಿನಲ್ಲಿ ಯಾರೋ ಒಬ್ಬರು ವಿಭೂತಿ ಪ್ರಸಾದವನ್ನು ಕೇಳಿದರು. ಲೇಖಕನು ಕಾಯುತ್ತಿದ್ದ ಗಳಿಗೆ ಇದೇ. ಬಾಬಾ ತಮ್ಮ ಬಲತೋಳಿನ ಗೌನಿನ ತುದಿಯನ್ನು ಮೇಲಕ್ಕೆ ಸರಿಸಿದರು, ಹಾಗೆ ಮಾಡುವಾಗ ಬಲಗೈಯನ್ನು ತಿರುಗಿಸಿದರು. ಆ ಕೈ ತಟಕ್ಕನೆ ನಾಲ್ಕೈದು ಸುತ್ತು ವೃತ್ತಾಕಾರದಲ್ಲಿ ಚಲಿಸಿತು, ಕೈ ಬೆರಳುಗಳ ತುದಿಯಲ್ಲಿ ವಿಭೂತಿ ಕಾಣಿಸಿತು. ಅದನ್ನು ಹಿಡಿದುಕೊಳ್ಳುವ ಸಲುವಾಗಿ ಭಾಗಶಃ ಬೆರಳುಗಳನ್ನು ಮಡಿಸಿದ್ದರು. ಕೆಲವರಿಗೆ ವಿಭೂತಿಯನ್ನು ಕೊಟ್ಟರು. ಅವರು ಇನ್ನಷ್ಟು ವಿಭೂತಿ ಸೃಷ್ಟಿಸಬಾರದೆ, ಪರೀಕ್ಷೆ ಮಾಡಲು ತನಗೂ ಸ್ವಲ್ಪ ಸಿಕ್ಕಬಹುದಲ್ಲ ಎಂದು ಲೇಖಕನು ಬಯಸಿದನು. ಅದೋ ! ಅಲ್ಲಿ ಮತ್ತೆ ಎರಡನೆಯ ಸಾರಿ ಬಾಬಾ ಅವರ ಕೈ ವೃತ್ತಾಕಾರದಲ್ಲಿ ಚಲಿಸುತ್ತಿದೆ. ಶೂನ್ಯದಿಂದೆಂಬಂತೆ ಮತ್ತಷ್ಟು ವಿಭೂತಿ ಅವರ ಬೆರಳ ತುದಿಗಳಲ್ಲಿ ಕಾಣಿಸಿತು. ಈಗ ಲೇಖಕನು ಕೈ ಚಾಚಿ ಅವರ 'ವಿಸಿಟಿಂಗ್ ಕಾರ್ಡ್' ಅನ್ನು ಪಡೆದನು. ಅದುವರೆಗಿನ ತನ್ನ ಅನುಭವದಿಂದ ವಿಭೂತಿಯನ್ನು ಯಾವುದೇ ಕೈಚಳಕವಾಗಲಿ, ಕಣ್ಣುಕಟ್ಟಾಗಲಿ ಇಲ್ಲದೆ ಸೃಷ್ಟಿಸಲಾಗಿದೆ ಎಂದು ತಕ್ಷಣವೆ ಅವನು ತಿಳಿದುಕೊಂಡನು. ಬಾಬಾ ಅತಿಮಾನುಷ ಶಕ್ತಿಗಳನ್ನು ಪಡೆದಿದ್ದಾರೆ ಎನ್ನುವುದಕ್ಕೆ ಇನ್ನು ಮುಂದೆ ಅವನಿಗೆ ಯಾವ ತಾರ್ಕಣೆಯ ಅಗತ್ಯವೂ ಉಳಿಯಲಿಲ್ಲ. ಈ ಶಕ್ತಿಗಳ ಬಗೆಗೆ ಲೇಖಕನ ಬಳಿ ವಿವರಣೆ ಇರಲಿಲ್ಲ, ಈಗಲೂ ಇಲ್ಲ."

ಹಾಲೆಂಡಿನಿಂದ ಹೊರಡುವ ಯೋಗ ಜರ್ನಲ್‌ನಲ್ಲಿ ಶೆರಾನ್ ವಾರೆನ್ ಬರೆಯುತ್ತಾಳೆ: "ಮಾರನೆಯ ದಿನ ಬೆಳಗ್ಗೆ ಭಜನೆಗೆ ಹೋದಾಗ ನನಗೆ ಕಿರುದಾರಿಯ ಪಕ್ಕದ ಸ್ಥಾನ ದೊರಕಿತು.

ಅಂದು ಬಾಬಾ ಮಹಿಳೆಯರಿದ್ದ ಭಾಗದಲ್ಲಿ ನಡೆದಾಡಿದರು. ನಡುವಣ ಕಿರುದಾರಿಯಲ್ಲಿ ಅವರು ನಡೆಯುತ್ತಾ ನನ್ನ ಪಕ್ಕದಲ್ಲಿ ನಿಂತರು. ಅದೊಂದು ವಿಶಿಷ್ಟ ಗಾಂಭೀರ್ಯದಿಂದ ತಮ್ಮ ಬಲಗೈ ಚಾಲನೆ ಮಾಡಿದರು. ಆ ರೀತಿಯ ಚಲನೆಯೆಂದರೆ ಏನೋ ಸೃಷ್ಟಿಯಾಗುತ್ತದೆಂದೇ ಅರ್ಥ. ಮರುಕ್ಷಣ ಅವರ ಬೆರಳುಗಳ ತುದಿಯಿಂದ ಪವಿತ್ರ ವಿಭೂತಿ ನನ್ನ ಕೈಗೆ ಸುರಿಯಿತು. "ವಿಭೂತಿ... ತಿನ್ನು" ಎಂದರು. ಇಡೀ ಘಟನೆ ಒಂದು ಕನಸಿನಂತಿತ್ತು. ನನ್ನ ಹೃದಯ ಎಷ್ಟುಮಟ್ಟಿಗೆ ಪ್ರೇಮ, ಭಕ್ತಿ, ಕೃತಜ್ಞತೆಗಳಿಂದ ತುಂಬಿ ಹೋಯಿತೆಂದರೆ ಅದು ಉಕ್ಕಿ ಹರಿಯಿತು. ನನಗೆ ಹಿಡಿದಿಟ್ಟುಕೊಳ್ಳುವುದೇ ಸಾಧ್ಯವಾಗಲಿಲ್ಲ. ನನಗೆ ಏನು ಅಗತ್ಯವಿದೆ ಎಂಬುದು ಅವರಿಗೆ ತಿಳಿದಿತ್ತು. ಅದೇ ಉಲ್ಲಾಸಕರವಾಗಿತ್ತು. ಅನೇಕ ಬಗೆಯ ನಂಟಸ್ತಿಕೆಗಳಿಂದ ನಾನು ಜೀವನದುದ್ದಕ್ಕೂ ಪ್ರೀತಿಯನ್ನು ಪಡೆದಿದ್ದೇನೆ, ಆದರೆ ಈಗ ನಾನು ಅನುಭವಿಸಿದ ದಿವ್ಯ ಪ್ರೇಮಕ್ಕೆ ಅದು ಯಾವುದೂ ಸರಿಗಟ್ಟಲಾರದು. ಅದು ನನಗೆ ತಿಳಿದಿರುವ ಯಾವುದೇ ಮಾನವೀಯ ಸಂಬಂಧವನ್ನು ಮೀರಿಸಿದ್ದಾಗಿತ್ತು."

## ನಾನು ಮತ್ತು ನೀನು

ವಸ್ತುವನ್ನು ಕರ್ತೃವಿನ ಕಡೆಗೆ ಸೆಳೆಯುವ ಆಕರ್ಷಣೆ, ಅವರ ವ್ಯೂಹಯುಕ್ತಿಯ ಒಂದು ಚಾಲನೆ ಎಂದು ಹೇಳಬಹುದು. ವಿವೇಕಾನಂದರು ಹೇಳಿದರು. "ಭಗವಂತನು ಕರ್ತೃ ಮತ್ತು ಕರ್ಮ ಎರಡೂ ಆಗಿದ್ದಾನೆ. ಅವನೇ ನಾನು ಮತ್ತು ನೀನು (ತ್ವಮ್ ಮತ್ತು ತತ್). ಆದ್ದರಿಂದ ಜ್ಞಾತೃವನ್ನು ನಾವು ತಿಳಿದುಕೊಳ್ಳುವುದು ಹೇಗೆ ? ತಿಳಿದುಕೊಳ್ಳುವವನು ತನ್ನನ್ನೇ ತಾನು ತಿಳಿದುಕೊಳ್ಳಲಾರನು. ಆತ್ಮ, ಜ್ಞಾತೃ, ಅಸ್ತಿತ್ವದಲ್ಲಿರುವ ಸಕಲಕ್ಕೂ ಪ್ರಭುವಾದವನು ಚಾಕ್ಷುಷ ಸಮಸ್ತದ, ಅಂದರೆ ಈ ವಿಶ್ವದ ಕಾರಣವಾಗಿದ್ದಾನೆ. ಆದರೆ ಅವನಿಗೆ ತನ್ನನ್ನೇ ನೋಡಲು ಸಾಧ್ಯವಿಲ್ಲ ; ಪ್ರತಿಬಿಂಬವೊಂದರ ಮೂಲಕವಾಗಿ ಹೊರತು ತಿಳಿದುಕೊಳ್ಳಲು ಸಾಧ್ಯವಿಲ್ಲ. ಕನ್ನಡಿಯಿಲ್ಲದೆ ನಿಮ್ಮ ಮುಖವನ್ನು ನೀವು ನೋಡಿಕೊಳ್ಳಲಾರಿರಿ. ಹಾಗೆಯೇ ಪ್ರತಿಬಿಂಬಿಸಿದ ಹೊರತು ಆತ್ಮವು ತನ್ನ ಸ್ವರೂಪವನ್ನು ತಾನು ನೋಡಿಕೊಳ್ಳಲಾರನು... ಆ ಸತ್ತಿನ (ಸತ್) ಅತ್ಯುತ್ತಮ ಪ್ರತಿಬಿಂಬವೇ ಪರಿಪೂರ್ಣ ಮಾನವ, ಅವತಾರ ಪುರುಷ ; ಅವನೂ ಕರ್ತೃ-ಕರ್ಮ ಎರಡೂ ಆಗಿರುವವನು. ಯಾವ ಬಲಾತ್ಕಾರವೂ ಇಲ್ಲದೆ, ಹುಟ್ಟರಿವೆಂಬಂತೆ ಅವತಾರಗಳನ್ನು ಎಲ್ಲ ದೇಶಗಳಲ್ಲೂ ಯಾಕೆ ಪೂಜಿಸುತ್ತಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು. ಅವರು ನಿತ್ಯಾತ್ಮನ ಅತ್ಯಂತ ಪರಿಪೂರ್ಣ ಪ್ರಕಟ ರೂಪಗಳು. ಆದ್ದರಿಂದಲೇ ಕ್ರಿಸ್ತ, ಬುದ್ಧ ಮೊದಲಾದ ಅವತಾರ ಪುರುಷರನ್ನು ಜನರು ಪೂಜಿಸುವುದು."

ನಾವು ಸತ್ಯಂ, ಶಿವಂ ಮತ್ತು ಸುಂದರಂ ಆಗಿದ್ದೇವೆ. ಆಳವು ಆಳವನ್ನು ಆಕರ್ಷಿಸುತ್ತದೆ ; ಆಗಸವು ಆಗಸಕ್ಕೆ ಪ್ರತಿಕ್ರಿಯಿಸುತ್ತದೆ. ಸತ್ಯಂ ಶಿವಂ ಸುಂದರಂನ ಅತ್ಯಂತ ಭವ್ಯ ಪ್ರಕಟಿತ ರೂಪವಾದ ಬಾಬಾ ಅವರಲ್ಲಿ ನಾವು ಅತ್ಯುತ್ತಮ ರೀತಿಯಲ್ಲಿ ಪ್ರತಿಫಲನಗೊಳ್ಳುತ್ತೇವೆ. ನಮ್ಮನ್ನೇ ನಾವು ಮರೆತು ಮಿಥ್ಯೆಯ, ದುರ್ಗುಣಗಳ ಗೊಂಡಾರಣ್ಯದಲ್ಲಿ, ಅಲೆದಾಡುತ್ತಿರುವಾಗ ಅವರು ಬರುತ್ತಾರೆ, ನಮ್ಮ ನಿಜವಾದ ವೈಭವವನ್ನು ಅವರಲ್ಲಿ ಮೂರ್ತಿವಂತರಾಗಿ ಕಾಣಲು ಅನುವಾಗಲೆಂದು ಬರುತ್ತಾರೆ.

ಎಡ್‌ಪ್ಲ್ಯೂರ್ ಬರೆಯುತ್ತಾರೆ, "ಬಾಬಾ ಅವರ ಜೀವನ ಮಾನವ ಜನಾಂಗದ ಉನ್ನತಿಗಾಗಿ, ನಮ್ಮ ಆಧ್ಯಾತ್ಮಿಕ ಪರಂಪರೆಯ ಕಡೆಗೆ ನಾವು ಜಾಗೃತಗೊಳ್ಳುವಂತೆ ಮಾಡುವುದಕ್ಕಾಗಿ, ಹಾಗೂ ನಮ್ಮಲ್ಲಿ ಶ್ರದ್ಧೆಯನ್ನು ಸ್ಥೈರ್ಯವನ್ನು ತುಂಬುವ ಸಲುವಾಗಿ ಮೀಸಲಾಗಿದೆ. ನಾವು ಬಾಬಾ ಅವರ ಜೊತೆ ಇದ್ದದ್ದು ಬಹಳ ಉನ್ನತಿಕರವಾಗಿತ್ತು. ಪ್ರೇಮವೇ ಅವರ ಅತಿದೊಡ್ಡ ಪವಾಡ. ಬೆಳಗಿನಿಂದ ರಾತ್ರಿಯವರೆಗೆ ಬಾಬಾ ಇತರರಿಗೆ ಕೊಡುತ್ತಿರುತ್ತಾರೆ, ಇತರರಿಗೆ ನೆರವಾಗುತ್ತಿರುತ್ತಾರೆ. ನಾವು ಆಶ್ರಮವನ್ನು ಬಿಟ್ಟು ಬಾಬಾ ಅವರ ಬಳಿಗೆ ಹೊರಟ ಸಮಯದಲ್ಲಿ ಮಹಾರಾಜ್‌ಜೀ ವಿಚಾರಮಾಡುತ್ತಾ ನಿಂತಿದ್ದರು. ಕೊನೆಗೆ ಬಾಬಾ ನಮಗೆ ಹೋಗಲು ಅನುಮತಿ ನೀಡಿದಾಗ ಈ ಮಾತುಗಳಿಂದ ನಮ್ಮನ್ನು ಆಶೀರ್ವದಿಸಿದರು : "ಭಗವಂತನೊಂದಿಗೆ ಮಿತ್ರರಾಗಿರಿ." ನಿಜವಾಗಿಯೂ ಇದು ಹೊಸ ಬಗೆಯ ಆಶೀರ್ವಾದ ಭಗವಂತನೊಂದಿಗೆ ಗೆಳೆತನ.

"ನಾನು ಮಹಾರಾಜಜೀ ಅವರ ಬಳಿಗೆ ಹಿಂದಿರುಗಿದಾಗ ಅವರು ನನಗೆ ಒಂದು ಹಿಂದೂ ಹೆಸರನ್ನು ಹೇಳಿದರು. ಅದು ಶ್ರೀಕೃಷ್ಣನ ಗೆಳೆಯ, ಸಹಪಾಠಿ, ಜೊತೆಗಾರ ಸುದಾಮನ ಹೆಸರು. ಹೀಗೆ ನಾನು ಭಗವಂತನ ನಿರಂತರ ಸನ್ನಿಧಿಯನ್ನು ನನ್ನ ಗೆಳೆಯನಂತೆ ಸದಾ ಪರಿಭಾವಿಸುತ್ತಿರಬೇಕು." ಬಾಬಾ ಅವರ ಈ ಸೂಚನೆ, ಹಿಮಾಲಯದ ಸಾಧುವು ಅದನ್ನು ಸ್ಥಿರಪಡಿಸಿದ್ದು, ನೀವು ಈಗಾಗಲೇ ಒಪ್ಪಿಕೊಂಡು ಆರಾಧಿಸುತ್ತಿರುವ ಭಗವದ್ರೂಪವನ್ನು ತೊರೆಯಬೇಕೆಂದು ಬಾಬಾ ಖಂಡಿತವಾಗಿಯೂ ಬಯಸುವುದಿಲ್ಲ ಎಂಬುದನ್ನು. ಎಡ್‌ನಿಗೆ ಬಾಬಾ ತಾವೇ ಹೊಸ ಹೆಸರು ಕೊಡಬಹುದಾಗಿತ್ತು. ಆದರೆ ಅವನು ತಾನು ಕಂಡುಕೊಂಡ ಗುರುವಿನ ಬಳಿಗೆ ಹಿಂದಿರುಗುವಂತೆ ಪ್ರೋತ್ಸಾಹಿಸಿದರು. 'ಗೆಳೆಯನಂತೆ ವರ್ತಿಸುವುದೇ' ಆತನಿಗೆ ಸರಿಯಾದ ಸಾಧನಾ ಮಾರ್ಗವೆಂದು ಬಲ್ಲರಾಗಿದ್ದುದರಿಂದ ಮಹಾರಾಜಜೀ ಅವರು ಆರಿಸಿದ ಹೆಸರು ಸುದಾಮ ಎಂಬುದಾಗಿರುವಂತೆ ನೋಡಿಕೊಂಡರು. ಭಕ್ತಿಯನ್ನು ಕುರಿತು ಶಾಸ್ತ್ರ ಗ್ರಂಥಗಳು ಉಲ್ಲೇಖಿಸಿರುವ ಒಂಬತ್ತು ಮಾರ್ಗಗಳಲ್ಲಿ ಸಖ್ಯ (ಗೆಳೆತನ)ವೂ ಒಂದು. ಕೊಟ್ಟಕೊನೆಯದಾದ ಆತ್ಮ ನಿವೇದನದ ಹಿಂದಿನದು.

## ಕಾರ್ಯವಿಧಾನ

ಒಮ್ಮೆ ಬಾಬಾ ಅವರನ್ನು ಅವರ 'ಕಾರ್ಯವಿಧಾನ' ಯಾವುದು ಎಂದು ಕೇಳಿದಾಗ ಅವರು ನುಡಿದರು" "ಅಂಗೀಕೃತವಾದ, ಸಾಂಸ್ಥಿಕವಾದ ಅರ್ಥದಲ್ಲಿ ನನಗೆ ಯಾವ ಕಾರ್ಯವಿಧಾನ ಅಥವಾ ಸಾಧನ ಅಥವಾ ಹಂಚಿಕೆ ಇಲ್ಲ. ನಾನು ಕೆಲಸ ಮಾಡುವುದು ಅತ್ಯಂತ ಸರಳವಾದ ವಿಧಾನದಲ್ಲಿ; ಅದು ಪ್ರೇಮದಿಂದ ಪರಿವರ್ತನೆಗೊಳಿಸುವ ವಿಧಾನ. ಮಾನವ ಸಹಕಾರ ಮತ್ತು ಸೋದರಿಕೆಗಳೇ ನನ್ನ ಯಾಂತ್ರಿಕ ಸಲಕರಣೆಗಳು. ಪ್ರೇಮವೇ ನನ್ನ ಸಲಕರಣೆ, ಮತ್ತು ನನ್ನ ವ್ಯಾಪಾರದ ಸರಕು." ತಮ್ಮನ್ನು ಅತ್ಯುತ್ತಮವಾಗಿ ವರ್ಣಿಸಬೇಕಾದರೆ ಪ್ರೇಮಸ್ವರೂಪ ಎಂದು ವರ್ಣಿಸಬಹುದು ಎಂದು ಅವರು ಹೇಳುತ್ತಾರೆ. 'ಪವಾಡಗಳು' ಎಂದು ಯಾವುದನ್ನು ಕರೆಯುತ್ತೇವೋ ಅವೆಲ್ಲ ಮೂಲಭೂತವಾಗಿ ಅದೇ ಪ್ರೇಮದ ಅಭಿವ್ಯಕ್ತಿಗಳು. ಈ ಪ್ರೇಮವೇ ಅವರನ್ನು ಪ್ರತಿಯೊಬ್ಬ ಸಾಧಕನೊಂದಿಗೆ ಅವನಿಗೆ ಅರ್ಥವಾಗುವ ಭಾಷೆಯಲ್ಲಿ ಮಾತನಾಡುವಂತೆ ಪ್ರೇರಿಸುತ್ತದೆ. ಪೂರ್ವ ಆಫ್ರಿಕದಲ್ಲಿ ಸ್ವಾಹಿಲಿ

ಅಲಾಂಗ್ ಆದಿವಾಸಿಗಳೊಂದಿಗೆ ಆಡಿ ಇತ್ಯಾದಿ. ಮಾನವನ ದೈಹಿಕ ಮತ್ತು ಮಾನಸಿಕ ಗಾಯಗಳನ್ನು ವಾಸಿಮಾಡುವಂತೆ ಅವರನ್ನು ಪ್ರಚೋದಿಸುವುದೂ ಅದೇ ಪ್ರೇಮವೇ. ಅದು ನಮ್ಮ ಹೃದಯಗಳಲ್ಲಿ ತುಂಬಿರುವ ಕತ್ತಲನ್ನು ತೊಲಗಿಸಿ ಬೆಳಗುತ್ತದೆ, ನಮ್ಮ ಅಭ್ಯಾಸಗಳಲ್ಲಿ ಮನೋಧರ್ಮಗಳಲ್ಲಿ ಇರುವ ಡೊಂಕನ್ನು ತಿದ್ದುತ್ತದೆ. ಬಹಳಕಾಲದಿಂದ ಬೇರು ಬಿಟ್ಟಿದ್ದ ಕಾಯಿಲೆಗಳನ್ನು ಪವಾಡಸದೃಶವಾಗಿ ಗುಣಪಡಿಸುವುದು, ಅಸಂಖ್ಯಾತ ಅಪಘಾತಗಳಲ್ಲಿ ಮತ್ತು ಗಂಡಾಂತರಗಳಲ್ಲಿ ಜೀವವನ್ನು ಉಳಿಸುವುದು ಇವೆಲ್ಲ ಅವರ ದಿವ್ಯ ಪ್ರೇಮದ ದಿವ್ಯ ಅಭಿವ್ಯಕ್ತಿಗಳು.

ಶ್ರದ್ಧೆಯನ್ನು ಉದ್ದೀಪಿಸುವ ಸಲುವಾಗಿ ಅವರು ಪವಿತ್ರ ವಿಭೂತಿಯನ್ನು ಸೃಷ್ಟಿಸಿ ಕೊಡುತ್ತಾರೆ. ಧರಿಸಿದವನನ್ನು ರಕ್ಷಿಸುವ ಸಲುವಾಗಿ ಉಂಗುರ, ಲಾಕೆಟ್, ಮುಂತಾದ ಉಡುಗೊರೆಗಳನ್ನು ಕೊಡುತ್ತಾರೆ. ಉಕ್ಕಿ ಬಂದ ಕರುಣೆ ಮತ್ತು ಪ್ರೇಮಗಳಿಂದಾಗಿ ಅವರು ಹೀಗೆ ಮಾಡುತ್ತಾರೆ. 'ಭಗವಂತನಲ್ಲಿಗೆ ಪಯಣ' (Journey to God) ಎಂಬ ಪುಸ್ತಕದ ಕೃರ್ತವಾದ ಮಲೇಶಿಯದ ಭಕ್ತ ಜೆ ಜಗದೀಶನ್ ಹೀಗೆ ಬರೆಯುತ್ತಾರೆ: "ಎಲ್ಲಕ್ಕಿಂತ ಬಹುದೊಡ್ಡ ಪವಾಡವೆಂದರೆ, ಲೆಕ್ಕಕ್ಕೆ ಸಿಕ್ಕದಷ್ಟು ಜನ ಸ್ತ್ರೀ ಪುರುಷರ ಹೃದಯಗಳನ್ನು ಪರಿವರ್ತನೆ ಮಾಡಿರುವುದು. ಅವರ ಸತ್ಪಥದಲ್ಲಿ, ದಿವ್ಯ ಪಥದಲ್ಲಿ ನಡೆಯುವಂತೆ ಮಾಡಿರುವುದು. ನಿರೀಶ್ವರವಾದಿಗಳು ಈಗ ಭಗವಂತನ ಗುಣಗಾನ ಮಾಡುತ್ತಾರೆ; ಕುಡುಕರು ಮದ್ಯ ತುಂಬಿದ ಸೀಸೆಯನ್ನು ಹುಡುಕುವುದು ಬಿಟ್ಟು ಮಾನವನ ಅಂತರ್ಯದಲ್ಲಿರುವ ದಿವ್ಯಾತ್ಮವನ್ನು ಹುಡುಕುತ್ತಾರೆ; ಮಾದಕ ವಸ್ತುವಿನ ಚಟಕ್ಕೆ ತುತ್ತಾದವರು ಈ ಆಧುನಿಕ ಜಗತ್ತಿನ ಪೀಡೆಯಲ್ಲಿ ಕ್ಷಣಿಕ ಶಾಂತಿಯನ್ನು ಅರಸುವುದಕ್ಕೆ ಬದಲಾಗಿ ಭಗವಂತ ಮಾತ್ರವೇ ನೀಡಬಲ್ಲ ಶಾಶ್ವತ ಶಾಂತಿ, ಆನಂದಗಳನ್ನು ಅರಸುತ್ತಾರೆ; ಕೇವಲ ಯಾಂತ್ರಿಕವಾಗಿ ಅಭ್ಯಾಸ ಬಲದಿಂದ ಪ್ರಾರ್ಥನೆ ಮಾಡುತ್ತಿದ್ದ ಮಿಲಿಯಗಟ್ಟಲೆ ಸಾಮಾನ್ಯ ಜನರು ಈಗ ಹೊಸ ಅರ್ಥವನ್ನು ಕಂಡುಕೊಂಡಿದ್ದಾರೆ, ತಮ್ಮ ಪ್ರಾರ್ಥನೆಗಳಿಗೆ ನೂತನ ಆಯಾಮಗಳನ್ನು ಸೇರಿಸಿದ್ದಾರೆ- ಅವರು ಯಾರನ್ನೇ ಕುರಿತು ಪ್ರಾರ್ಥಿಸಲಿ, ಅಥವಾ ಯಾವ ಮತಕ್ಕೇ ಸೇರಿದವರಾಗಿರಲಿ. ಏಕೆಂದರೆ ಅವರಿಗೀಗ ಚೆನ್ನಾಗಿ ಮನದಟ್ಟಾಗಿದೆ- ಭಗವಂತ ಇದ್ದಾನೆ; ಭಕ್ತಿಯ ಮೂಲಕ, ಸತ್ಯ ಧರ್ಮ ಶಾಂತಿ ಪ್ರೇಮಗಳ ಮೂಲಕ ಅವರ ಕೃಪೆಯನ್ನು ಗಳಿಸಬಹುದು; ಅವಕ್ಕಿಂತ ಮಿಗಿಲಾಗಿ ಇತರರಿಗೆ, ಜನಾಂಗ ಧರ್ಮ ಜಾತಿ ಬಣ್ಣ ಮೊದಲಾದ ಯಾವ ವಿವಕ್ಷೆಯೂ ಇಲ್ಲದೆ, ಯಾವುದೇ ಪ್ರತಿಫಲದ ಆಸೆಯೂ ಇಲ್ಲದೆ ನಿಸ್ವಾರ್ಥವಾಗಿ ಸೇವೆ ಸಲ್ಲಿಸುವುದರ ಮೂಲಕ ಅದನ್ನು ಸಂಪಾದಿಸಬಹುದು." ಭಗವಂತನ ಅಗತ್ಯ ಇರುವ ಎಲ್ಲರಲ್ಲೂ (ಯಾರಿಗೆ ಬೇಡ?) ಅವರು ಬಿತ್ತುವ ಪ್ರೇಮವು ವಿನಯ, ಗೌರವ, ಔದಾರ್ಯ, ಸೋದರಿಕೆ ಸ್ವಾತಂತ್ರ್ಯ ಮೊದಲಾದ ಗುಣಗಳ ಸಮೃದ್ಧ ಬೆಳಸನ್ನು ನೀಡುತ್ತದೆ.

## ಸೋದರ ಬಂಧುವು ಮನಸ್ಸು ಕಳೆದುಕೊಂಡದ್ದು

ಸ್ಯಾಂಡ್‌ವಿಸ್ ತಮ್ಮ ಸೋದರ ಸಂಬಂಧಿಯ ಬಗೆಗೆ ಹೇಳುತ್ತಾರೆ. ಆತನ ಹೆಸರು ಜೆರ್ರಿ. ಅಮೆರಿಕದ ಪೂರ್ವದೇಶಗಳಲ್ಲಿ ಗಣಿತ ವಿಜ್ಞಾನದ ಪ್ರಾಧ್ಯಾಪಕನಾಗಿದ್ದನು. "ವಿಷಯವನ್ನು ಪೂರ್ತಿ ಗಣಿತೀಯವಾಗಿ ವಿಶ್ಲೇಷಣೆ ಮಾಡಿ ನೋಡಿದರೆ ಅವತಾರ ಪುರುಷನೊಬ್ಬನು ಈಗ ಇರಬಹುದಾದ

ಸಾಧ್ಯತೆಯಿದೆ ಎಂದು ಜೆರ್ರಿ ಭಾವಿಸಿದನು. ಬಾಬಾ ಅವರ ದರ್ಶನ ಪಡೆಯಲು ಹೋಗುತ್ತಿದ್ದ ಒಂದು ತಂಡದಲ್ಲಿ ಅವನೂ ಸೇರಿಕೊಂಡನು.... ಮೊದಲನೆಯ ಸಂದರ್ಶನದಲ್ಲಿ ನನ್ನ ದಾಯಾದಿಯು ತನಗಾಗಿ ಬಾಬಾ ಏನನ್ನಾದರೂ ಸೃಷ್ಟಿಸಿಕೊಡಬೇಕೆಂದು ಕೇಳಿದರು. ಗ್ರೀಸಿನಲ್ಲಿ ಅವನು ತುಂಬಾ ಅಗ್ಗದ ಬೆಲೆಯ ಒಂದು ಉಂಗುರವನ್ನು ಕೊಂಡಿದ್ದನು. ಕೈಯ ಕಿರುಬೆರಳಿಗೆ ಅದನ್ನು ತೊಟ್ಟುಕೊಂಡಿದ್ದನು. ಈ ಉಂಗುರವನ್ನು ಬಾಬಾ ಬೇರೆ ಏನಾದರೂ ಆಗಿ ಪರಿವರ್ತಿಸಲಿ ಎಂದು ಬಯಸಿದನು. ಬಾಬಾ ಒಪ್ಪಲಿಲ್ಲ. ಜೆರ್ರಿಗೆ ತಾನು ಸೋತು ಹೋದಂತಾಯಿತು. ತನ್ನ ವಿವೇಕವನ್ನು ತಾನೇ ಪರೀಕ್ಷಿಸಿಕೊಳ್ಳತೊಡಗಿದನು.... ಬಾಬಾ ಮಾರನೆಯ ದಿನ ಅವನನ್ನು ಮಾತ್ರ ಸಂದರ್ಶನಕ್ಕೆ ಕರೆದರು. ಆ ಕೋಣೆಯಿಂದ ಹೊರ ಬಂದಾಗ ಜೆರ್ರಿ ಆನಂದದಿಂದ ಬೀಗುತ್ತಿದ್ದನು. ಮತ್ತೆ ಆ ಉಂಗುರವನ್ನು ಬೆರಳಿನಿಂದ ತೆಗೆದು ಹಿಡಿದುಕೊಂಡು ಇದನ್ನು ಬೇರೆ ಏನಾದರೂ ಆಗಿ ಪರಿವರ್ತಿಸಿ ಎಂದು ಬೇಡಿಕೊಂಡನಂತೆ. ಇವನು ಮತ್ತೆ ಮತ್ತೆ ಬೇಡುತ್ತಲೇ ಹೋದನು. ಕೊನೆಗೆ ಬಾಬಾ ಆ ಉಂಗುರವನ್ನು ತಮ್ಮ ಕೈಗೆ ತೆಗೆದುಕೊಂಡು ಅದರ ಮೇಲೆ ಊದಿ ಬೇರೆಯೇ ಉಂಗುರವನ್ನು ಜೆರ್ರಿಯ ಕೈಗೆ ಕೊಟ್ಟರಂತೆ. ಅದು ಕರಾರುವಾಕ್ಕಾಗಿ ಅವರ ಬೆರಳಿಗೆ ಹೊಂದಿಕೊಂಡಿತು. ಈ ಘಟನೆ ಅವನನ್ನು ಅಲುಗಾಡಿಸಿ ಬಿಟ್ಟಿತು. ಬಾಬಾ ಅವರೊಂದಿಗೆ ಇದ್ದ ಕೆಲವು ನಿಮಿಷಗಳಲ್ಲಿ ಅವರು ಇವನ ಹೃದಯವನ್ನು ಪರಿವರ್ತಿಸಿದ ರೀತಿ ನಿಜವಾಗಿ ಬಹುದೊಡ್ಡ ಪವಾಡವೇ ಆಗಿತ್ತು. ಗುಂಪಿನ ಯಾರೋ ಒಬ್ಬ ಹೆಂಗಸು ಯಾರಾದರೂ ನನ್ನ ಚೀಲ ಹಿಡಿದು ತಂದುಕೊಡಿ ಎಂದು ಕೇಳಿಕೊಂಡಳಂತೆ. ತಟಕ್ಕನೆ ಆ ಕೆಲಸಕ್ಕೆ ಜೆರ್ರಿ ಮುಂದಾದನು. 'ಎಂದೂ ನಾನು ಇಂತಹ ಕೆಲಸ ಮಾಡಿರಲಿಲ್ಲ' ಅವನು ನುಡಿದನು. 'ನನ್ನ ಮನಸ್ಸನ್ನೇ ನಾನು ಕಳೆದುಕೊಳ್ಳುತ್ತಿರಬೇಕು.'.

ಮನೋಜಯವೆನ್ನುವುದು ಅನೇಕ ವರ್ಷಗಳ ಯೋಗ ಸಾಧನೆಯ ಪರಿಣಾಮವಾಗಿ ಲಭ್ಯವಾಗುವಂಥದು. ಬಾಬಾ ಹೇಳುತ್ತಾರೆ : "ನೀವು ನಿಮ್ಮ ಅಹಂಕಾರದಲ್ಲಿ, ಬಂದಿಯಾಗಿದ್ದೀರಿ. ಈ ಬಂಧನದಿಂದ ಬೇಗ ಮತ್ತು ಸುರಕ್ಷಿತವಾಗಿ ಬಿಡುಗಡೆ ಹೊಂದಲು ನೀವು ಪ್ರಯತ್ನಿಸುವುದು ಅತ್ಯಗತ್ಯವಾಗಿದ್ದರೂ ಆ ಬಿಡುಗಡೆಗೆ ಬೇಕಾದ ಕೀಲಿ ಕೈಯನ್ನು ನನ್ನಿಂದ ಕೇಳಿ ಪಡೆದುಕೊಳ್ಳಲು ನಿಮ್ಮಲ್ಲಿ ಬಹುತೇಕ ಜನರಿಗೆ ಅಪೇಕ್ಷೆಯೇ ಇಲ್ಲ. ನೀವು ನನ್ನ ಬಳಿಗೆ ಬಂದು ಎಂತೆಂಥದೋ ಚೂರುಪಾರುಗಳನ್ನು ಕೇಳುತ್ತೀರಿ. ರೋಗ ಗುಣಪಡಿಸು, ಅದು ಇದು ಕೊಡು ಎಂದು ಕೇಳುತ್ತೀರಿ. ನಿಮಗೆ ಏನನ್ನು ಕೊಡುವುದಕ್ಕಾಗಿ ನಾನು ಬಂದಿದ್ದೇನೆಯೋ ಅದನ್ನು, ಮೋಕ್ಷವನ್ನೇ, ಕೇಳುವವರು ಎಲ್ಲೋ ಕೆಲವೇ ಜನ. ಮೋಕ್ಷವನ್ನು ಬಯಸುವ ಕೆಲವೇ ಜನರಲ್ಲೂ ಅಲ್ಪ ಸಂಖ್ಯೆಯವರು ಸಾಧನಾ ಪಥವನ್ನು ಪ್ರಾಮಾಣಿಕವಾಗಿ ಹಿಡಿಯುತ್ತಾರೆ. ಅವರಲ್ಲಿ ಬೆರಳೆಣಿಕೆಯಷ್ಟು ಮಂದಿ ಯಶಸ್ಸು ಗಳಿಸುತ್ತಾರೆ". ಜೆರ್ರಿಯ ಬಾಬಾ ಅವರನ್ನು ಸಂಧಿಸಿದ ಮೇಲೆ ಅಹಂಕಾರದ ಬಂದೀಖಾನೆಯಿಂದ ಬಿಡುಗಡೆ ಪಡೆಯುವಲ್ಲಿ ಮೊದಲ ಹೆಜ್ಜೆಯಿಟ್ಟನು.

ಡಾ. ಧೈರ್ಯಂ ಬರೆಯುತ್ತಾರೆ : "ಇಂದು ಜಗತ್ತಿನ ಅತಿ ಸಂದಿಗ್ಧವಾದ ಸಂದರ್ಭ. ಇಲ್ಲಿ ಭಗವಾನರ ಕೃಪೆ ಖಂಡಿತವಾಗಿಯೂ ಶಕ್ತಿಶಾಲಿಯಾಗಿ ಪರಿಣಾಮಕಾರಕವಾಗಿ ಕೆಲಸ ಮಾಡುತ್ತದೆ. ಜಗತ್ತಿನ ಜನರು ಸಾಧನಾ [illegible] ವಿವಿಧ ಚಿಂತೆಗಳಲ್ಲಿದ್ದಾರೆ. ಅವರಲ್ಲಿ ಭಗವತ್ಕರುಣೆ

ಮಹತ್ತರವಾದ ಪರಿವರ್ತನೆಯನ್ನುಂಟುಮಾಡುತ್ತದೆ. ಹಾಗೆ ಪರಿವರ್ತನೆ ಹೊಂದಿದವರಲ್ಲಿ ನಾಸ್ತಿಕರಿದ್ದಾರೆ, ಪಲಾಯನವಾದಿಗಳಿದ್ದಾರೆ, ಮಾದಕ ವ್ಯಸನಿಗಳಿದ್ದಾರೆ, ನಿರೀಶ್ವರವಾದಿಗಳಿದ್ದಾರೆ ; ಹಾಗೆಯೇ ಬಹಳ ಎತ್ತರಕ್ಕೆ ಏರಿದ ಸಾಧಕರಿದ್ದಾರೆ, ಬಹು ಪ್ರುತರಾದ ವೈದಿಕ ವಿದ್ವಾಂಸರಿದ್ದಾರೆ, ಪ್ರಸಿದ್ಧ ವಿಜ್ಞಾನಿಗಳಿದ್ದಾರೆ, ಕಲಾವಿದರು, ಕವಿಗಳು ಮತ್ತು ಪಂಡಿತರಿದ್ದಾರೆ ; ಅಷ್ಟೇ ಮಟ್ಟಿಗೆ ಸರಳರಾದ, ಭಗವಾನರ ದಿವ್ಯೋಪನ್ಯಾಸಗಳನ್ನು ಕೇಳಿ ಸುಖಿಸುವ ಸಾಮಾನ್ಯ ಜನರೂ ಇದ್ದಾರೆ. ಭಗವಾನರು ಈ ಎಲ್ಲರನ್ನೂ ಪ್ರೀತಿಯಿಂದ ಸ್ವೀಕರಿಸುತ್ತಾರೆ, ತಮ್ಮ ಮಕ್ಕಳೆಂಬಂತೆ ಸ್ವಾಗತಿಸುತ್ತಾರೆ. ಅವರು ದಯಾಮಯರು, ಪಾಪಿಯನ್ನು ಕುರಿತು ಸಹಾನುಭೂತಿ, ನೊಂದವರ ಪಾಲಿಗೆ ಸಾಂತ್ವನ, ಸಂದೇಹಿಗೆ ಮತ್ತು ಗೊಂದಲಕ್ಕೊಳಗಾದವನಿಗೆ ದಾರಿ ದೀಪ. ಅವರು ಕೈ ಹಿಡಿದು ಬೆಳಕಿನ ವಲಯಕ್ಕೆ ನಡೆಸಿಕೊಂಡು ಹೋಗುತ್ತಾರೆ."

## ಸ್ವಪ್ನಗಳಲ್ಲಿ ಜಾಗೃತಿ

ಸಾಯಿ ವ್ಯೂಹದಲ್ಲಿ ಕನಸುಗಳಿಗೂ ಸ್ಥಾನವಿದೆ. ಅವರ ಬಗೆಗೆ ಏನೇನೂ ತಿಳಿದಿರದವರ ಸ್ವಪ್ನದಲ್ಲಿ ಕಾಣಿಸಿಕೊಂಡು ಅವರನ್ನು ತಮ್ಮತ್ತ ಸೆಳೆದಿದ್ದಾರೆ. ಕರೆನ್ ಫ್ರಾಮರ್ ಬ್ಲಾಂಕ್‌ಗೆ ಒಂದು ರಾತ್ರಿ ಕನಸು ಬಿತ್ತು. ಪೊದರುಗೂದಲಿನ ಒಬ್ಬ ವ್ಯಕ್ತಿ ಕಾಣಿಸಿಕೊಂಡು "ನಿನ್ನ ಹಿಲ್ಡಾ ಜೊತೆಯಲ್ಲಿರು" ಎಂದು ಹೇಳಿದರು. "ಹಿಲ್ಡಾ...ಯಾರದು ?" ಅವಳಿಗೆ ಆಶ್ಚರ್ಯವಾಯಿತು. ಐದು ವರ್ಷಗಳ ನಂತರ ಬಾಬಾ ಅವರ ಭಕ್ತೆಯಾಗಿದ್ದ ಹಿಲ್ಡಾ ಚಾರ್ಲ್ಸ್‌ಟನ್ ಪರಿಚಯವಾಯಿತು. ಇದು ಅವಳ ವ್ಯಕ್ತಿತ್ವದಲ್ಲಿ ಪರಿವರ್ತನೆ ಉಂಟುಮಾಡಿತು. ಈಗ ಆಕೆ "ಡಿಯರ್ ಹಿಲ್ಡಾ !" ಎಂಬ ಒಂದು ಪುಸ್ತಕ ಬರೆದಿದ್ದಾಳೆ.

ಕ್ಯಾಲಿಫೋರ್ನಿಯ ಇನ್‌ಸ್ಟಿಟ್ಯೂಟ್ ಆಫ್ ಏಷಿಯನ್ ಸ್ಟಡೀಸ್ ಸಂಸ್ಥೆಯ ಜಾನ್ ಫೆಂಡರ್‌ಗಾಸ್ಟ್, 'ಸ್ವಾಮಿ ಡ್ರೀಮ್ಸ್' ಎಂಬ ಒಂದು ಲೇಖನ ಬರೆದಿದ್ದಾರೆ. ಅದರಲ್ಲಿ ಸ್ವಾಮಿಯು ಕಾಣಿಸಿಕೊಳ್ಳುವ ಸ್ವಪ್ನಗಳ ಅಸಾಮಾನ್ಯ ಪ್ರಕ್ರಿಯೆಗಳಿಗಿಂತ ಮಿಗಿಲಾಗಿ ಅವುಗಳ ಶೈಕ್ಷಣಿಕ ಮೌಲ್ಯ ಎಷ್ಟೆಂಬುದರ ಕಡೆಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. "ಸಾಯಿಬಾಬಾ ಅವರೊಂದಿಗಿನ ಈ ಸ್ವಪ್ನಾನುಭವಗಳ ಒಟ್ಟಾರೆ ಪ್ರಭಾವ ಎಷ್ಟೆಂಬುದನ್ನು ಅಳತೆ ಮಾಡುವುದು ಕಷ್ಟ. ಆದರೆ ನನ್ನ ಬಾಬಾ ಅವರೊಂದಿಗಿನ ಸಂಬಂಧ ಮಾತ್ರ ಅಳೆಯಲಾಗದಷ್ಟು ಆಳವಾಗಿ ಪರಿಣಮಿಸಿದೆ. ಮೂಲ ಪ್ರಭಾವವನ್ನು ನನ್ನ ಆಧ್ಯಾತ್ಮಿಕ ಹೃದಯದ ತೆರೆಯುವಿಕೆ ಎಂದು ನಾನು ಗುರುತಿಸುತ್ತೇನೆ. ಬುದ್ಧಿಯನ್ನು ಪ್ರೇಮ ಮತ್ತು ಕರುಣೆ ಎಂಬ ಮೌಲ್ಯಗಳೊಂದಿಗೆ ಸಮತೋಲನ ಗೈಯುವ ಪ್ರಕ್ರಿಯೆಯು ಪ್ರಾರಂಭ ಎಂದು ಪರಿಗಣಿಸುತ್ತೇನೆ. 1977 ಮತ್ತು 1979ರ ವಸಂತಗಳ ನಡುವಣ ಅವಧಿಯಲ್ಲಿ ನನ್ನ ಸ್ವಪ್ನಾವಸ್ಥೆಯಲ್ಲಿ ಸಾಯಿಬಾಬಾ ಸುಮಾರು ನಲವತ್ತು ಸಲ ಕಾಣಿಸಿಕೊಂಡಿದ್ದಾರೆ. ಅವು ಖಂಡಿತವಾಗಿಯೂ ನನ್ನ ಆಧ್ಯಾತ್ಮಿಕ ಜಾಗೃತಿಯ ಮೇಲೆ ಹಾಗೂ ಸ್ವಾಮಿಯ ಮತ್ತು ನನ್ನ ಸಂಬಂಧದ ಮೇಲೆ ಪರಿಣಾಮವುಂಟುಮಾಡಿವೆ. ತಮ್ಮ ಸಂಕಲ್ಪವಿಲ್ಲದೆ ಯಾರೂ ತಮ್ಮನ್ನು ಕನಸಿನಲ್ಲಿ ಕಾಣುವುದು ಸಾಧ್ಯವಿಲ್ಲ ಎಂದು ಸಾಯಿಬಾಬಾ ಹೇಳಿದ್ದಾರೆ. ಕನಸುಗಳ ಮೂಲಕವಾಗಿ ಅವರು ನನಗೆ ನೀಡಿರುವ ಮಾರ್ಗದರ್ಶನ, ಚೋದನೆ, ಚಿಕಿತ್ಸೆ, ಮತ್ತು ಆನಂದಗಳು ಇದನ್ನು ಸ್ಥಿರಪಡಿಸಿವೆ. ವಾಸ್ತವವಾಗಿ

ಸಾಯಿಬಾಬಾ ಅವರೊಂದಿಗೆ ನನ್ನ ಸಂಬಂಧ ಜಾಗ್ರತ್ ಸ್ಥಿತಿಗಿಂತ ಸ್ವಪ್ನ ಸ್ಥಿತಿಯಲ್ಲೇ ಹೆಚ್ಚು ಆಳವಾದಂತೆ ನನ್ನೊಳಗಿನ ಬಲ ಮತ್ತು ಆತ್ಮವಿಶ್ವಾಸಗಳೂ ಬೆಳೆದು ಜಾಗೃತ್ ಸ್ಥಿತಿಯಲ್ಲಿ ಪ್ರಕಟವಾಗುತ್ತವೆ. ಹೀಗೆ ಸ್ವಪ್ನ ವಾಸ್ತವತೆಯು ಜಾಗೃತ ವಾಸ್ತವತೆಯನ್ನು ಪೋಷಿಸಿ ಬೆಂಬಲಿಸುವ ಈ ಪರಿಣಾಮದ ಜೊತೆಗೆ ಎರಡೂ ವಾಸ್ತವತೆಗಳ ವ್ಯತ್ಯಾಸ ಮಿದುವಾಗುತ್ತ ನಡೆದಿದೆ. ಎರಡೂ ಹೆಚ್ಚು ಹೆಚ್ಚಾಗಿ ಹದ ಮಿ ಶ್ರಣವಾಗುತ್ತಿವೆ. ಸ್ವಪ್ನ ಪ್ರತಿಮೆಗಳು ಎಚ್ಚರ ಮನಸ್ಸಿನಲ್ಲಿ ದೂರದ ಮೋಡಗಳಂತೆ ಮೂಡುತ್ತವೆ.

ಆಕ್ರಾ (ಘಾನಾ)ದ ವಿಲ್ಲೀ ಕ್ವೆಕು ಅನ್ಸಾಹ್ ಬರೆಯುತ್ತಾನೆ : "ಇದಾದೊಡನೆ (ಪುಟ್ಟಪರ್ತಿಗೆ ಹೋಗ ಬಯಸುವವರು ಹೆಸರನ್ನು ದಾಖಲಿಸಿ ಕೊಳ್ಳಬೇಕೆಂದು ಸತ್ಯಸಾಯಿ ಸೆಂಟರ್ ಭಕ್ತರಿಗೆ ನೀಡಿದ ಆಹ್ವಾನ) ನಾನು ಕನಸಿನಲ್ಲಿ ಸ್ವಾಮಿಯನ್ನು ನೋಡತೊಡಗಿದೆ. ಮೊದಲನೆಯ ರಾತ್ರಿ ಪುಟ್ಟಪರ್ತಿಗೆ ನಾನೂ ಹೋಗಬಹುದು ಎಂಬ ಅಸ್ಪಷ್ಟ ಭಾವನೆಯಿಂದ ಎಚ್ಚರಗೊಂಡೆ, ತಕ್ಷಣವೆ ಆ ಆಲೋಚನೆಯನ್ನು ತಳ್ಳಿ ಹಾಕಿಯೂ ಬಿಟ್ಟೆ. ಮುಂದಿನ ಕನಸು ಇನ್ನೂ ವಿವರವಾಗಿತ್ತು, ದೀರ್ಘವಾಗಿತ್ತು. ಒಂದು ಎತ್ತರದ ಕಟ್ಟಡದ ಎದುರಿಗೆ ನಾನು ನಿಂತಿದ್ದೆ. ಅದರ ಮೊದಲನೆಯ ಮಾಳಿಗೆಯಲ್ಲಿ ಮುಂದಕ್ಕೆ ಚಾಚಿಕೊಂಡ ಉಪ್ಪರಿಗೆಗಳಿದ್ದುವು. ಭಗವಾನರು ನೆಲ ಅಂತಸ್ತಿನಲ್ಲಿದ್ದರು. ನಾನು ಅವರಿಗೆ ನಮಸ್ಕಾರ ಮಾಡುವುದು ಸಾಮಾನ್ಯ ಸಂಗತಿಯಲ್ಲ, ಅದು ಅಪೂರ್ವವಾದ ಅವಕಾಶ ಎಂದು ಆಗ ನನಗೆ ತಿಳಿದಿರಲಿಲ್ಲ. ನನ್ನ ಹುಚ್ಚು ಕಲ್ಪನೆ ಎಂದು ಆ ಕನಸನ್ನೂ ತಳ್ಳಿ ಹಾಕಿಬಿಟ್ಟೆ. ಮಾರನೆಯ ಕನಸಿನಲ್ಲಿ ಒಂದೆರಡು ಕ್ಷಣ ಭಗವಾನರ ಮುಖ ಮಾತ್ರ ಕಾಣಿಸಿತು. ಮಧುರವಾದ ಆದರೆ ಸ್ಪಷ್ಟವಾದ ಮಾತುಗಳಲ್ಲಿ ನಾನು ಪುಟ್ಟಪರ್ತಿಗೆ ಹೋಗಬೇಕೆಂಬ ಆದೇಶದೊಂದಿಗೆ ಎಚ್ಚರಗೊಂಡೆ. "ಪ್ರಯಾಣಕ್ಕೆ ಅಗತ್ಯವಾದ ಹಣ ಎಲ್ಲಿಂದ ಬರುತ್ತದೆ ಎಂಬ ಸಣ್ಣ ಸೂಚನೆಯೂ ಇಲ್ಲದೆ ಸಮಿತಿಗೆ ನನ್ನ ಹೆಸರನ್ನು ಕೊಟ್ಟೆ. ಅದಕ್ಕಾಗಿ ನಾನು ಚಿಂತೆ ಮಾಡಲೇ ಬೇಕಾಗಲಿಲ್ಲ. ಮುಂದಿನ ಕೆಲವೇ ದಿನಗಳಲ್ಲಿ ಒಬ್ಬ ಮಿತ್ರನ ಮೂಲಕ ನನ್ನ ವಾರ್ಷಿಕ ಆದಾಯ ಏನಿತ್ತೊ ಅದರ ಮೂರು ಪಟ್ಟು ಸಂಪಾದಿಸಿದೆ. ಅಲ್ಲಿಗೆ ಎಲ್ಲವೂ ವ್ಯವಸ್ಥೆಗೊಂಡ ಹಾಗಾಯಿತು, ಯಾವ ಅಡ್ಡಿಯೂ ಒದಗಲಿಲ್ಲ. ನಾನು ಯಾರ ಜೊತೆಯಲ್ಲಿ ಪ್ರಯಾಣ ಮಾಡುತ್ತಿದ್ದೆನೋ ಆ ವ್ಯಕ್ತಿಗಳಲ್ಲೂ ಕೆಲವರನ್ನು ನಾನು ಕನಸಿನಲ್ಲಿ ಕಂಡಿದ್ದೆ ಎಂಬುದನ್ನು ಇಲ್ಲಿ ಉಲ್ಲೇಖಿಸಬೇಕು. ನವೆಂಬರ್ 21ನೆಯ ತಾರೀಖು ನಾವು ಪುಟ್ಟಪರ್ತಿಗೆ ಬಂದೆವು. ಕನಸುಗಳು ನನ್ನ ಮನಸ್ಸಿನಲ್ಲಿ ಇನ್ನೂ ಉಳಿದೇ ಇದ್ದುವು. ಒಬ್ಬ ಗೆಳೆಯನು ನಾವೆಲ್ಲ ಹೋಗಿ ಪ್ರಾರ್ಥನಾ ಮಂದಿರವನ್ನು ಪ್ರದಕ್ಷಿಣೆ ಮಾಡಿ ಬರಬಹುದೆಂದು ಸೂಚಿಸಿದನು. ಹೋದೊಡನೆಯೇ ತಟಕ್ಕನೆ ನಾನು ನಿಂತುಬಿಟ್ಟೆನು. ಏನಾಯಿತು ಎಂದು ಗೆಳೆಯನು ಕೇಳಿದರೆ, ಅವನಿಗರ್ಥವಾಗದ ಏನೇನೋ ಬಡಬಡಿಸಿದೆನು. ನಾನು ಬೆರಗಾಗಿ ನಿಂತದ್ದಕ್ಕೆ ಕಾರಣ ನಾನು ಕಂಡ ಕನಸು ಕಣ್ಣೆದುರಿಗೆ ನಿಂತಿತ್ತು. ಅದೇ ಮುಂಚಾಚಿದ ಮಾಳಿಗೆ, ಅದೇ ವಾಸ್ತು ಸೌಂದರ್ಯ ಅವೇ ಬಣ್ಣಗಳು.

"ನೆಲ ಅಂತಸ್ತಿನ ಒಂದು ಕೊಠಡಿಯಲ್ಲಿ ಸಂದರ್ಶನಗಳು ದೊರೆತಂತೆ ಒಂದರ ಹಿಂದೊಂದು ಆಶ್ಚರ್ಯಗಳು ನನಗೆ ಕಾದಿದ್ದುವು. ಕನಸಿನಲ್ಲಿ ಯಾವ ಸ್ಥಳದಲ್ಲಿ ನಾನು ನಮಸ್ಕಾರ ಮಾಡಿದ್ದೆನೋ

ಅದೇ ಸ್ಥಳದಲ್ಲಿ ಈಗ ನಿಜವಾಗಿ ನಮಸ್ಕಾರ ಮಾಡಿದೆ. ಆದರೆ ಇದೆಲ್ಲವನ್ನೂ ಮೀರಿಸಿದ ಒಂದು ಅಚ್ಚರಿ ನನಗೆ ಕಾದಿತ್ತು. ಭಗವಾನರಿಗೆ ವಂದಿಸಿ ವಿದಾಯ ಹೇಳಿ ಬರುವಾಗ ಅದು ಸಂಭವಿಸಿತು. "ಮತ್ತೆ ಯಾವಾಗ ಬರುತ್ತೀಯೇ ?" ಎಂದು ನನ್ನನ್ನು ಕೇಳಿದರು. ಮತ್ತೆ ಬರುವ ವಿಚಾರ ನನ್ನ ಮನಸ್ಸಿನಿಂದ ಬಹು ದೂರವಿದ್ದುದರಿಂದ ಈ ಪ್ರಶ್ನೆಯನ್ನು ನಾನು ನಿರೀಕ್ಷಿಸಿರಲಿಲ್ಲ. ನಾಚಿಕೆಯಿಂದ ಕೆಂಪಾಗಿ ಸಂತೋಷ ಮಿಶ್ರಿತ ಗೊಂದಲದಲ್ಲಿ ತೊದಲಿದೆ. ಯಾವಾಗ ಬರುತ್ತೇನೆಯೋ ನನಗೆ ಗೊತ್ತಿಲ್ಲ; ಈ ಸಾರಿ ನಾನು ಬಂದದ್ದಕ್ಕೆ ಕಾರಣ ನನಗೆ ಒಂದು ಕನಸು ಬಿದ್ದಿತ್ತು..... ಕಿರಿಕಿರಿಗೊಂಡವರಂತೆ ಬಾಬಾ ನನ್ನ ಮಾತನ್ನು ಅಷ್ಟರಲ್ಲೇ ಮುರಿದರು. ತಮಗೆ ಅವೆಲ್ಲ ಗೊತ್ತು ಎನ್ನುವಂತೆ ಅವರ ದನಿಯಿತ್ತು. "ನನಗೆ ಗೊತ್ತು, ನನಗೆ ಗೊತ್ತು" ಎಂದು ಹೇಳುತ್ತಾ ನನ್ನ ಬೆನ್ನು ತಟ್ಟಿದರು. ಪತಂಜಲಿಯು ಯೋಗಸೂತ್ರಗಳಲ್ಲಿ (1-38) ಸಾಧಕನು ಕನಸುಗಳ ಮೂಲಕ ಮಾರ್ಗದರ್ಶನ ಪಡೆಯುತ್ತಾನೆ ಎಂದು ಹೇಳುತ್ತಾರನೆ. ಆದರೆ ಗುರುವು, ಅವತಾರ ಪುರುಷನೇ ಆಗಿದ್ದ ಪಕ್ಷದಲ್ಲಿ ನಮಗೋಸ್ಕರವಾಗಿ ಕನಸುಗಳನ್ನು ನೆಯ್ದು, ಅದರಲ್ಲಿ ತಾನೇ ಕಾಣಿಸಿಕೊಂಡು, ಸಕಾಲಿಕ ನಿರ್ದೇಶನ ನೀಡುತ್ತಾನೆ ಎಂಬುದನ್ನು ಅವನೂ ಹೇಳಿಲ್ಲ."

## ಒಂದು ಪುಸ್ತಕ ಮತ್ತು ಒಂದು ಪಯಣ

"ನಾನು ಕರೆದ ಹೊರತು ಯಾರೊಬ್ಬರೂ ಪ್ರಶಾಂತಿ ನಿಲಯಕ್ಕೆ ಬರಲು ಸಾಧ್ಯವಿಲ್ಲ" ಎನ್ನುತ್ತಾರೆ ಬಾಬಾ. ಜನರನ್ನು ತಮ್ಮ ಕಡೆಗೆ ಸೆಳೆಯಲು ಅವರು ಬಳಸುವ ಸಾಧನಗಳಲ್ಲಿ ಕನಸೂ ಒಂದು. ನ್ಯೂಯಾರ್ಕಿನಿಂದ ಲಾರೆನ್ಸ್ ಗಲಾಂಟೆ ಬರೆಯುತ್ತಾರೆ : "ನನ್ನ ವೃತ್ತಿ, ತಾಯ್‌ಚಿ ಮತ್ತು ಸಂಬಂಧಿತ ದರ್ಶನದಲ್ಲಿ ಹೆಚ್ಚಿನ ವ್ಯಾಸಂಗ ಮಾಡುವ ಸಲುವಾಗಿ ಹೋಫ್ರಾ ವಿಶ್ವವಿದ್ಯಾನಿಲಯಕ್ಕೆ ಸೇರಿಕೊಂಡೆ. ಒಂದು ಬೆಳಗ್ಗೆ ಬಹಳ ಸ್ಪಷ್ಟವಾಗಿದ್ದ ಒಂದು ಕನಸು ಕಂಡು ಎದ್ದೆ. ಅದರಲ್ಲಿ ಒಂದು ಪುಸ್ತಕದ ಹೆಸರು ಅತ್ಯಂತ ಸ್ಪಷ್ಟವಾಗಿ ಕಾಣಿಸುತ್ತಿತ್ತು. ರಕ್ಷಾ ಕವಚದ ಆಕರ್ಷಕ ವಿನ್ಯಾಸದೊಂದಿಗೆ " ಸಾಯಿಬಾಬಾ : ಕಂಟೆಂಪೊರರಿ ಮಿಸ್ಟಿಕ್, ಮಾಸ್ಟರ್ ಎಂಡ್ ಗಾಡ್" ಎಂದು ಸ್ಪಷ್ಟವಾಗಿ ಬರೆದಿತ್ತು. ಆಗ ನನ್ನ ಮನಸ್ಸಿನಲ್ಲಿ ಆಲೋಚನೆ ಮೂಡಿತು. "ಯಾಕಾಗಬಾರದು ? ಸಮಕಾಲೀನ ಅನುಭವವನ್ನು ಕುರಿತು ಏಕೆ ನಾನು ನನ್ನ ನಿರ್ಬಂಧವನ್ನು ಬರೆಯಬಾರದು, ಅದರಲ್ಲಿ ಸಾಯಿಬಾಬಾ ಅವರನ್ನೇ ಏಕೆ ವಸ್ತುವನ್ನಾಗಿ ಇರಿಸಿಕೊಳ್ಳಬಾರದು ? ವಿಶ್ವವಿದ್ಯಾನಿಲಯದೊಂದಿಗೆ ವ್ಯವಹರಿಸಿ ಅನುಮತಿ ಪಡೆದುದಾಯಿತು. ಬಾಬಾ ಅವರನ್ನು ಮೊದಲು ನೋಡಿ, ಈ ಪವಾಡಗಳನ್ನು ನಾನೇ ಕಣ್ಣಾರ ಕಂಡು ಸ್ಥಿರ ಪಡಿಸಿಕೊಂಡ ಹೊರತು ಅವರ ಬಗೆಗೆ ಬರೆಯುವುದು ಸಾಧ್ಯವಿಲ್ಲ ಎಂದು ನಿರ್ಧರಿಸಿದೆನು. ನೇರವಾಗಿ ಹೋಗಿ ಅವರನ್ನು ನೋಡಿ ಅವರೊಬ್ಬ ಮೋಸಗಾರನೆಂದೂ ತಿಳಿದುಕೊಳ್ಳಬಹುದು ; ಹಾಗಿದ್ದರೆ ಪವಾಡಗಳೆಲ್ಲ ವಂಚನೆಗಳು ಎಂದೇ ನನ್ನ ನಿಬಂಧವನ್ನು ಬರೆಯಬಹುದು ಎಂದು ಯೋಚಿಸಿದೆ. ಹಾಗೂ ಆಗಬಹುದು. (ಬಾಬಾ ಹೇಳುತ್ತಾರೆ : "ಬನ್ನಿ, ನೋಡಿ, ಅನುಭವಿಸಿ, ಪರೀಕ್ಷಿಸಿ ಆಮೇಲೆ ನಂಬಿರಿ"). ಆದರೆ ಭಾರತಕ್ಕೆ ಹೋಗುವುದು ಹೇಗೆ ? ಬ್ಯಾಂಕು ಖಾತೆಯಲ್ಲಿ ಏನೂ ಇರಲಿಲ್ಲ. ಸಾಯಿಬಾಬಾ ಅವರ ಕಡೆಗೆ ತಿರುಗಿಕೊಂಡು ಹೇಳಿಕೊಂಡೆ : "ನಾನು ಈ ಪುಸ್ತಕವನ್ನು

ಬರೆಯಬೇಕೆಂಬುದೇ ನಿಮ್ಮ ಇಚ್ಛೆಯಾಗಿದ್ದರೆ, ಭಾರತಕ್ಕೆ ಬರಲು ಅಗತ್ಯವಾಗಿರುವ ಹಣ ನನಗೆ ದೊರಕುವಂತೆ ಮಾಡಿ, ನನ್ನ ಬಳಿ ಏನೂ ಇಲ್ಲ." ಇದಾದ ನಲವತ್ತೆಂಟು ಗಂಟೆಗಳಲ್ಲಿ ನನಗೆ ನ್ಯೂಯಾರ್ಕ್ ನಗರದಿಂದ ಒಂದು ಸಾವಿರ ಡಾಲರುಗಳ ಒಂದು ಚೆಕ್ ಅಂಚೆಯಲ್ಲಿ ಬಂದಿತ್ತು. ಬಹಳ ಹಿಂದೆಯೇ ಬರಬೇಕಾಗಿದ್ದ ಹಣ, ವಸೂಲು ಮಾಡಲು ಹೋಗಿ, ಹತಾಶನಾಗಿದ್ದ ಹಣ ಈಗ ದೊರಕಿತು. ... ನಾನು ಸಾಯಿಬಾಬಾ ಅವರೊಂದಿಗೆ ಎರಡು ತಿಂಗಳಿದ್ದೆ. ಪ್ರತಿದಿನ ಬರುವ ಅಗಾಧ ಸಂಖ್ಯೆಯ ಜನರಿಗೆ ಅವರು ದರ್ಶನ ಕೊಡುವರು, ರೋಗಿಗಳನ್ನು ಗುಣಪಡಿಸುವರು, ಹಲವು ಬಗೆಯ ವಸ್ತುಗಳನ್ನು ಸೃಷ್ಟಿಸಿ ಭಕ್ತರಿಗೆ ಉಡುಗೊರೆಯಾಗಿ ಕೊಡುವರು. ಬಾಬಾ ನನಗೆ ಬೋಧಿಸಿದ ಪ್ರತಿಯೊಂದು ಒಳ್ಳೆಯದೇ ಆಗಿತ್ತು ; ಅವರ ಸಮಸ್ತ ಕ್ರಿಯೆಗಳೂ ಉಪಯುಕ್ತವಾಗಿದ್ದುವು. ತಮ್ಮ ಬಗೆಗೆ ಪುಸ್ತಕ ಬರೆಯಲು ಅವರು ಅನುಮತಿಯನ್ನು ನೀಡಿದರು. ಆ ಕೆಲಸವನ್ನು ಈಗ ಮಾಡುತ್ತಿದ್ದೇನೆ. ಸಾಯಿಬಾಬಾ ಗೋಪ್ಯವಾಗಿ ರಹಸ್ಯವಾಗಿ ಏನನ್ನೂ ಮಾಡುವುದಿಲ್ಲ. ಅವರ ಕೆಲಸಗಳೆಲ್ಲ ತೆರೆದಿಟ್ಟ ಪುಸ್ತಕ. ಯಾರು ಬೇಕಾದರೂ ಅದನ್ನು ನೋಡಬಹುದು, ತಮಗೆ ಇಷ್ಟಬಂದ ತೀರ್ಮಾನಕ್ಕೆ ಬರಬಹುದು. "ನನ್ನ ಜೀವನವೇ ನನ್ನ ಸಂದೇಶ" ಎಂದು ಬಾಬಾ ಪದೇ ಪದೇ ಹೇಳುತ್ತಾರೆ. ಅವರ ಸಂದೇಶ ನನಗೆ ಇನ್ನೂ ಹೆಚ್ಚು ಹೆಚ್ಚಾಗಿ ದೊರಕಲಿ ಎಂದು ಬೇಡುತ್ತೇನೆ."

ಕನಸನ್ನು ಕನಸು ಕಾಣುವವನೊಂದಿಗೆ ಸಂಪರ್ಕ ಸಾಧನವಾಗಿ, ಅವನಿಗೆ ಧೈರ್ಯ, ವಿಶ್ವಾಸ, ಸ್ಪಷ್ಟ ಆಲೋಚನೆಗಳನ್ನು ನೀಡುವುದಕ್ಕೆ ಒಂದು ಸಾಧನವಾಗಿ ಸಂಕಲ್ಪಿಸುತ್ತೇನೆ ಎಂದು ಬಾಬಾ ಅನೇಕ ಸಲ ಹೇಳಿದ್ದಾರೆ.

ಟ್ರಿನಿಡಾಡ್‌ನ ಮಿಸ್ ಓಕಾ ಸೀಪಾಲ್‌ಗೆ ಕೂಡ ಬಾಬಾ ಒಂದು ಪುಸ್ತಕ ರಚಿಸಲು ಪ್ರೇರಣೆ ನೀಡಿದರು. ವೆಸ್ಟ್ ಇಂಡಿಯನ್ ದ್ವೀಪದ ಅನೇಕ ಭಕ್ತ ಸಮೂಹಕ್ಕೆ ಬಾಬಾ ಅವರ ಸಂದೇಶವನ್ನು ಕುರಿತು ಆಕೆ ಮಾಡಿದ ಭಾಷಣಗಳ ಸಂಕಲನ ಅದು. ಕನಸಿನಲ್ಲಿ ನೀಡಿದ ಅವರ ಸೂಚನೆಯನ್ನು ಆದೇಶವಾಗಿ ಪರಿಗಣಿಸಿದಳು ಆಕೆ. ಅರವಿಂದರ ಪ್ರಕಾರ 'ಅವತಾರವು ಅಥವಾ ದಿವ್ಯತೆಯು ಬೇರೊಂದು ಪ್ರಜ್ಞಾವಸ್ಥೆಯ ಪ್ರಕಾರ ವರ್ತಿಸುತ್ತದೆ. ಮೇಲೆ ಸತ್ಯದ, ಕೆಳಗೆ ಲೀಲೆಯ ಪ್ರಜ್ಞೆ ಅದು." ಆಧ್ಯಾತ್ಮಿಕ ಸಮಸ್ಯೆಯೊಂದಕ್ಕೆ ಸ್ವಪ್ನದಲ್ಲಿ ಪರಿಹಾರ ಸೂಚಿಸಿದ್ದರ ಸಮರ್ಥನೆಯನ್ನು ಕೇಳಿದ ಡಾ. ಎಂ. ಎಸ್. ರಾಮಕೃಷ್ಣರಾಯರಿಗೆ ಬಾಬಾ ಹೇಳಿದರು : "ನಾನು ಯಾರಿಗಾದರೂ ಕನಸಿನಲ್ಲಿ ಕಾಣಿಸಿಕೊಂಡೆನೆಂದರೆ ಅದು ಆ ವ್ಯಕ್ತಿಗೆ ಏನನ್ನಾದರೂ ಸೂಚಿಸುವುದಕ್ಕಾಗಿಯೇ ! ಅದು ಸಾಮಾನ್ಯವಾಗಿ ತಿಳಿದುಕೊಂಡಿರುವಂತಹ ಕನಸಲ್ಲ. ಕನಸಿನಲ್ಲಿ ನಿನ್ನ ಅನುಭವಕ್ಕೆ ಬಂದದ್ದೆಲ್ಲ ನಿನ್ನ ಕಲ್ಪನೆಯ ಲಹರಿ ಎಂದು ಖಂಡಿತ ಭಾವಿಸಬೇಡ. ಆ ಮೂಲಕ ನಿನ್ನ ಎಲ್ಲ ಸಂದೇಹಗಳಿಗೂ ನಾನು ಉತ್ತರ ಕೊಡುತ್ತಿದ್ದೆ."

ಮುಂಬಯಿಯ ಕೆ.ಇ.ಎಂ. ಆಸ್ಪತ್ರೆಯ ಇಂಟೆನ್ಸಿವ್ ಕೇರ್ ಕಾರ್ಡಿಯಾಕ್ ವಿಭಾಗದಲ್ಲಿ ಕೃತಕ ಹೃದಯ ಜೋಡಣೆಯನ್ನು ನಿರೀಕ್ಷಿಸುತ್ತಾ ಮಲಗಿದ್ದ ಎಚ್. ನಾರಾಯಣರಾಯರಿಗೆ ಕನಸು ಬಿತ್ತು. ಕನಸಿನಲ್ಲಿ ಬೇಕಾದಷ್ಟು ಜನ ವಾರ್ಡಿನೊಳಕ್ಕೆ ಬರುತ್ತಿದ್ದರು. ಅವರ ನಡುವೆ ಬಾಬಾ ಇದ್ದರು.

ಇವರ ಹಾಸಿಗೆಯ ಬಳಿ ನಿಂತು ಎಂದಿನದೇ ಮಿದುವಾದ, ಭರವಸೆ ತುಂಬಿದ ದನಿಯಲ್ಲಿ ಬಾಬಾ ನುಡಿದರು : "ಮಗು, ಕೃತಕ ಶ್ವಾಸಾಂಗ ಜೋಡಣೆ ಮತ್ತು ಶಸ್ತ್ರ ಚಿಕಿತ್ಸೆಗಳ ಬಗೆಗೆ ನೀನೆಷ್ಟು ಚಿಂತಿತನಾಗಿದ್ದೀಯೆ ಎಂದು ನಾನು ಬಲ್ಲೆ. ಸ್ವಲ್ಪವೂ ಚಿಂತಿಸಬೇಡ. ಇನ್ನು ಮುಂದಕ್ಕೆ ನಾಡಿ ಮಿಡಿತ ಕ್ರಮೇಣ ಉತ್ತಮಗೊಳ್ಳುತ್ತದೆ. ಇಂದಿನಿಂದ ಲೆಕ್ಕವಿಟ್ಟುಕೊ. ಹನ್ನೊಂದನೆಯ ದಿನ, ಅದು 17ನೆಯ ತಾರೀಖು ಶನಿವಾರವಾಗುತ್ತದೆ, ನೀನು ಮನೆಗೆ ಹೋಗುವೆ." ವೈದ್ಯರು ಬೇರೆ ಬೇರೆ ಸಬೂಬುಗಳನ್ನು ಹೇಳುತ್ತಿದ್ದರೂ ಸರಿಯಾಗಿ ಹನ್ನೊಂದನೆಯ ದಿನ ಸುಸ್ಥಿತಿಯಲ್ಲಿರುವ ಹೃದಯದೊಂದಿಗೆ ನಾರಾಯಣರಾವ್ ಆಸ್ಪತ್ರೆಯಿಂದ ಮನೆಗೆ ಹಿಂದಿರುಗಿದರು.

## ಸೂಕ್ತ ಬಂಧನಗಳು

ಕುರುಕ್ಷೇತ್ರದ ಪ್ರೊಫೆಸರ್ ಕೌಶಲ್ ಅವರಿಂದ ನನಗೊಂದು ಪತ್ರ ಬಂದಿತು. ಬಾಬಾ ಕನಸಿನಲ್ಲಿ ಬಂದು ಆದೇಶಿಸಿದ್ದರಿಂದ ತಮ್ಮ ನೌಕರಿಗೆ ರಾಜೀನಾಮೆ ಕೊಟ್ಟುದಾಗಿ ಅವರು ಬರೆದಿದ್ದರು. ಆಗ ಇಂಥದೇ ಒಂದು ಕಾರಣದಿಂದ ಸಿವಿಲ್ ಕೋರ್ಟಿನಲ್ಲಿ ಹಾಕಿದ್ದ ಮೊಕದ್ದಮೆಯನ್ನು ಹಿಂದಕ್ಕೆ ಪಡೆದ ಇನ್ನೊಬ್ಬ ಭಕ್ತರ ನೆನಪಾಯಿತು. ಆಸ್ತಿಗೆ ಸಂಬಂಧಿಸಿದಂತೆ ಇವರ ಹಕ್ಕು ಎಷ್ಟು ಬಲವಾಗಿದ್ದಿತೆಂದರೆ ಅದನ್ನು ಸ್ಥಿರ ಪಡಿಸಿ ಮೊಕದ್ದಮೆ ಗೆಲ್ಲಲು ನ್ಯಾಯಾಂಗದ ಎಲ್ಲಾ ಹಂತಗಳಲ್ಲಿ ಶ್ರಮಿಸಿದರು. ಬೇಕಾದಷ್ಟು ಮನೋವೇದನೆ ಪಟ್ಟರು, ಅಪಾರವಾದ ಹಣವನ್ನು ವೆಚ್ಚ ಮಾಡಿದರು. ಈ ಮೊಕದ್ದಮೆ ಅವರನ್ನು ಬಲವಾಗಿ ಮೆಟ್ಟಿಕೊಂಡಿತ್ತು. ಏನು ಮಾಡಿದರೂ ಅವರು ಕೈ ಬಿಡುವ ಯೋಚನೆ ಮಾಡುತ್ತಿರಲಿಲ್ಲ. ಬಾಬಾ ಕನಸಿನಲ್ಲಿ ಕಾಣಿಸಿಕೊಂಡರು, ತಪ್ಪಾಗಿ ಅಂಟಿಸಿಕೊಂಡಿರುವ ಮೋಹವನ್ನು ತೊರೆಯಲು ಆದೇಶಿಸಿದರು. ಪ್ರಾಪರ್ಟಿಗಳು (Property) ಖಂಡಿತವಾಗಿ ಪ್ರಾಪರ್ ಟೈಗಳಲ್ಲ (Proper-Tie) ಎಂದು ವಿಚಿತ್ರವಾಗಿ ಒತ್ತುಕೊಟ್ಟು ನುಡಿದರು. ಕೌಶಲ್ ಬರೆಯುತ್ತಾರೆ : "ಈ ಕನಸುಗಳು ಪರಿಣಾಮಕಾರಿ, ಸ್ಪಷ್ಟ, ವೈಯಕ್ತಿಕ ಮತ್ತು ಶಾಂತಿಪ್ರದ. ನಾನು ಅವುಗಳನ್ನು ತಳ್ಳಿಹಾಕಲಾರೆ. ಅದರಲ್ಲೂ ಬಾಬಾ ಮುಂದೆ ಆ ಕನಸುಗಳನ್ನು ಸ್ಥಿರೀಕರಿಸುತ್ತಾರೆ ಮತ್ತು ಅಲ್ಲಿ ನೀಡಿದ ಬೋಧನೆಯನ್ನು ಮುಂದುವರಿಸುತ್ತಾರೆ."

ಕನಸಿನಲ್ಲಿ ಕಾಣಿಸಿಕೊಂಡು ಬಾಬಾ ಜನರನ್ನು ತಮ್ಮ ಬಳಿಗೆ ಬರುವಂತೆ ಒತ್ತಾಯಿಸುತ್ತಾರೆ. ಪ್ರಯಾಣಕ್ಕೆ ಇರಬಹುದಾದ ತಡೆಗಳನ್ನು ನಿವಾರಿಸುತ್ತಾರೆ, ಆತ್ಮ ಸಾಕ್ಷಾತ್ಕಾರದ ಸಾಧನೆಗಾಗಿ ಆಧ್ಯಾತ್ಮಿಕ ಪಥವನ್ನು ಪ್ರವೇಶಿಸಲು ಅವರನ್ನು ಪ್ರೋತ್ಸಾಹಿಸುತ್ತಾರೆ. ನಾವು ಈಗಾಗಲೇ ಆಕ್ರಾದ ವಿಲ್ಲೀ ಆನ್ಸಾ ಮತ್ತು ನ್ಯೂಯಾರ್ಕಿನ ಲಾರೆನ್ಸ್ ಗಲಾಂಟೆ ಅವರ ನಿರೂಪಣೆಗಳಲ್ಲಿ ಅವರ ಈ ಅತುಲ ಪ್ರೇಮವನ್ನು ನೋಡಿದ್ದೇವೆ.

ಬಾಬಾ ಅವರ ಕರುಣೆಯ ಇನ್ನೊಂದು ಸ್ವಾರಸ್ಯವಾದ ಸಂದರ್ಭವನ್ನು ಡಾ. ಸ್ಯಾಂಡ್‌ವಿಸ್ ಹೀಗೆ ದಾಖಲಿಸಿದ್ದಾರೆ : "ಲೈಲಾ ಮತ್ತು ನಾನು ಸಾಯಿಬಾಬಾ ಅವರ ವಿಚಾರವಾಗಿ ಚರ್ಚೆಮಾಡುತ್ತಿದ್ದೆವು. ಅವಳಿಗೆ ಏನು ಮಾಡಲೂ ತೋಚದಂತಾಯಿತು. ಬಾಬಾ ಅವರನ್ನು ಕುರಿತ

ಒಂದು ಪುಸ್ತಕವನ್ನು ಅವಳು ಓದಿದ್ದಳು, ತಾನೇ ಹೋಗಿ ಅವರನ್ನು ಸಂಧಿಸುವ ಸಾಧ್ಯತೆಯನ್ನು ವಿಚಾರ ಮಾಡತೊಡಗಿದಳು. ಆಗ ಅವಳು ತುಂಬಾ ಸಾಲಸೋಲಗಳಲ್ಲಿ ಮುಳುಗಿದ್ದರಿಂದ ಭಾರತಕ್ಕೆ ಪ್ರಯಾಣ ಮಾಡಲು ಅಗತ್ಯವಾಗಿದ್ದ ಹಣವನ್ನು ಸಂಗ್ರಹಿಸುವ ದಾರಿ ಅವಳಿಗೆ ಕಾಣಿಸುತ್ತಿರಲಿಲ್ಲ. ಅವಳ ಪತಿ ಹೋಮರ್ ಒಬ್ಬ ಹವ್ಯಾಸಿ ಶೋಧಕ. ಅವನಿಗೆ ಆ ಸಮಯದಲ್ಲಿ ಸ್ಥಿರವಾದ ವರಮಾನವಿರಲಿಲ್ಲ. ಕಳೆದ ಐದು ವರ್ಷಗಳ ಕಾಲ ಯಾವುದೇ ಸಂಶೋಧನೆಯನ್ನು ಮಾಡುವ ಸಂದರ್ಭ ಬಂದಿರಲಿಲ್ಲ. ಆದರೂ ಭಾರತದ ಪ್ರಯಾಣ ಎಷ್ಟೇ ಅವಾಸ್ತವವೆಂದು ಕಾಣಿಸುತ್ತಿದ್ದರೂ ಆಕೆ ಪ್ರಯತ್ನ ಮುಂದುವರಿಸಿದಳು, ಚುಚ್ಚುಮದ್ದು ಪ್ರಮಾಣಪತ್ರಗಳನ್ನು ಪಡೆದಳು, ಪಾಸ್‌ಪೋರ್ಟ್ ದೊರಕಿತು. ಆಮೇಲೆ ಕೆಲವು ವಿಚಿತ್ರಗಳು ಘಟಿಸತೊಡಗಿದವು. ಒಂದು ದಿನ ತೀರಾ ನಿರಾಶಗಳಾಗಿದ್ದಾಗ ಅವಳಿಗೊಂದು ಕನಸಾಯಿತು. ಬಾಬಾ ಕಾಣಿಸಿದರು. ತಮಾಷೆ ಮಾಡುವಂತೆ ಕಣ್ಣು ಮಿಟುಕಿಸುತ್ತಿದ್ದರು. ಇದಾದ ಸ್ವಲ್ಪದರಲ್ಲೇ ಹೋಮರ್ ಒಂದು ನೂತನ ಸಂಶೋಧನೆಯಲ್ಲಿ ಯಶಸ್ವಿಯಾದನು. ಅಸಂಭವವಾದ ಘಟನೆಗಳು ವೇಗವಾಗಿ ಸಂಭವಿಸಿದುವು. ಅನೇಕರು ಈ ಸಂಶೋಧನೆಯಲ್ಲಿ ಆಸಕ್ತಿ ತೋರಿಸಿದರು. ಹೋಮರನ ಆರ್ಥಿಕ ಸ್ಥಿತಿಗತಿ ದಿಢೀರನೆ ಅತ್ಯಂತ ಅನಿರೀಕ್ಷಿತವಾಗಿ ಉತ್ತಮಗೊಳ್ಳುತ್ತಾ ಹೋಯಿತು. ಎಷ್ಟೋ ವರ್ಷಗಳ ನಂತರ ಇದು ಸಂಭವಿಸಿತ್ತು. ಹೊರಡುವುದಕ್ಕೆ ಕೇವಲ ಒಂದು ವಾರದ ಹಿಂದೆ ಲೈಲಾಳಿಗೆ ಪ್ರಯಾಣಕ್ಕೆ ಅಗತ್ಯವಾದ ಹಣ ದೊರಕಿತು. ಬಹು ಉತ್ಸಾಹದಿಂದ ನಮ್ಮ ಜೊತೆಗೆ ಸೇರಿಕೊಂಡಳು."

ನಿಸ್ಸಂದೇಹವಾಗಿ ಬಾಬಾ ಕನಸುಗಳನ್ನು ಯೋಜಿಸುತ್ತಾರೆ, ನಕ್ಷೆ ರೇಖಿಸುತ್ತಾರೆ, ರೂಪಿಸುತ್ತಾರೆ ಅವುಗಳ ಮೂಲಕ ಜನರ ಮೇಲೆ ತಮ್ಮ ಪ್ರಭಾವವನ್ನು ತೊಡಗುತ್ತಾರೆ ಅಥವಾ ಆಳವಾಗಿಸುತ್ತಾರೆ. ಕ್ಯಾಲಿಫೋರ್ನಿಯಾದ ಜೆಫ್ ಕುರಿತಾದ ಈ ಇನ್ನೊಂದು ಪ್ರಸಂಗವನ್ನು ಡಾ. ಸ್ಯಾಂಡ್‌ವಿಸ್ ನಿರೂಪಿಸಿರುವುದನ್ನು ವಿಚಾರ ಮಾಡಬಹುದು.

ಅವರು ಬರೆಯುತ್ತಾರೆ, "ನಾವೆಲ್ಲ ಕುಳಿತಿದ್ದ ಸಂದರ್ಶನ ಕೊಠಡಿಯಲ್ಲಿ ಬಾಬಾ ಮುಗುಳ್ನಗುತ್ತಾ ಕುರ್ಚಿಯಲ್ಲಿ ಕುಳಿತು ಆನಂದವಾಗಿ ಹಿಂದಕ್ಕೆ ಮುಂದಕ್ಕೆ ಆಡುತ್ತಿದ್ದರು. ನನ್ನ ಪಕ್ಕದಲ್ಲಿ ಕುಳಿತಿದ್ದ ಜೆಫ್ ಅನ್ನು ಕುರಿತು "ನಿನಗೆ ಎರಡು ಸಾರಿ ಕನಸಿನಲ್ಲಿ ನಾನು ಕಾಣಿಸಿಕೊಂಡಿದ್ದೇನೆ" ಎಂದರು. ಮನೋಚಿಕಿತ್ಸಕನಾಗಿ ನಾನು ಎಂದೂ ನನ್ನ ಸಹೋದ್ಯೋಗಿಯೊಬ್ಬನು ತನ್ನ ರೋಗಿಯೆದುರಿಗೆ ಹೀಗೆ ಮಾತನಾಡಿದ್ದನ್ನು ಕೇಳಿಲ್ಲ. ಮನೋಚಿಕಿತ್ಸಕರು ಸದಾ ಕನಸುಗಳ ಬಗ್ಗೆ ವ್ಯವಹರಿಸುತ್ತಾರೆ ನಿಜ ; ಆದರೆ "ನಾನು ಎರಡು ಸಾರಿ ನಿನ್ನ ಕನಸಿನಲ್ಲಿ ಬಂದಿದ್ದೇನೆ" ಎಂದು ಹೇಳುವುದು ಸಾಮಾನ್ಯ ರೋಗಿಗೆ ಗಾಬರಿಗೊಳಿಸಿದಂತೆ ಆಗುತ್ತದೆ... ಬಾಬಾ ಜೆಫ್‌ನಿಗೆ ಒಂದು ಕನಸನ್ನು ವಿಸ್ತರಿಸಿ ಹೇಳಲುತೊಡಗಿದರು. ಕೇಳಿದ ನನಗೆ, ಹೇಗೋ ಈ ವ್ಯಕ್ತಿ ಜೆಫ್‌ನ ಮನೋ ಅನುಭವವನ್ನು ಪೂರ್ವನಿಯೋಜನೆಗೈದು, ವಾಸ್ತವವಾಗಿ ಕನಸುಗಳನ್ನು ಹೆಣೆದು, ವಾಸ್ತವತೆಯ ಬೇರೊಂದು ಸ್ತರದಲ್ಲಿ ಅವನಿಗೆ ಗೋಚರಿಸಿದರು ಎನ್ನಿಸಿತು. ಬಾಬಾ ಹೇಳಿದ್ದೆಲ್ಲವನ್ನೂ ಜೆಫ್ ಸ್ಥಿರಪಡಿಸಿದನು. ನಾನು ಅತ್ಯುನ್ನತ ; ಅತಿ ಶ್ರೇಷ್ಠ ಮನೋ ಚಿಕಿತ್ಸಕನನ್ನು ಇಲ್ಲಿ ಕಂಡೆ !"

ಶ್ರೀ ಜಗದೀಶನ್ ಒಂದು ದಿನ ಸಂದರ್ಶನದ ಕೊನೆಯಲ್ಲಿ ಬಾಬಾ ಅವರನ್ನು ಕೇಳಿದರು : "ಭಗವಾನ್, ನೀವೇಕೆ ಎಂದೂ ನನ್ನ ಕನಸಿನಲ್ಲೂ ಕಾಣಿಸಿಕೊಳ್ಳುವುದಿಲ್ಲ ?" . ಅವರು ಬರೆಯುತ್ತಾರೆ, "ಬಾಬಾ ಬರೆಯುತ್ತಾರೆ, "ಬಾಬಾ ಪ್ರೀತಿಯಿಂದ ಬಗ್ಗಿ ನುಡಿದರು: "ಆಯಿತು, ಇಂದಿನಿಂದ ಪ್ರತಿ ಬುಧವಾರ ನಿನ್ನ ಕನಸಿನಲ್ಲಿ ಬರುತ್ತೇನೆ". ಮಂಗಳವಾರವನ್ನು ಶುಭದಿನವೆಂದು ನಾನು ಭಾವಿಸುತ್ತೇನೆ. ಏಕೆಂದರೆ 1976 ಜೂನ್ 8 ನೆಯ ತಾರೀಖು ಮಂಗಳವಾರ ನನ್ನ ಮನೆಯಲ್ಲಿ ಭಗವಾನರ ಚಿತ್ರದಿಂದ ಮೊತ್ತಮೊದಲು ವಿಭೂತಿ ಬಂದಿತು. ಇದನ್ನು ಗಮನಿಸಿದರೋ ಎಂಬಂತೆ ಬಾಬಾ ನಕ್ಕರು, ನಾನು ಕೇಳದೆಯೇ ತಮ್ಮ ಆಶ್ವಾಸನೆಗೆ ತಿದ್ದುಪಡಿ ಹೇಳಿದರು. "ಇಲ್ಲ, ಇಲ್ಲ! ಮಂಗಳವಾರ ಆಗಬೇಕು ಅಲ್ಲವೆ?" ಅಂದಿನಿಂದ ಪ್ರತಿ ಮಂಗಳವಾರ ಜಗದೀಶನ್ ಅವರ ಕನಸಿನಲ್ಲಿ ಬಾಬಾ ಕಾಣಿಸುತ್ತಾರೆ, ಅವರನ್ನು ಅನುಗ್ರಹಿಸುತ್ತಾರೆ.

ಒಮ್ಮೆ ಬೃಂದಾವನಕ್ಕೆ (ವೈಟ್ ಫೀಲ್ಡ್) ಡಾ. ಸ್ಯಾಂಡ್‌ವಿಸ್ ಅವರೊಂದಿಗೆ ಭೇಟಿಕೊಟ್ಟಿದ್ದಾಗ ಒಂದು ದಿನ ಎಲ್ಸೀ ಕೋವಾನ್ ಬೆಳಗಿನ ಜಾವ ಅವರ ಕೊಠಡಿಯ ಬಾಗಿಲು ತಟ್ಟಿದರು. ಉದ್ವೇಗದಿಂದ "ಈ ಬೆಳಗ್ಗೆ ನಾನು ವಾಲ್ಟರ್ ಜೊತೆ ಅತಿ ನಿಕಟವಾಗಿ ಇದ್ದೇನೆ ಎಂಬ ಭಾವನೆ ಬರುತ್ತಿದೆ" ಎಂದರು ಎಲ್ಸೀ. ಮುಂದುವರಿಂದು ಸ್ಯಾಂಡ್‌ವಿಸ್ ಅವರಿಗೆ ಹೇಳಿದರು. ವಾಲ್ಟರ್ ಕ್ಯಾಲಿಫೋರ್ನಿಯದ ಟಸ್ಟಿನ್‌ನಲ್ಲಿ ದೇಹತ್ಯಾಗ ಮಾಡಿದಾಗ ಬಾಬಾ ಎಲ್ಸೀಗೆ ಒಂದು ತುರ್ತು ತಂತಿ ಸಂದೇಶ ಕಳಿಸಿದರು: 'ವಾಲ್ಟರ್ ಉತ್ತಮ ಸ್ಥಿತಿಯಲ್ಲಿ ಇಲ್ಲಿಗೆ ಬಂದಿದ್ದಾನೆ'. ಬಾಬಾ ಮತ್ತು ವಾಲ್ಟರ್ ಇಬ್ಬರೂ ಇಂದು ನನಗೆ ವಿಶೇಷ ಭೇಟಿ ನೀಡಿದ್ದಾರೆ ಎಂಬ ಅನುಭವ ನನಗಾಗುತ್ತಿದೆ ಎಂದರು ಎಲ್ಸೀ. ಬೆಳಗ್ಗೆ ಆರು ಗಂಟೆಯಿಂದಲೇ ಹೊಸ ಚೈತನ್ಯದಿಂದ ತುಂಬಿ ತುಳುಕುತ್ತಿದ್ದೇನೆ ಎಂದರು. ಅಂದು ಸಂಜೆ ಇಬ್ಬರೂ ಪ್ರಶಾಂತಿ ನಿಲಯಕ್ಕೆ ಹೋದಾಗ, ಇತರ ಕೆಲವರೊಂದಿಗೆ ಅವರನ್ನು ಬಾಬಾ ಒಳಕ್ಕೆ ಕರೆದರು. ಸಂಭಾಷಣೆ ನಡೆಯುತ್ತಿದ್ದಾಗ ನಡುವೆ ತಟಕ್ಕನೆ ಅವರು ಎಲ್ಸೀಯನ್ನು ಕುರಿತು "ವಾಲ್ಟರ್ ಮತ್ತು ನಾನು ಇಬ್ಬರೂ ಇಂದು ಬೆಳಗ್ಗೆ ನಿನ್ನ ಬಳಿ ಬಂದಿದ್ದೆವು" ಎಂದರು. "ಹೌದು, ಹೌದು! ಬೆಳಗ್ಗೆ ಆರು ಗಂಟೆಗೆ. ನನಗೆ ಸಂತೋಷ ತುಂಬಿ ಬಂದ ಅನುಭವವಾಯಿತು" ಎಂದರು ಎಲ್ಸೀ. "ಅಲ್ಲ, ಆಗ ಆರು ಗಂಟೆಗೆ ಇನ್ನೂ ಐದು ನಿಮಿಷ ಇತ್ತು." ಸ್ವಾಮಿ ಎಲ್ಸೀಯನ್ನು ತಿದ್ದಿದರು. ಸ್ಯಾಂಡ್‌ವಿಸ್ ಕೂಡಿಸುತ್ತಾರೆ: "ಮಹಾನ್ ಶಕ್ತಿಗಳನ್ನು ನಿಯಂತ್ರಿಸುವ ಸರ್ವವ್ಯಾಪಕನೆಂಬುದಕ್ಕಿಂತ ಮಿಗಿಲಾಗಿ ಅವರನ್ನು ಪರಿಶುದ್ಧ ಪ್ರೇಮದ ಮೂರ್ತರೂಪವೆಂಬಂತೆ ನೋಡತೊಡಗಿದೆ. ನಿಜವಾಗಿ ಭಕ್ತರನ್ನು ಕುರಿತು ಅವರಿಗಿರುವ ಪ್ರೇಮವೇ ಅವರ ಕೃತಿಗಳೆಲ್ಲವನ್ನೂ ಪ್ರೇರಿಸುತ್ತದೆ."

ಶಿರ್ಡಿ ದೇಹದಿಂದ ಬೇರೆಯಾದ ಈ ದೇಹದಲ್ಲಿರುತ್ತಾ, ಎಲ್ಲೋ ಕೆಲವು ಜನ ತೀರಾ ಅಗತ್ಯವಿದ್ದ ಜನರಿಗೆ ಆಧ್ಯಾತ್ಮಿಕ ನಿರ್ದೇಶನ ಕೊಟ್ಟರೆ ಇಂದು ಸಾಲದು ಎಂದು ಬಾಬಾ ಅನೇಕ ಸಾರಿ ಹೇಳಿದ್ದಾರೆ. "ಎಲ್ಲರನ್ನೂ ಬಳಿಗೆ ಸೆಳೆಯಬೇಕು, ಶಾಂತಿ ಸಮಾಧಾನ ಪುಷ್ಟಿತುಷ್ಟಿಗಳನ್ನು ನೀಡಬೇಕು. ಅವತಾರ ಪುರುಷನು ಏನನ್ನು ಕೊಡಲು ಬಂದಿರುವನೋ ಅದನ್ನು ಅವರು ಕೇಳುವಂತಾಗುವವರೆಗೂ ಅವರು ಕೇಳುವುದನ್ನು ಕೊಡಬೇಕು." ಶಿರ್ಡಿ ಬಾಬಾ ತಮ್ಮ ಭಕ್ತರಿಗೆ

ಎಚ್ಚರಿಕೆ ಕೊಡಲು, ಸಲಹೆ ಕೊಡಲು ಕನಸುಗಳಲ್ಲಿ ಕಾಣಿಸಿಕೊಳ್ಳುತ್ತಿದ್ದರು; ಸಂಕೇತಗಳಲ್ಲಿ ಒಗಟುಗಳಲ್ಲಿ ಅವರು ಮಾತನಾಡುತ್ತಿದ್ದರು; ಲೌಕಿಕವಾದ ಸಮಸ್ಯೆಗಳನ್ನೂ ವೈಯಕ್ತಿಕ ತೊಡರುಗಳನ್ನೂ ಪರಿಹರಿಸಿಕೊಳ್ಳಲು ನೆರವಾಗುತ್ತಿದ್ದರು. ಆಶ್ಚರ್ಯಕರವಾದ ರೀತಿಯಲ್ಲಿ ವಿಚಿತ್ರ ಸೂಚನೆಗಳ ಮೂಲಕ ಸಾಧಕರನ್ನು, ಸೇವಾ ಮನೋಭಾವವಿದ್ದವರನ್ನು, ನೊಂದವರನ್ನು ಸಂದೇಹಗ್ರಸ್ತರನ್ನು, ದ್ವಾರಕಾಮಾಯಿಗೆ ಆಹ್ವಾನಿಸುತ್ತಿದ್ದರು. ಒಂದು ದೃಷ್ಟಿಯಿಂದ, ಒಂದು ಸ್ಪರ್ಶದಿಂದ, ಒಂದು ಮುಗುಳ್ನಗೆಯಿಂದ ಅಥವಾ ಒಂದು ಚಿಟಿಕೆ ಉಧಿಯಿಂದ ಅವರ ಹೃದಯದಲ್ಲಿ ಸುಪ್ತವಾಗಿದ್ದ ಆತ್ಮ ಸಾಕ್ಷಾತ್ಕಾರದ ಹಂಬಲವನ್ನು ಜಾಗ್ರತಗೊಳಿಸುತ್ತಿದ್ದರು. ಇದೇ ವ್ಯೂಹವೇ ಕಾರ್ಯ ವಿಧಾನವೇ ಇನ್ನೂ ಭವ್ಯತಮ ಪ್ರಮಾಣದಲ್ಲಿ ಸತ್ಯಸಾಯಿ ಯುಗದಲ್ಲಿ ತೆರೆದುಕೊಳ್ಳುತ್ತಿದೆ. ಈಗ ಇಡೀ ಜಗತ್ತನ್ನೇ ಜಾಗೃತಗೊಳಿಸಬೇಕಾಗಿದೆ, ಸತ್ಯ ಮತ್ತು ಪ್ರೇಮಗಳನ್ನು ಉದ್ಘೋಷಿಸಿ ಅಹಂಕಾರ ಮತ್ತು ಸ್ಕಿಜೋಫ್ರೇನಿಯಗಳಿಂದ ನರಳುತ್ತಿರುವ ಜಗತ್ತನ್ನು ಮೈಕೊಡವಿ ಏಳುವಂತೆ ಮಾಡಬೇಕಾಗಿದೆ. ಶಿರ್ಡಿ ಸ್ವರೂಪದಲ್ಲಿದ್ದಾಗ ಸ್ವಲ್ಪ ಖಾಸಗಿ ಎನಿಸುವ ವಲಯದಲ್ಲಿ ಸಂಭಾಷಣೆಯ ನಡುವೆ ತಾವು ಅವತಾರ ಪುರುಷರು ಎಂಬುದನ್ನು ಪ್ರಕಟಪಡಿಸುತ್ತಿದ್ದರು. ಸತ್ಯಸಾಯಿ ಅವತಾರದಲ್ಲಿ ಯುಗಯುಗಾಂತರಗಳಿಂದ ಮಾನವನು ಪೂಜಿಸುತ್ತಾ ಬಂದಿರುವ ಅಸಂಖ್ಯ ದೇವತಾ ನಾಮರೂಪಗಳೆಲ್ಲ ತಾವೇ ಎಂಬುದನ್ನು ಸಾರ್ವಜನಿಕವಾಗಿ ಇಪ್ಪತ್ತೈದು ಸಾವಿರ ಜನ ಶ್ರೋತೃಗಳೆದುರಿಗೆ ಮುಂಬಯಿಯಲ್ಲಿ ವಿಶ್ವಸಮ್ಮೇಳನದ ಸಮಯದಲ್ಲಿ ಘೋಷಿಸಿದರು. ಆದಾದ ಮೇಲೂ ಅನೇಕ ಸಾರಿ ಲಕ್ಷಾಂತರ ಜನರೆದುರಿಗೆ ಇದನ್ನು ಪ್ರಕಟಿಸಲಾಗಿದೆ. ಫಿಲ್ಮುಗಳು, ಧ್ವನಿ ಸುರುಳಿಗಳು, ಪುಸ್ತಕಗಳು, ಮೌಖಿಕ ಸಾಕ್ಷ್ಯ, ಇತ್ಯಾದಿ ಮಾರ್ಗಗಳಿಂದ ಈ ದಿವ್ಯಶಕ್ತಿಯ ವಿಶಿಷ್ಟತೆಯೂ ಅವರ ಜ್ಞಾನ, ಶಕ್ತಿ, ಪ್ರೇಮ, ಕರುಣೆಗಳೂ ಹೆಚ್ಚು ಹೆಚ್ಚಾಗಿ ಪ್ರೇಮವನ್ನೂ ಭಕ್ತಿಯನ್ನೂ ಆಕರ್ಷಿಸುತ್ತಿವೆ. ಇದು ಮಿಲಿಯಾಂತರ ಜನರನ್ನು ನಿರಂತರ ವಿಸ್ತಾರಗೊಳ್ಳುತ್ತಿರುವ ಒಂದು ಬೃಹತ್ ಮಾನವ ಕುಟುಂಬವಾಗಿ ಒಂದುಗೂಡಿಸುತ್ತದೆ.

## ಗರ್ವಕ್ಕೆ ಶಿಕ್ಷೆ

ಆರ್ಥರ್ ಆಸ್‌ಬಾರ್ನ್ ಒಮ್ಮೆ ಶಿರ್ಡಿ ಸಾಯಿಬಾಬಾ ಅವರು ನಂಬಿಕೆಗೆ ನಿಲುಕದ ವ್ಯಕ್ತಿ ಎಂದರು; ಡಾ. ಎಸ್. ಭಗವಂತಂ, ಸತ್ಯಸಾಯಿಬಾಬಾ ಅವರು ವಿವರಣಾತೀತರು ಎಂದರು; ನಾನು ಅವರನ್ನು ನಿಗೂಢ ವ್ಯಕ್ತಿ ಎಂದು ಹೇಳಬೇಕಾಗಿದೆ. ಉಪನಿಷತ್ತಿನಲ್ಲಿ ಬರುವ ಈ ಕೆಳಗಿನ ಕಥೆಯಲ್ಲಿ ಚಿತ್ರಿತವಾಗಿರುವ ಪರಬ್ರಹ್ಮನೇ ಮೂರ್ತಿಮಂತವಾಗಿ ನಮ್ಮ ಜೊತೆ ಇದ್ದಾನೆ.

ದೇವಾಸುರ ಯುದ್ಧದಲ್ಲಿ ವಿಶ್ವ ಪರಿಪೂರ್ಣನಾದ ಬ್ರಹ್ಮನು ದೇವತೆಗಳಿಗೆ ವಿಜಯವನ್ನು ದೊರಕಿಸಿದನು. ದೇವತೆಗಳು ದಾಸ್ಯದಿಂದ ಭೀತಿಯಿಂದ ಮುಕ್ತರಾಗಿ ಮತ್ತೊಮ್ಮೆ ಶಕ್ತಿಯುತರಾಗಿ ವಿಜೃಂಭಿಸಿದರು. ಆದರೆ ವಿಜಯದ ಮತ್ತಿನಲ್ಲಿ ಯಶಸ್ಸಿಗೆ ತಾವೇ ಕಾರಣವೆಂದು ಅಹಂಕಾರದಿಂದ ಬೀಗಿದರು; ತಮ್ಮ ಸಾಮರ್ಥ್ಯದಿಂದ ಈ ವಿಜಯ ಪ್ರಾಪ್ತವಾಯಿತು ಎಂದು ಕೊಚ್ಚಿಕೊಂಡರು. ಸಮಸ್ತ ಶಕ್ತಿ, ಸಾಮರ್ಥ್ಯ, ಜ್ಞಾನಗಳ ಮೂಲವಾದ ಪರಬ್ರಹ್ಮವನ್ನು ಅವರೂ ಅವಲಂಬಿಸಿದ್ದಾರೆ ಎಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡುವ ಸಲುವಾಗಿ ದಿವ್ಯಶಕ್ತಿಯು, ಅವರಿನ್ನೂ ಪಾಪ

ನರ್ತನಗಳಲ್ಲಿ ತಮ್ಮ ವಿಜಯೋತ್ಸವ ಆಚರಿಸುತ್ತಿರುವಾಗಲೇ ಒಂದು ದೊಡ್ಡ ಬೆಳಕಿನ ಕಂಬವಾಗಿ ಅವರೆದುರಿಗೆ ಪ್ರಕಟವಾಯಿತು. ಈ ವಿಚಿತ್ರವನ್ನು ನೋಡಿ ಅದೇನು, ತಮ್ಮ ಸಂತೋಷಕೂಟಕ್ಕೆ ಅದೇಕೆ ಅಡ್ಡಿಯುಂಟುಮಾಡುತ್ತಿದೆ ಎಂದು ತಿಳಿದುಕೊಳ್ಳಲು ಅವರು ಇಚ್ಛಿಸಿದರು. ಹೋಗಿ ಅದೇನು ನೋಡಿಕೊಂಡು ಬಂದು ವರದಿ ಮಾಡು ಎಂದು ಬೆಂಕಿಯ ದೇವತೆ ಅಗ್ನಿಯನ್ನು ಕಳಿಸಿಕೊಟ್ಟರು. ದಿವ್ಯಶಕ್ತಿಯು ತನ್ನ ಬಳಿಗೆ ಬಂದ ಅಗ್ನಿಯನ್ನು ತಡೆದು ಅವನು ಯಾರೆಂದು ಕೇಳಿತು. "ನಾನು ಅಗ್ನಿ, ನನ್ನ ಸಂಪರ್ಕಕ್ಕೆ ಬಂದ ಸಕಲವನ್ನೂ ಸುಟ್ಟು ಭಸ್ಮ ಮಾಡುತ್ತೇನೆ." ಒಂದು ಒಣ ಹುಲ್ಲು ಕಡ್ಡಿಯನ್ನು ಎದುರಿಗಿಟ್ಟು ಅದನ್ನು ಸಾಧ್ಯವಾದರೆ ಸುಡಬೇಕೆಂದು ಶಕ್ತಿಯು ಆಹ್ವಾನಿಸಿತು. ಎಷ್ಟು ಪ್ರಯತ್ನಿಸಿದರೂ, ಅದ್ಭುತಾಕಾರವಾಗಿ ಬೆಳೆದು ಮೇಲೆ ಬಿದ್ದರೂ ಆ ಒಣ ಹುಲ್ಲು ಕಡ್ಡಿಯನ್ನು ಸುಡಲು ಅಗ್ನಿಗೆ ಸಾಧ್ಯವಾಗಲಿಲ್ಲ. ಅಪಮಾನಿತನಾಗಿ ನಾಚಿಕೆಯಿಂದ ಅಗ್ನಿಯು ದೇವತೆಗಳ ಬಳಿಗೆ ಹಿಂದಿರುಗಿದನು. ಆ ಮೇಲೆ ಗಾಳಿಯ ದೇವತೆ ವಾಯುವಿನ ಸರದಿ ಬಂದಿತು. ಅವನೂ ತನ್ನ ಗರ್ವದ ಮಾತುಗಳನ್ನು ತಾನೇ ನುಂಗಿಕೊಳ್ಳಬೇಕಾಯಿತು. ಆ ಸಣ್ಣ ಹುಲಿನ ದಳವನ್ನು ಹಾರಿಸಲು ವಾಯುವಿಗೆ ಸಾಧ್ಯವಾಗಲಿಲ್ಲ. ದೇವತೆಗಳ ರಾಜ ಇಂದ್ರನಿಗೆ ಈ ಬೆಳಕಿನ ಕಂಬದ ಅಗಾಧ ಸಾಮರ್ಥ್ಯವನ್ನು ಕಂಡು ಕ್ರೋಧ ಉಕ್ಕಿತು. ಅದರೇನು? ಅವನ ಗರ್ವದ ಗುಳ್ಳೆಯೂ ಒಡೆಯಿತು. ತನ್ನಷ್ಟು ದುರ್ಬಲನಾದ ದೇವತೆಯು ಆ ಮಹಾನ್ ದಿವ್ಯಶಕ್ತಿಯನ್ನು ಎದುರಿಸಲೆಂದು ಹೋಗುವುದೇ ಮೂರ್ಖತನ ಎಂಬುದನ್ನು ಅರಿತುಕೊಳ್ಳಬೇಕಾಯಿತು.

ಬಾಬಾ ಇನ್ನೂ ಹದಿವಯಸ್ಕರಾಗಿದ್ದಾಗಲೇ ಘೋಷಿಸಿದ್ದರು: "ಇಂದು ಮಾತ್ರವಲ್ಲ, ಮುಂದೆ ಯಾವುದೇ ಕಾಲಕ್ಕೂ, ಯಾರಿಗೂ ಅವನೆಷ್ಟೇ ಕಷ್ಟಪಟ್ಟು ಪ್ರಯತ್ನಿಸಲಿ, ಯಾವುದೇ ವಿಧಾನವನ್ನು ಅನುಸರಿಸಲಿ, ನನ್ನ ನಿಜವಾದ ಸ್ವರೂಪವನ್ನು ಅಳೆಯಲು ಸಾಧ್ಯವಿಲ್ಲ." ದಿವ್ಯಶಕ್ತಿಯ ವಲಯದಲ್ಲಿ ಯಾವುದೇ ವಿವರಣೆಯು ಸೀಮಿತವಾಗುತ್ತದೆ, ಸಂಕುಚಿತವಾಗುತ್ತದೆ ಅಪವಿತ್ರವಾಗುತ್ತದೆ ಎಂಬುದನ್ನು ವಿಮರ್ಶಕರು, ಟೀಕಾಕಾರರು ಅರ್ಥ ಮಾಡಿಕೊಳ್ಳುವುದಿಲ್ಲ.

## ಕಾಂತಿ ಪರಿವೇಷ

ವಿದ್ವಾಂಸರು, ವಿಜ್ಞಾನಿಗಳು ಹಲವರು ಗರ್ವದಿಂದ ಬೀಗುತ್ತಾ ಸುಮಾರು ನಾಲ್ಕು ದಶಕಗಳಿಗಿಂತಲೂ ಹೆಚ್ಚು ಕಾಲದಿಂದ ಸ್ವಾಮಿಯನ್ನು ವಂಚಕರೆಂದು, ಮಂತ್ರವಾದಿಯೆಂದು, ಇಂದ್ರಜಾಲಿಗನೆಂದು ತೋರಿಸಿಕೊಡುವುದಾಗಿ ಹೇಳಿಕೊಂಡು ಹೊರಟಿದ್ದಾರೆ. ಆದರೆ ಅವರು ಧರಿಸಿದ ಉಡುಗೆಯ ಅಂಚನ್ನೂ ಕಳಂಕಗೊಳಿಸಲು ಅವರಿಗೆ ಸಾಧ್ಯವಾಗಿಲ್ಲ. ಈ ಯುಗದಲ್ಲಿ ಇಂದ್ರಿಯಗಳೇ ಜ್ಞಾನದ ಅಂತಿಮ ಸಾಧನ, ಇಲ್ಲಿ ಭಾವೋದ್ವೇಗವೇ ಬುದ್ಧಿಯನ್ನು ಆಳುತ್ತದೆ, ಪೂರ್ವಾಗ್ರಹವು ಮನಸ್ಸನ್ನು ಮಲಿನಗೊಳಿಸುತ್ತದೆ. ಇಂತಹ ಸನ್ನಿವೇಶದಲ್ಲಿ ಬೆಳಕನ್ನು ಬೀರುವ, ಪ್ರೇಮವನ್ನು ವರ್ಷಿಸುವ, ಸತ್ಯ ಸ್ವರೂಪವಾಗಿರುವ ದಿವ್ಯ ಶಕ್ತಿಯು ಸಂದೇಹಕ್ಕೆ, ಅನುಮಾನ ಅಪಮಾನಗಳಿಗೆ ಗುರಿಯಾಗುವುದು ಸಹಜವೇ. ಪ್ರತಿಯೊಬ್ಬ ಉಪದೇಶಕನೂ ಅವರ ಬಳಿಗೆ ಬಂದು ತಾನು ಅರ್ಥ ಮಾಡಿಕೊಳ್ಳಲಾಗದ ಮಹಾನ್ ಶಕ್ತಿಯನ್ನು ಕಂಡು ಒಪ್ಪಿಕೊಂಡು ಹೋಗುತ್ತಾನೆ. ಆಧುನಿಕ

ವಿಶ್ವವಿದ್ಯಾನಿಲಯಗಳಿಂದ ಹೊರಬಂದ ಅರೆಬೆಂದ ವ್ಯಕ್ತಿಗಳಿಗೆ ಅವರ ಬುದ್ಧಿಯ ಕೊರತೆಯನ್ನೂ, ಇಂದ್ರಿಯಗಳ ಅಸ್ಥಿರತೆಯನ್ನೂ ನೆನಪು ಮಾಡಿಕೊಡುವುದು ಶೀರಾ ಅಹಿತವಾಗಿ ಕಾಣುತ್ತದೆ. ಅವರು ಅದನ್ನು ಸ್ವಾಗತಿಸುವುದಿಲ್ಲ. ಇಷ್ಟಲ್ಲದೆ ಈ ಮಾತನ್ನು ವ್ಯಾಖ್ಯಾನಿಸಿ ವಿವರಿಸುವುದು ಹೇಗೆ? "ಬಾಬಾ ಅವರ ಸುತ್ತಾ ಇರುವ ಪ್ರಭಾ ಪರಿವೇಷಕ್ಕೆ ಕಾರಣ ಅವರು ಸೃಷ್ಟಿಸಿ ಜನರಿಗೆ ಕೊಡುವ ವಸ್ತುಗಳು. ಅವು ಜನರಿಗೆ ಪ್ರಿಯವಾಗುತ್ತವೆ. ಅವರ ಅಚ್ಚರಿಯನ್ನು ಬೆಳೆಸುತ್ತವೆ."

ಶ್ರೀ ಎಂ. ರಸಗೋತ್ರ ಅವರೇ ಆ ಕಾಂತಿ ಪರಿವೇಷ ಯಾವುದರ ಮೇಲೆ ನಿಂತಿದೆ ಎಂಬುದನ್ನು ವಿವರಿಸಲಿ. "ನಾವೆಲ್ಲ ಸಂದರ್ಶನ ಕೊಠಡಿಯಲ್ಲಿ ಬಾಬಾ ಅವರನ್ನು ಸಂಧಿಸಿ ಉಲ್ಲಾಸದಿಂದ, ಉತ್ಸಾಹದಿಂದ ಹೊರಬರುತ್ತೇವೆ. ಅವರು ನಮ್ಮ ಹರಿದು ತೇಪೆ ಹಾಕಿದ್ದ ಅಹಂಕಾರದ ಅಂಗಿಗಳನ್ನು ಕಳಚಿ ಹಾಕಿ, ಪ್ರೇಮದ ಹೊಚ್ಚ ಹೊಸ ಉಡುಗೆಯನ್ನು ತೊಡಿಸಿ, ನೂತನ ಗುರಿಯ ಕಡೆಗೆ ಹೊಸದಾಗಿ ಯಾತ್ರೆ ಕೈಗೊಳ್ಳುವಂತೆ ಮಾಡಿ ಕಳಿಸುತ್ತಾರೆ. ಸಂಪರ್ಕದ ಮೊತ್ತ ಮೊದಲ ಕ್ಷಣದಲ್ಲಿಯೇ ಪರಿವರ್ತನೆ ಪ್ರಾರಂಭವಾಗುತ್ತದೆ. ಅಲ್ಲಿಂದ ಮುಂದೆ ಅವಿರತವಾದ, ಯಾರೂ ತಡೆದುಕೊಳ್ಳಲಾಗದ ಉದ್ಧಾರಕ್ರಿಯೆ ಎಂದೂ ಕ್ಷೀಣವಾಗುವುದಿಲ್ಲ."

ಪ್ರಶಾಂತಿ ನಿಲಯದಲ್ಲಿ ನಡೆದ ಒಂದು ವಿವಾಹವನ್ನು ಶ್ರೀ ಬಿ. ರಮಾನಂದ ವಿವರಿಸಿದ್ದಾರೆ. ಅವರು ಬಾಬಾರನ್ನು ಮೊದಲನೆಯ ಸಾರಿ ನೋಡಿದ್ದು ಆಗಲೇ. "ಐದೇ ನಿಮಿಷಗಳಲ್ಲಿ ಅವರು ನಮ್ಮವರೇ ಎಂಬ ಭಾವನೆ ಬಂದುಬಿಟ್ಟಿತು. ಬಹು ದೀರ್ಘಕಾಲದಿಂದ ಅತ್ಯಂತ ಆತ್ಮೀಯವಾಗಿ ನಮ್ಮನ್ನು ಬಲ್ಲರು ಎನ್ನುವ ಹಾಗೆ ಅವರು ಮಾತನಾಡಿದರು. ಈ ಆಳವಾದ ಮಾನವೀಯತೆ, ತಾವು ಸಂಧಿಸುವ ಪ್ರತಿಯೊಬ್ಬರ ಬಗೆಗೂ ತೋರಿಸುವ ಈ ಅನನ್ಯ ಸಖ್ಯ, ತಮ್ಮ ಸುತ್ತ ಇರುವವರೊಂದಿಗೆ ಒಂದಾಗಿರುವ ಈ ಗುಣ ಅದ್ಭುತವಾದದ್ದು. ಶುದ್ಧವಾದ ಹಾಸ್ಯ, ಸಮೃದ್ಧ ಸಂತೋಷ, ಪ್ರೇಮ, ಎಲ್ಲರ ಬಗೆಗೂ ಅಕ್ಕರೆ ಇವು ನನ್ನ ಮೇಲೆ ಅಳಿಯದ ಪ್ರಭಾವ ಬೀರಿದುವು."

ಅತಿಯಾದ ವಿವಾದಗಳಿಗೆ ಗುರಿಯಾಗಿರುವ ಪವಾಡಗಳು ತಮ್ಮ ನಿಜವಾದ ಉದ್ದೇಶಕ್ಕೆ ಹೋಲಿಸಿದರೆ ಆನೆಯೆದುರು ಇಟ್ಟ ಸೊಳ್ಳೆಯ ಹಾಗೆ ಗೌಣ ಎಂದು ಬಾಬಾ ಹೇಳುತ್ತಾರೆ. ಅವರ ಪ್ರೇಮದ ಪ್ರಭಾವದಿಂದ ಗಟ್ಟಿಗೊಂಡ ಹೃದಯಗಳಿಂದ, ಅವರ ಕರುಣೆಯ ಕಾಂತಿಯಿಂದ ಶುದ್ಧಗೊಂಡ ಮನಸ್ಸುಗಳ ಮೂಲಕ, ಅವರ ಜ್ಞಾನವನ್ನು ಅರಗಿಸಿಕೊಂಡು ಆರೋಗ್ಯ ಪೂರ್ಣವೂ ಸಂತುಲಿತವೂ ಆದ ಬುದ್ಧಿಗಳಿಂದ, ಅವರ ಅನುಗ್ರಹವನ್ನು ಹೀರಿ ಬಲಗೊಂಡು ವಕ್ರತೆ ಕಳೆದು ನೇರವಾದ ದೇಹಗಳಿಂದ ಅವರ ಶ್ರೀ ಚರಣಗಳಿಗೆರಗಿ ಕೃತಜ್ಞತೆ ಅರ್ಪಿಸುತ್ತೇವೆ.

ರಿಚರ್ಡ್ ಬಾಕ್ ಲಾಸ್ ಏಂಜಲಿಸ್‌ನವರು. ಬಾಬಾ ಬಳಿಗೆ ಗುರುವಿನ ಬಳಿಗೆ ಹೋಗುವ ಶಿಷ್ಯನಂತೆ ವಿನಯದಿಂದ ಹೋಗಬೇಕೆಂದು ರವಿಶಂಕರ್ ಮತ್ತು ಇಂದ್ರಾದೇವಿ ಅವರಿಗೆ ಸಲಹೆ ಕೊಟ್ಟರು. ಅವರು ಬರೆಯುತ್ತಾರೆ. ನೂರೆಂಟು ಮಣಿಗಳ ಜಪಮಾಲೆಯನ್ನು ಕೊರಳಿನಲ್ಲಿ ಬ್ಯಾಡ್ಜಿನಂತೆ ಧರಿಸಿಕೊಂಡು ನಾನು ಓಡಾಡುತ್ತಿದ್ದ ಕಾಲವೊಂದಿತ್ತು. ಬಾಬಾ ಅವರು ನನ್ನ ಬಳಿಗೆ ಬಂದರು, ಅದನ್ನು ನೋಡಿದರು. 'ಓಂ ಗೆ ಇದು ಬಹಳ ಭಾರ' ಎಂದು ಹೇಳಿ ಹೊರಟು ಹೋದರು. ಅಂದರೆ

ನಾನು ಪ್ರದರ್ಶನ ಮಾಡಿಕೊಳ್ಳುತ್ತಿದ್ದೇನೆ ಎಂಬುದು ಅವರ ಅರ್ಥವಾಗಿತ್ತು. ಹಾಗೆ ಜಪಮಾಲೆ ಧರಿಸುವುದರಲ್ಲಿ ಅರ್ಥವಿಲ್ಲ ಎಂದು ತಿಳಿದುಕೊಂಡೆ. ಬಾಬಾ ಕೊಠಡಿಗೆ ಬಂದಾಗ ಮಿಕ್ಕ ಎಲ್ಲರ ಹಾಗೆಯೇ ನಾನೂ ಕೈ ಮುಗಿದು ನಮಸ್ತೆ ಮಾಡಿದೆ. ಅವರು ಬಳಿಗೆ ಬಂದು ನನ್ನ ಕೈ ಮೇಲೆ ಹೊಡೆದು 'ಝೂಟಾ ಭಕ್ತಿ' ಎಂದು ಹೇಳಿಬಿಟ್ಟರು. ಆ ಮಾತಿನ ಅರ್ಥ ಸುಳ್ಳು ಭಕ್ತಿ ಎಂಬುದು ನನಗೆ ಆ ಮೇಲೆ ತಿಳಿದಾಗ, ನಿಜ ನಾನು ಏನು ಮಾಡುತ್ತಿದ್ದೇನೆ ಎಂಬುದನ್ನು ಅರಿತುಕೊಳ್ಳದೆ ಮಾಡುತ್ತಿದ್ದೇನೆ ಎಂಬುದು ಅರ್ಥವಾಯಿತು. ನಿಮ್ಮ ಹೃದಯದಲ್ಲಿ ಒಂದು ಕೆಲಸ ಮಾಡಬೇಕೆಂದು ಅನ್ನಿಸುವವರೆಗೂ ಯಾವುದೇ ಒಂದು ಆಚರಣೆಯನ್ನೂ ಮಾಡಬಾರದು ಎಂಬುದನ್ನು ಅವರು ನನಗೆ ಕಲಿಸುತ್ತಿದ್ದರು. ಪ್ರತಿಯೊಬ್ಬರೂ ಅವರ ಪಾದಗಳನ್ನು ಸ್ಪರ್ಶಿಸಲು ಬಯಸುತ್ತಿದ್ದರು, ನಾನೂ ಹಾಗೆ ಮಾಡಬೇಕಾಗಿದೆಯೇನೋ ಎಂದುಕೊಂಡೆ. ಅವರ ಪಾದಗಳನ್ನು ಸ್ಪರ್ಶಿಸಲು ಪ್ರಯತ್ನಿಸಿದಾಗ ಅವರು 'ಬೇಡ' ಎಂದರು. ಪ್ರತಿಯೊಬ್ಬರೂ ಮಾಡುತ್ತಿದ್ದರೆಂಬುದಕ್ಕಾಗಿ ನಾನೂ ಪಾದ ಸ್ಪರ್ಶ ಮಾಡಲು ಹೊರಟಿದ್ದೇನೇ ಹೊರತು ಆ ಸಮಯದಲ್ಲಿ ಭಗವಾನರ ಪಾದಸ್ಪರ್ಶ ಮಾಡಬೇಕೆಂಬ ಬಯಕೆ ನನ್ನ ಹೃದಯದಿಂದ ಪ್ರೇರಿತವಾಗಿರಲಿಲ್ಲ."

## ನನಗೆ ನೀನು ಬೇಕು

ಉಪನಿಷತ್ತಿನ ಅಗ್ನಿದೇವತೆಯಂತೆ ಆರ್ನಾಲ್ಡ್ ಪುಲ್‌ಮನ್ ಕೂಡ ಸಾಯಿ ಶಕ್ತಿಯನ್ನು ಅವಗಣಿಸಿದನು. ಭಾರತ ಪ್ರವಾಸದ ನಡುವೆ ಬೃಂದಾವನಕ್ಕೆ ಭೇಟಿ ನೀಡಿ ಬಾಬಾ ಅವರೊಂದಿಗೆ ಕೆಲವು ನಿಮಿಷಗಳು ಕಳೆದಿದ್ದರೂ, ಅಷ್ಟರಿಂದ ಅವನು ಭಾರತದ ಅನುಭಾವಿಗಳು ಜಾಣ ಶೋಷಕರು, ಅವರ ಶಿಷ್ಯರು ಮನೋರೋಗ ನಿರ್ಬಂಧಕರು ಎಂಬ ನಿರ್ಣಯಕ್ಕೆ ಬಂದನು, ಆ ನಿರ್ಣಯದಿಂದ ಸಂತೋಷಪಟ್ಟನು. "ನನ್ನನ್ನು ನಿರಾಕರಿಸುವವರು ಅಜ್ಞಾನ ಅಥವಾ ಗರ್ವದಿಂದ ಕುರುಡಾಗಿದ್ದಾರೆ, ಆದ್ದರಿಂದ ಅವರ ಮೇಲೆ ಹೆಚ್ಚಿನ ಕರುಣೆ, ಅನುಗ್ರಹ ತೋರಿಸಬೇಕಾದ ಅವಶ್ಯಕತೆ ಇದೆ ಯಾರು ದೂರ ಉಳಿದಿದ್ದಾರೆಯೋ ಅವರನ್ನು ಮರಳಿ ಬಳಿಗೆ ಸೆಳೆಯುತ್ತೇನೆ" ಎಂದು ಬಾಬಾ ಹೇಳಿದ್ದಾರೆ. ಯಾರಿಂದ ಯಾವುದನ್ನೂ ಮರೆ ಮಾಡಿ ಇಡುವುದು ಸಾಧ್ಯವಿಲ್ಲವೋ, ಯಾರಿಗೆ ಯಾವ ವ್ಯಕ್ತಿಯೂ ದೂರದವನಲ್ಲವೋ ಆ ಬಾಬಾ ಈ ಕಣ್ಣಡೆ ಕಟ್ಟಿಕೊಂಡ ಪ್ರವಾಸಿಗನ ಆಲೋಚನೆ ತಿಳಿಯರೇನು? ಬಾಬಾ ಅವರನ್ನು ಕುರಿತು ಒಂದು ಪುಸ್ತಕ ಬರೆಯಬೇಕು ಎಂಬ ಆಲೋಚನೆಯ ಭೂತ ಅವನನ್ನು ಮೆಟ್ಟಿಕೊಂಡಿತು. ಈ ಯೋಚನೆಯನ್ನು ವಿವರಿಸಿಕೊಳ್ಳಲು, ತಳ್ಳಿ ಹಾಕಲು, ವಿಚಾರವಂತಿಕೆಯಿಂದ ಅಡಗಿಸಲು, ನಿರಾಕರಿಸಲು ಎಷ್ಟೆಷ್ಟೋ ಪ್ರಯತ್ನಪಟ್ಟನು. ಆದರೂ ಅವನನ್ನು ಅದು ಸುಮ್ಮನಿರಲು ಬಿಡಲಿಲ್ಲ. ಈ ಕೆಲಸ ಒಂದು ಹುಚ್ಚು, ಅವಾಸ್ತವಿಕ, ಅಸಾಧ್ಯ ಎಂದು ಹೇಳಿಕೊಂಡನು. ಆದರೇನು ಯೋಚನೆ ಅವನ ಮೇಲಿನ ತನ್ನ ಹಿಡಿತವನ್ನು ಬಿಡಲಿಲ್ಲ. ಮೂರು ತಿಂಗಳ ನಂತರ, ಸಂದರ್ಶನ ಪಡೆಯಲು ಸಾಧ್ಯವಾದಾಗ ಅವನಿಗೆ ಬಾಬಾ ಹೇಳಿದರು: "ನಿನ್ನ ಪುಸ್ತಕ ನನಗೆ ಬೇಕು ಎಂಬ ಕಾರಣದಿಂದ ನಿನಗೆ ಬರೆಯಲು ನಾನು ಹೇಳಲಿಲ್ಲ; ಪುಸ್ತಕ ಎಂದರೆ ಪ್ರಚಾರ. ನನಗೆ ಪ್ರಚಾರ ಬೇಕಾಗಿಲ್ಲ. ನನಗೆ ನೀನು ಬೇಕು, ನೀನು, ನೀನು!" ಅನುಭಾವಿಗಳು ಮತ್ತು ಅವರ ಶಿಷ್ಯರ ಬಗೆಗೆ ತಳೆದಿದ್ದ ಭ್ರಮೆಯ ಮುಸುಕನ್ನು ಕಳಚಿ, ಹೊಸ ದರ್ಶನ ಪಡೆದು ಹೆಚ್ಚು ಜ್ಞಾನಿಯಾಗಿ, ಹೆಚ್ಚು ಸಂತುಷ್ಟನಾಗಿ ಅವನು ಅಮೆರಿಕಕ್ಕೆ ಮರಳಿ ಹೋಗುವಂತೆ ಮಾಡಿದರು.

ಉಪನಿಷತ್ತಿನ ವಾಯುದೇವತೆಯಂತೆ ಸ್ಯಾಮ್ಯುಯಲ್ ಸ್ಯಾಂಡ್‌ವಿಸ್, ಎಂ. ಡಿ., ಸುಪ್ರಸಿದ್ಧ ಮನೋವೈದ್ಯರು, ಈ ಮಹಾನ್ ಸಾಯಿಶಕ್ತಿಯ ಬಳಿಗೆ ಬಂದರು; ಅದರ ಭವ್ಯತೆಯ ಆಡಂಬರದ ಗುಳ್ಳೆಯನ್ನು ಒಡೆದು ಬಯಲು ಮಾಡುವ ಪೂರ್ಣ ವಿಶ್ವಾಸದಿಂದ ಬಂದರು. ಅವರು ಬರೆಯುತ್ತಾರೆ: "ಅನುಭಾವದ ಮುಸುಕು ಹಾಕಿಕೊಂಡ ಸಂದರ್ಭದ ಮನಶಾಸ್ತ್ರೀಯ ವಾಸ್ತವತೆಗಳನ್ನು ಅಧ್ಯಯನ ಮಾಡಿ ಅರ್ಥ ಮಾಡಿಕೊಳ್ಳಲು, ಪವಾಡಗಳಿರುವುದು ಸಾಧ್ಯವಿಲ್ಲ ಎಂದು ಸಮರ್ಥಿಸಿ ತೋರಿಸಲು ಸಾಯಿ ಶಕ್ತಿಯ ಸನ್ನಿಧಿಗೆ ಬಂದರು. ಸ್ವಲ್ಪದರಲ್ಲೇ ತಮ್ಮ ಭವಿಷ್ಯತ್ತನ್ನು ನಿಯಂತ್ರಿಸುವ ಮಹಾಶಕ್ತಿಯ ಅರಿವಿಲ್ಲದೆ ಕುಡಿತ ನರ್ತನಗಳಲ್ಲಿ ಮುಳುಗಿ ಹೋಗಿದ್ದ ಜೊತೆಗಾರರ ಬಳಿಗೆ ವಾಯುದೇವ ಹಿಂದಿರುಗಿದ ಹಾಗೆಯೇ ಹಿಂದಿರುಗಿದರು. ಯೋಗವನ್ನು ಕುರಿತಾದ ಕೆಲವು ಸಲಹೆಗಳನ್ನು ಪಡೆಯುವುದಕ್ಕಾಗಿ ಇಂದ್ರಾದೇವಿಯ ಬಳಿಗೆ ಹೋಗಿದ್ದ ಸ್ಯಾಂಡ್‌ವಿಸ್, ಅವರಿಂದ ಬಾಬಾ ಅವರ ಬಗೆಗೆ ಅಸಾಧಾರಣವಾದ ಸಂಗತಿಗಳನ್ನು ಕೇಳಿ ತಾವೇ ನೇರವಾಗಿ ಸಂಧಿಸಲೆಂದು ಬಂದಿದ್ದರು. ಬಾಬಾ ಪ್ರಶಾಂತಿನಿಲಯದಲ್ಲೋ ಬೃಂದಾವನದಲ್ಲೋ ಇರುವಾಗಲೇ ಕನಸುಗಳ ಮೂಲಕ, ದರ್ಶನಗಳ ಮೂಲಕ ಹಂಬಲವನ್ನು ಉದ್ದೀಪಿಸುತ್ತಾರೆ, ಕುತೂಹಲವನ್ನೂ ಆಸಕ್ತಿಯನ್ನೂ ಕೆರಳಿಸುತ್ತಾರೆ, ತೃಷೆಯನ್ನು ಕೆರಳಿಸುತ್ತಾರೆ, ಸಾಂತ್ವನ, ಸಮಾಧಾನಗಳ ಭರವಸೆ ಕೊಡುತ್ತಾರೆ, ಎಚ್ಚರಿಕೆ ಕೊಡುತ್ತಾರೆ, ತಪ್ಪು ಮಾಡಿದ್ದರೆ ಖಂಡಿಸುತ್ತಾರೆ. ಆಶೆ, ವಿಶ್ವಾಸಗಳಿಂದ ಅವರ ಸನ್ನಿಧಿಗೆ ಹೋದ ಪ್ರತಿಯೊಬ್ಬರ ಬಳಿಯೂ ಹೇಳಲು ಒಂದು ಕಥೆಯಿರುತ್ತದೆ. ಅವು ಒಂದಕ್ಕಿಂತ ಒಂದು ರೋಚಕ, ಚೇತೋಹಾರಿ, ವಿಶ್ವಾಸಪ್ರದ ಆಗಿರುತ್ತವೆ.

ನನ್ನನ್ನು ನಾನು ಆ ಗರ್ವಿಷ್ಠ ಇಂದ್ರನಿಗೆ ಹೋಲಿಸಿಕೊಳ್ಳುತ್ತೇನೆ, ಕ್ಷಮಿಸಬೇಕು. 1948 ರಲ್ಲಿ ಬಾಬಾ ಅವರ ಪವಾಡಗಳನ್ನು ಸಹಿಸಿಕೊಳ್ಳಲಾಗದಷ್ಟು ಉದ್ಧಟನಾಗಿದ್ದೆ. ಆದರೂ ಸ್ವತಃ ಪರೀಕ್ಷೆ ಮಾಡದೆಯೇ ಅವರನ್ನು ಒಪ್ಪಿಕೊಳ್ಳುವಷ್ಟು ಮಟ್ಟಿಗೆ ಕುತೂಹಲಿಯೂ ಆಗಿದ್ದೆ. ಆಗ ನಾನು ಕನ್ನಡ ಮಾತನಾಡುವ ಪ್ರದೇಶ- ಕರ್ನಾಟಕದ ಹಾಸ್ಯ ಲೇಖಕನಾಗಿದ್ದೆ. ನನ್ನ ಕೃತಿಗಳನ್ನು ಅನೇಕ ಜನ ಓದುತ್ತಿದ್ದರು. ಕನ್ನಡದ ಸ್ಟೀಫನ್ ಲೀಕಾಕ್ ಎಂದು ನಾನು ಮೆಚ್ಚಿಗೆ ಪಡೆದಿದ್ದೆ. ಆಗ ನಾನು ಬಾಬಾ ಅವರನ್ನು ನನ್ನ ಹಾಸ್ಯದ ಗುರಿಯನ್ನಾಗಿ ಮಾಡಿದೆ. 'ಸಾಯಿ' ಎಂಬ ಶಬ್ದಕ್ಕೆ ಕನ್ನಡದಲ್ಲಿ 'ಪ್ರಾಣಬಿಡು', 'ಸತ್ತು ಹೋಗು' ಎಂಬ ಆಜ್ಞಾ ಸೂಚಕ ಅರ್ಥವಿದೆ. 'ಸಾಯಿ' ಎಂದು ಕರೆಯಿಸಿಕೊಳ್ಳಬಯಸುವ ವ್ಯಕ್ತಿಯನ್ನು ಕರ್ನಾಟಕದಲ್ಲಿ ಪೂಜಿಸುವುದು ಹೇಗೆ? ಎಂದು ನಾನು ವ್ಯಂಗ್ಯವಾಡಿದ್ದೆ. ಅಲ್ಲದೆ ರಾಮಕೃಷ್ಣ ಮಿಷನ್ನಿನ ಸಾಧುಗಳು ಹರಡಿದ್ದ ಆದೇಶವನ್ನು ವಿವೇಚನೆಯಿಲ್ಲದೆ ನುಂಗಿದ್ದೆ. ಪವಾಡಗಳನ್ನು ಮಾಡುವುದು ಆಧ್ಯಾತ್ಮಿಕ ಕಾರ್ಯವಲ್ಲ, ಅದು ಸಾಧಕನನ್ನು ಲೌಕಿಕತೆಯ ಮಡುವಿಗೆ ಸೆಳೆದುಬಿಡುತ್ತದೆ ಎಂದು ಅವರು ಹೇಳುತ್ತಿದ್ದರು. ಆದ್ದರಿಂದ ಸೀದಾ ಹೋಗಿ ಬಾಬಾ ಅವರನ್ನು ಬಯಲಿಗೆಳೆಯುತ್ತೇನೆ ವಿವರಿಸುತ್ತೇನೆ ಎಂಬ ಆಸೆಯಿಂದ ಅವರ ಬಳಿಗೆ ಹೋದೆ. ಮುಖಾಮುಖಿಯಾದ ಮೇಲೆ ಉಪನಿಷತ್ತಿನ ಇಂದ್ರನಂತೆಯೇ ನನ್ನ ಗರ್ವ ಸೋರಿ ಹೋಗಿ, ಪೂರ್ವಗ್ರಹಗಳು ಕಿತ್ತು ಹೋಗಿ, ದೃಷ್ಟಿ ಶುದ್ಧವಾಗಿ ಹಿಂದಿರುಗಿದೆ. ಆಗಿನಿಂದ ಬಾಬಾ ಅವರ ಸಂದೇಶವನ್ನು ಪಾಲಿಸಬೇಕೆಂದೂ ಮಾನವ ಜನಾಂಗದ ಉದ್ಧಾರಕರಾದ್ದರಿಂದ ಅವರನ್ನು ಪೂಜಿಸಬೇಕೆಂದೂ ಎಲ್ಲರಿಗೂ ಹೇಳುತ್ತಾ ಬಂದಿದ್ದೇನೆ. ಅವರನ್ನು

ಖಂಡಿಸುವ, ಅಥವಾ ನಿರಾಕರಿಸುವ ಔದ್ಧತ್ಯ ತೋರಿಸುವವರು ಕೊನೆಗೆ ಅವರ ಬಳಿಗೇ ಬಂದು ಕೈ ಮುಗಿದು, ಮೆತುಗೊಂಡ ಮನಸ್ಸಿನಿಂದ, ಅವರ ರೂಪನ್ನು ಧ್ಯಾನಿಸುತ್ತಾ, ಅವರ ನಾಮಸ್ಮರಣೆ ಮಾಡುತ್ತಾ, ತಮ್ಮನ್ನು ತಾವು ಉದ್ಧರಿಸಿಕೊಳ್ಳುತ್ತಾ ನಿಲ್ಲುತ್ತಾರೆ.

## ಸಾಕ್ಷ್ಯ ಚಿತ್ರ

ಆರ್ನಾಲ್ಡ್ ಪುಲ್‌ಮನ್ ಬಾಬಾರನ್ನು ಕೇಳಿದರು. "ನೀವು ದೇವರೆ?" ಅದಕ್ಕೆ ಬಾಬಾ ಉತ್ತರ ಕೊಟ್ಟರು: "ಒಂದು ಇರುವೆಯು ಒಂದು ಸಾಗರವನ್ನು ಹೇಗೆ ಅಳೆಯಬಲ್ಲುದು ಅಥವಾ ಒಂದು ಮೀನು ಆಕಾಶದ ಸತ್ಯವನ್ನು ಹೇಗೆ ಕಂಡು ಹಿಡಿಯಬಲ್ಲುದು?" ಈ ಉತ್ತರ ನಮ್ಮ ವಿಚಾರದ ಶಕ್ತಿಯನ್ನು ಮೂಕಗೊಳಿಸುತ್ತದೆ. ಬಾಬಾ ಅವರ ಪ್ರತಿಯೊಂದು ಕೃತಿಯೂ ಅದೇ ಪರಿಣಾಮವನ್ನುಂಟು ಮಾಡುತ್ತದೆ.

ಮೂವತ್ತೊಂದು ವರ್ಷ ಅವರನ್ನು ಬಲ್ಲ ನಾನು ಇಂದ್ರಾ ದೇವಿಯ ಈ ಅನುಭವವನ್ನು ವಿಶ್ವಾಸಾರ್ಹವಲ್ಲವೆಂದು ಹೇಳಲಾರೆ. ಹಾಗೆ ಹೇಳುವುದು ದೈವದ್ರೋಹವಾಗುತ್ತದೆ. ಆಕೆಯ ಅನುಭವ ಇದು: "ಭಗವಾನರ ಚಿತ್ರದತ್ತ ತಿರುಗಿ 'ಭಗವಾನ್, ನನ್ನನ್ನು ನಿಮ್ಮ ಜನ್ಮದಿನೋತ್ಸವಕ್ಕೆ ಪುಟ್ಟಪರ್ತಿಗೆ ಕರೆಸಿಕೊಳ್ಳಿ' ಎಂದು ಮೊರೆಯಿಟ್ಟೆ. ಎರಡು ದಿನಗಳ ನಂತರ, ಟಿಕೇಟ್‌ನ ಸಾಯಿಸೆಂಟರ್‌ಗೆ ಬಂದಿದ್ದ ಒಬ್ಬ ತರುಣ ನನಗೆ ಟೆಲಿಫೋನ್ ಮಾಡಿದ. 'ಮಾತಾಜಿ, ವಾರ್ನರ್ ಬ್ರದರ್ಸ್ ಅವರು ನಿಮ್ಮ ವೆಚ್ಚಗಳನ್ನು ನಿರ್ವಹಿಸುವುದಾದರೆ ನೀವು ಭಾರತಕ್ಕೆ ನಾಳೆ ಹೋಗಬಲ್ಲಿರಾ? ಬಾಬಾ ಅವರ ಜೀವನವನ್ನು ಕುರಿತು ವಾರ್ನರ್ ಬದ್ರರ್ಸ್ ಸಂಸ್ಥೆಯವರು ಒಂದು ಸಾಕ್ಷ್ಯಚಿತ್ರ ತೆಗೆಯುವ ಉದ್ದೇಶ ಹೊಂದಿದ್ದಾರೆ. ಅದಕ್ಕೆ ಬಾಬಾ ಅವರ ಅನುಮತಿ ಬೇಕು' ಇಂದ್ರಾದೇವಿಯನ್ನು ವಿಮಾನ ನಿಲ್ದಾಣದಲ್ಲಿ ಯಾರೋ ಒಬ್ಬರು ಸಂಧಿಸಿದರು. ಪ್ರಯಾಣ ಮಾಡಿ ಆಕೆ ಪ್ರಶಾಂತಿ ನಿಲಯಕ್ಕೆ ಬಂದರು. ಸಿದ್ಧವಾಗಲಿರುವ ಸಾಕ್ಷ್ಯಚಿತ್ರದ ಬಗೆಗೆ ಬೇಕಾದಷ್ಟು ಕಲ್ಪಿಸಿಕೊಂಡು ಹಿಗ್ಗುತ್ತಾ ಬಂದರು. ಜನ್ಮದಿನೋತ್ಸವ ಸಮಾರಂಭಗಳಲ್ಲಿ ಭಾಗವಹಿಸಿದರು. ಆಮೇಲೆ ಸಲಹೆಗೆ ಬಾಬಾ ಅವರ ಪ್ರತಿಕ್ರಿಯೆಯನ್ನು ಪಡೆದು ಆಕೆ ಸ್ವದೇಶಕ್ಕೆ ಮರಳಿದರು. ಆದರೆ ಈ ಪ್ರಯಾಣವನ್ನು ವ್ಯವಸ್ಥೆ ಮಾಡಿದ್ದ ವಾರ್ನರ್ ಬ್ರದರ್ಸ್ ಸಂಸ್ಥೆಗೆ ಫೋನ್ ಮಾಡಿದರೆ "ಅಲ್ಲಿ ಯಾರಿಗೂ ನಾನು ಯಾರೆಂದೇ ತಿಳಿದಿರಲಿಲ್ಲ. ಈ ಪ್ರಯಾಣದ ವಿಚಾರವಾಗಲಿ, ಫಿಲ್ಮಿನ ವಿಷಯವಾಗಲಿ, ಭಗವಾನರ ಬಗೆಗಾಗಲಿ ಏನೊಂದೂ ತಿಳಿದಿರಲಿಲ್ಲ. ಮುಖ ಕೆಂಪಗೆ ಮಾಡಿಕೊಂಡ ಒಬ್ಬ ಉದ್ಯೋಗಿಯು ಈ ವಿಷಯ ಪರಿಶೀಲನೆ ಮಾಡಿ ತಿಳಿಸುವುದಾಗಿ ಹೇಳಿದನು. ವರ್ಷಗಳು ಉರುಳಿವೆ. ಆತನ ವಿಚಾರಣೆ ಏನಾಯಿತು ಎಂದು ತಿಳಿಯಲು ಕಾತರಳಾಗಿ ಇನ್ನು ಕಾಯುತ್ತಲೇ ಇದ್ದೇನೆ!".

ಪೆಸಿಫಿಕ್ ಕರಾವಳಿಯ ಸ್ಯಾನ್ ಡೀಗೋದಿಂದ ಮೂರಿಯೆಲ್ ಎಂಗಲ್ ಬರೆಯುತ್ತಾಳೆ : "ರೂತ್‌ಗೆ ಮೆಕ್ಸಿಕೋದಲ್ಲಿ ಶಿಕ್ಷಕಿಯ ಕೆಲಸ. ಅಲ್ಲಿಗೆ ಹೋಗಿ ಬಂದು ಮಾಡುತ್ತಿರುತ್ತಾಳೆ. ಸಂತಾ ಬಾರ್ಬರಾದಲ್ಲಿ ನಡೆಯುವ ಭಜನೆಗೆ ಪ್ರತಿ ಗುರುವಾರ ಹೋಗಿ ಭಾಗವಹಿಸುತ್ತಾಳೆ. ಆದರೆ ಇನ್ನೂ

ಅವಳು ಸಂದೇಹ ಕಳೆದುಕೊಂಡಿಲ್ಲ. ಬಹಳ ಕಾಲದಿಂದ ಅವಳು ಅನಾರೋಗ್ಯ ಪೀಡಿತಳು. ಪದೇ ಪದೇ ಬರುವ ನೋವು ಅನೇಕ ದಿನ ಎಳೆಯುವಂಥದು, ಸಹಿಸಲಾಗದ ಯಾತನೆ. ಒಂದು ಸಂಜೆ ತನ್ನ ಪುಟ್ಟ ಕೊಠಡಿಯಲ್ಲಿ ನೋವು ತಡೆಯಲಾರದೆ ಅವಳು ಕಿರಿಚಿಕೊಳ್ಳುತ್ತಿದ್ದಳು. "ಯಾರಾದರೂ ನನಗೆ ಸಹಾಯಮಾಡಬಾರದೆ? ಯಾಕಾಗಿ ನನಗೆ ಈ ಯಾತನೆ? ತಡೆಯಲಾರೆನಲ್ಲ, ಏನು ಮಾಡಲಿ? ಸಹಾಯ! ಸಹಾಯ!" ಎಂದು ಕೂಗುತ್ತಿದ್ದಳು.

ಇದ್ದಕ್ಕಿದ್ದಂತೆ ಅವಳ ಹೆಗಲ ಮೇಲೆ ಯಾರೋ ಮೃದುವಾಗಿ ಮುಟ್ಟಿದ ಅನುಭವವಾಯಿತು. ಕಿರಿಚುವುದನ್ನು ನಿಲ್ಲಿಸಿ ತಿರುಗಿ ನೋಡಿದರೆ, ಬಾಬಾ ಅವಳ ಮಂಚದ ಪಕ್ಕದಲ್ಲಿ ನಿಂತುಕೊಂಡಿದ್ದರು. "ಕೂಗಬೇಡ, ನಾನು ಸದಾ ಇಲ್ಲಿಯೇ ಇದ್ದೇನೆ" ಎಂದು ನುಡಿದು ಅವರು ಮಾಯವಾದರು, ಅವರೊಂದಿಗೆ ಅವಳ ನೋವೂ ಹೊರಟುಹೋಯಿತು. ಇದು ಬಾಬಾ ಅವರ ಸರ್ವವ್ಯಾಪಿತ್ವಕ್ಕೆ ಇನ್ನೊಂದು ಸಾಕ್ಷಿ. ಬಾಬಾ ಹೇಳುತ್ತಾರೆ: "ದೇವರು ಒಬ್ಬನೇ, ಅವನು ಸರ್ವವ್ಯಾಪಿ. ಅವನಿಗೆ ಅತ್ಯಂತ ಪ್ರಿಯವಾದ ವಾಸಸ್ಥಾನ, ಆಯ್ದ ಅನುಯಾಯಿಗಳು, ವಿಶೇಷ ಭಕ್ತರ ಸಮೂಹ ಎಂಬ ವಿವಕ್ಷೆ ಯಾವುದೂ ಇಲ್ಲ. ಕರೆಯಿರಿ- ಅವನು ಉತ್ತರ ಕೊಡುತ್ತಾನೆ. ಪ್ರಕಟಗೊಳ್ಳುತ್ತಾನೆ, ಅನುಗ್ರಹಿಸುತ್ತಾನೆ."

## ಅವರಿಗೆ ಪತ್ರಗಳು

ಉಸ್ಮಾನಿಯ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಬಷೀರುದ್ದೀನ್ ಒಮ್ಮೆ ಬಾಬಾ ಅವರೊಂದಿಗೆ ಉದಕಮಂಡಲದಿಂದ ಹಿಂದಿರುಗಿ ಬರುತ್ತಾ ಕೇಳಿದರು. "ಸ್ವಾಮಿ ಯಾರಾದರೊಬ್ಬ ಭಕ್ತ ಒಂದು ಪತ್ರವನ್ನೋ, ತಂತಿಯನ್ನೋ ನಿಮ್ಮ ಬೆಂಗಳೂರು ವಿಳಾಸಕ್ಕೆ ಕಳಿಸಿದರೆ, ಆದರೆ ತಾವು ಊಟಿಯಲ್ಲೋ, ಮುಂಬಯಿಯಲ್ಲೋ ಬೇರೆ ಯಾವುದಾದರೂ ಸ್ಥಳದಲ್ಲೋ ಇದ್ದರೆ, ಅದರ ಮೇಲೆ 'ತುರ್ತು' ಎಂದು ಬರೆದಿದ್ದರೆ ತಮಗೆ ಅದನ್ನು ತಲುಪಿಸಲಾಗುತ್ತದೆಯೆ?" ಬಾಬಾ ಹೀಗೆ ಉತ್ತರ ಕೊಟ್ಟರು. "ಪತ್ರ ಅಥವಾ ತಂತಿ ಒಂದು ಕಾರ್ಬನ್ ನಕಲಿದ್ದ ಹಾಗೆ. ಪತ್ರ ಅಥವಾ ತಂತಿಯಲ್ಲಿರುವ ಆಲೋಚನೆ ಪ್ರಾಮಾಣಿಕವಾಗಿದ್ದರೆ, ಅದನ್ನು ನನಗೆ ತಲುಪಿಸದೆ ಹೋದರೂ ಚಿಂತೆಯಿಲ್ಲ. ಭಕ್ತನ ಮನಸ್ಸಿನಲ್ಲಿ ಆಲೋಚನೆ ರೂಪುಗೊಂಡ ಕ್ಷಣದಲ್ಲೇ ನನಗೆ ತಲುಪುತ್ತದೆ. ಆ ಕ್ಷಣವೇ ಅಗತ್ಯವಾದ ನಿರ್ದೇಶನವೂ ಹೊರಟು ಹೋಗಿರುತ್ತದೆ."

ಪ್ರಚಾರಾಕಾಂಕ್ಷೆಯ ಕೆಲವರು, ವಿಶ್ವವಿದ್ಯಾನಿಲಯಕ್ಕೆ ಸೇರಿದ ಜನ ಬಾಬಾ ಅವರನ್ನು ಪರೀಕ್ಷೆ ಮಾಡಲು ಬರುವುದಾಗಿ ಪತ್ರ ಬರೆದರು. ಅದಕ್ಕೆ ಬಾಬಾ ಹೇಳಿದರು: "ಸಾಯಿ ವಿಶ್ವವಿದ್ಯಾನಿಲಯದ ಪರೀಕ್ಷೆಗೆ ಅಭ್ಯರ್ಥಿಯಲ್ಲ; ಅವರು ವಿಶ್ವದ ಪರೀಕ್ಷೆಯ ವಸ್ತು."

ಜೋಯೆಲ್ ರಾಯ್ಡನ್‌ಗೆ ಬಾಬಾ ಅವರ ಬಗೆಗೆ ಸ್ವಲ್ಪವೂ ಗೌರವವಿರಲಿಲ್ಲ. ಆದರೆ ಅವನ ಪತ್ನಿ ಅವರನ್ನು ಪೂಜಿಸುತ್ತಿದ್ದಳು. ಹಾಗಾಗಿ 'ಆ ವಿಚಿತ್ರ ತಲೆಗೂದಲಿನ ನಟ'ನನ್ನು ಸಂಧಿಸುವ ಸಲುವಾಗಿ ತನ್ನ ಪತ್ನಿಯೊಂದಿಗೆ ಭಾರತಕ್ಕೆ ವಿಮಾನದಲ್ಲಿ ಹೋಗುವುದಾಗಿ ಪ್ರಕಟಿಸಿ ಜೋಯೆಲ್

ತನ್ನ ಗೆಳೆಯರು ಆಶ್ಚರ್ಯದಿಂದ ಹುಬ್ಬೇರಿಸುವಂತೆ ಮಾಡಿದ. ಬಾಬಾ ಅವರ ಬಳಿ ಏನು ಕೇಳುತ್ತೀಯೆ ಎಂದು ಕೇಳಿದಾಗ, ತಮಾಷೆ ಮಾಡುತ್ತಾ ಆಕಾಶದಲ್ಲೊಂದು ಕಾಮನಬಿಲ್ಲು ಸೃಷ್ಟಿಸಿ ಕೊಡಿರೆಂದು ಕೇಳುತ್ತೇನೆ ಎಂದ. 'ಎಂಥ ಇಂದ್ರಜಾಲಿಗನೇ ಆದರೂ ಅಂಗಿ ತೋಳಿನಲ್ಲಿ ಅವಿಸಿಟ್ಟು ಒಂದು ಕಾಮನಬಿಲ್ಲನ್ನು ಎಳೆದು ತೋರಿಸಲಾರರು' ಎಂದು ನಕ್ಕ. ಅವನು ಪುಟ್ಟಪರ್ತಿಗೆ ಬಂದು ಗುಡ್ಡದ ಬಂಡೆಯ ಮೇಲೆ ಕುಳಿತು ಸಿಗರೇಟು ಸೇದಲು ತೊಡಗಿದ, ಜೊಯೆಲ್ ಬರೆಯುತ್ತಾನೆ, "ಒಂದು ಮಳೆಬಿಲ್ಲು ಪೂರ್ವದ ಆಕಾಶದಲ್ಲಿ ನೇರವಾಗಿ ಮೇಲಕ್ಕೆ ಏರಿದುದನ್ನು ನಾವು ನೋಡಿದೆವು. ಎಲ್ಲೂ ಅದು ಬಾಗಿರಲಿಲ್ಲ. ಕೆಲವೇ ಕ್ಷಣಗಳಲ್ಲಿ ತುತ್ತ ತುದಿಗೇರಿತು. ಆಮೇಲೆ ಬಾಬಾ ಅವನನ್ನು ಸಂದರ್ಶನಕ್ಕಾಗಿ ಕರೆದಾಗ, ಜೊಯೆಲ್‌ನನ್ನು ಅವರು ಸ್ವಾಗತಿಸಿದ್ದು, "ಕಾಮನಬಿಲ್ಲು ಹೇಗನ್ನಿಸಿತು?" ಎಂದು!

ಆಲ್ಡಸ್ ಹಕ್ಸ್‌ಲೀ ಹೇಳುತ್ತಾರೆ: "ದೈವಿಕ ಚೇತನವು ಎರಡು ವಿಧಾನಗಳಿಂದ ಸಾಮಾನ್ಯ ಚೇತನಗಳೊಂದಿಗೆ ವರ್ತಿಸಬಹುದು. ನಿರ್ದಿಷ್ಟ ಸಮಯದಲ್ಲಿ ನಿರ್ದಿಷ್ಟ ಮನಸ್ಸು ಅರ್ಥಪೂರ್ಣವೆಂದು ಭಾವಿಸುವ ವಿಧಾನಗಳಿಗೆ ಹೊಂದಿಕೆಯಾಗುವಂತೆ ಮಾನವ ಹಾಗೂ ವಸ್ತು ಜಗತ್ತನ್ನು ಸರಿ ಹೊಂದಿಸುತ್ತ ಹೋಗಬಹುದು; ಇಲ್ಲವೇ ಚಿಂತನೆಯ ವರ್ಗಾವಣೆಯನ್ನು ಹೋಲುವಂತಹ ಏನೋ ಒಂದು ವಿಧಾನದಿಂದ ನೇರ ಸಂಪರ್ಕ ಸಾಧಿಸಬಹುದು." ಡೆನೀಸ್ (ಸಾಯಿವಾಹಿನಿ) ಎವರ್ ಸೋಲ್ ಕ್ಯಾಲಿಫೋರ್ನಿಯದ ಮೂವ್‌ಮೆಂಟ್ ಎಂಬ ದೈನಿಕ ಪತ್ರಿಕೆಯಲ್ಲಿ ತಾನು ದಕ್ಷಿಣ ಭಾರತದ ಒಂದು ಸತ್ಯಸಾಯಿ ಬಾಬಾ ಮಂದಿರಕ್ಕೆ ಭೇಟಿ ನೀಡಿದ ಸಂದರ್ಭವನ್ನು ವರ್ಣಿಸಿದ್ದಾರೆ: "ಬಾಬಾ ಅವರ ಚಿತ್ರಪಟಗಳಿಂದ ವಿಭೂತಿಯು ಸುರಿಯುತ್ತದೆ. ಬಾಬಾ ಅವರ ಚಿತ್ರವಿರುವ ಎರಡು ಸಣ್ಣ ಪದಕಗಳಿವೆ. ಅವುಗಳಿಂದ ಸದಾ ಮಲ್ಲಿಗೆಯ ಪರಿಮಳ ಬೀರುವ ಸಿಹಿಯಾದ ದ್ರವ ಜಿನುಗುತ್ತಿರುತ್ತದೆ. ಅದನ್ನು ಅಮೃತ ಎಂದು ಕರೆಯುತ್ತಾರೆ. ಪ್ರತಿ ದಿನ ಒಂದು ದೊಡ್ಡ ಕೊಡವು ತುಂಬುವಷ್ಟು ಹರಿಯುತ್ತದೆ. ಚಿತ್ರಪಟಗಳನ್ನು ಪೂರ್ತಿ ಒರೆಸಿಡಲಾಗುತ್ತದೆ. ನಾವು ಸಾಕಷ್ಟು ದೊಡ್ಡ ಪಾತ್ರೆಗಳಲ್ಲಿ ಎರಡನ್ನೂ ತುಂಬಿಸಿ ಕೊಂಡೆವು. ಆ ದಿವ್ಯವಸ್ತುಗಳಿಂದ ಒಂದೇ ಸಮನೆ, ಇನ್ನೂ ಹೆಚ್ಚಾಗಿ ಸುರಿಯುತ್ತಲೇ ಹೋಗುವುದನ್ನು ಕಂಡೆವು. ಮಂದಿರದಿಂದ ಕಾವೇರಿ ನದಿಯ ತಡಿಗೆ ಹೋಗುವ ಕಾಲುಹಾದಿಯಲ್ಲಿ ನಡುವೆ ಒಂದು ಜೊತೆ ಕಲ್ಲಿನ ಪಾದಗಳಿವೆ. ಆ ಪಾದಗಳಿಂದ ಚೇತೋಹಾರಿಯಾದ ಪರಿಮಳದೆಣ್ಣೆಯೊಂದು ಹೊರ ಸೂಸುತ್ತಿರುತ್ತದೆ. ಇದನ್ನು ನಮ್ಮ ಸ್ಕಾರ್ಫುಗಳು ಮತ್ತು ಕರವಸ್ತ್ರಗಳಿಗೆ ಬಳಿದುಕೊಂಡೆವು. ಬೆರಳುಗಳ ನಡುವಣಿಂದ ತೈಲವು ಹೊಮ್ಮಿ ಬರುತ್ತಿರುವುದನ್ನು ಕಂಡೆವು. ಇದು ಈ ದಿವ್ಯ ಸ್ಥಳಕ್ಕೆ ನಾನು ನೀಡಿದ ನಾಲ್ಕನೆಯ ಭೇಟಿ. ಭಗವಂತನ ಸರ್ವಶಕ್ತತ್ವವನ್ನು ಸಮರ್ಥಿಸುವ ಇಂತಹ ಆಧಾರಗಳನ್ನು ಎಷ್ಟು ನೋಡಿದರೂ ಆಯಾಸವೆನಿಸುವುದಿಲ್ಲ.

## ಮರಳಿ ಬಂದಂದಿನಿಂದ

1972 ಏಪ್ರಿಲ್ ತಿಂಗಳಲ್ಲಿ ಎಲ್ಸೀ ಮತ್ತು ವಾಲ್ಟರ್ ಕೋವಾನ್ ದಂಪತಿಗಳು ಭಾರತದಿಂದ ಕ್ಯಾಲಿಫೋರ್ನಿಯಕ್ಕೆ ಮರಳಿದರು. ಸಾಯಿ ಬಗೆಗಿನ ಬಗಳಗವೊಂದರಲ್ಲಿ ಮಾತನಾಡುತ್ತಾ ಎಲ್ಸೀ ಪ್ರಕಟಿಸಿದರು:

"ನಾವು ಭಾರತದಿಂದ ಹಿಂದಿರುಗಿ ಬಂದಿದ್ದೇವೆ. ಯಾರಿಗೇ ಆಗಲಿ ಅತ್ಯಾಶ್ಚರ್ಯವುಂಟುಮಾಡುವಂತಹ ಸುದ್ದಿಯನ್ನು ತುಂಬಿಕೊಂಡು ಬಂದಿದ್ದೇವೆ. ಅದೆಷ್ಟು ಅದ್ಭುತವೆಂದರೆ ನಿಮ್ಮಲ್ಲಿ ಅನೇಕರು ಅದನ್ನು ಸಂದೇಹಿಸಬಹುದು. ಏಕೆಂದರೆ, ಈ ಪರಮೋನ್ನತ ಭಗವಂತ ನಮ್ಮ ನಿಮ್ಮ ಹಾಗೆಯೇ ಭೂಮಿಯ ಮೇಲೆ ನಡೆದಾಡುತ್ತಿರುವುದು ಮಾತ್ರವಲ್ಲ ಭೂಮಿಯಿಂದ ಅನಂತ ಬ್ರಹ್ಮಾಂಡದವರೆಗಿನ ಸಮಸ್ತ ಸ್ತರಗಳಲ್ಲೂ ಕಾಳಜಿ ವಹಿಸುತ್ತಾನೆ. ಅವನ ಮಹತ್ವ ಮತ್ತು ಅಗಾಧ ಶಕ್ತಿಯನ್ನು ನಾವು ಯಾರು ಕಲ್ಪಿಸಿಕೊಳ್ಳಲಾರೆವು. ವಾಲ್ಟರ್ ಮದರಾಸಿನಲ್ಲಿ ಸತ್ತು ಹೋಗಿದ್ದ; ಸಾಯಿಬಾಬಾ ಮತ್ತೆ ಅವನಿಗೆ ಜೀವ ಕೊಟ್ಟರು!" ಕೆಲವು ತಿಂಗಳು ಕಳೆದು ವಾಲ್ಟರ್ ಕೋವಾನ್ ನನಗೆ ಪತ್ರ ಬರೆದರು, "ನಾನೀಗ ಸೊಗಸಾಗಿದ್ದೇನೆ. 'ಮರಳಿ ಬಂದ ನಂತರ' ಸುಮಾರು ಮೂವತ್ತು ಪೌಂಡು ತೂಕ ಹೆಚ್ಚಿದೆ." ನಂಬಲಸಾಧ್ಯ ಆದಕ್ಕೆ ಸತ್ಯ.

## ಪರೀಕ್ಷಕ ಮತ್ತು ಪರೀಕ್ಷಾರ್ಥಿ

ಇಲ್ಲಿದೆ ಮೆಕ್ಸಿಕೋದಿಂದ ಇನ್ನೊಂದು ಕಥೆ: "ಪೆಸಿಫಿಕ್ ಸಮುದ್ರಕ್ಕೆ ಇಳುಕಲಾಗಿ ಚಾಚಿಕೊಂಡಿರುವ ನಮ್ಮ ಬೆಟ್ಟದ ಮೇಲೆ ಒಂದು ಡಜನ್ ಕುಟುಂಬಗಳು ವಾಸವಾಗಿವೆ. ಸಮುದ್ರ ಸುಮಾರು 300 ಅಡಿಗಳು ಕೆಳಗಿದೆ. ಇವರಲ್ಲಿ ಹೆಚ್ಚು ಜನ ನಿವೃತ್ತ ಅಮೆರಿಕನ್ನರು. ಒಂದೆರಡು ಮೆಕ್ಸಿಕನ್ ಕುಟುಂಬಗಳೂ ಇವೆ. ಬೆಟ್ಟ ಗಟ್ಟಿಬಂಡೆಯಲ್ಲ, ಹಿಂದೆಂದೋ ಮೇಲಕ್ಕೆದ್ದ ಸಮುದ್ರ ತಳ. ಮರಳು, ಕಲ್ಲು, ಜೇಡಿ, ಸಮುದ್ರ ಚಿಪ್ಪುಗಳು ಇವೆಲ್ಲ ಬೆರೆತದ್ದು. ಹೊಸತೊಂದು ಹೆದ್ದಾರಿಯನ್ನು ನಿರ್ಮಿಸುವ ಸಲುವಾಗಿ ಲಂಬಾಕಾರವಾಗಿ ಕತ್ತರಿಸಿದ್ದರಿಂದ ಬೆಟ್ಟ ದುರ್ಬಲಗೊಂಡಿತು. 1976 ಸೆಪ್ಟೆಂಬರ್‌ನಲ್ಲಿ ಕೆಳಕ್ಕೆ ಕುಸಿಯಲು ಪ್ರಾರಂಭಿಸಿತು. ಸ್ವಲ್ಪದರಲ್ಲೇ ಎರಡು ಮನೆಗಳು ಮುರಿದು ಬಿದ್ದುವು. ಮಿಕ್ಕವು ಎರಡಾಗಿ ಸೀಳಿದುವು. ಅಧಿಕಾರಿಗಳು ಒಡನೆಯೇ ಎಲ್ಲರೂ ಮನೆಗಳನ್ನು ತೆರವು ಮಾಡಬೇಕೆಂದು ಅಪ್ಪಣೆ ಮಾಡಿದರು. ಏಕೆಂದರೆ ಭೂಚಲನೆಯಿಂದಾಗಿ ಎಲ್ಲ ಮನೆಗಳೂ ಬಿದ್ದು ಹೋಗುತ್ತವೆಂದು ಭೂವಿಜ್ಞಾನಿಗಳು ಪ್ರಕಟಿಸಿದ್ದರು. ಇಂಥದೊಂದು ಸಂದಿಗ್ಧ ಸಮಯದಲ್ಲಿ ನಾನು ಸತ್ಯಸಾಯಿ ಬಾಬಾ ಕೇಂದ್ರಗಳ ಒಂದು ಪ್ರವಾಸವನ್ನು ಕೈಗೊಳ್ಳುವವನಿದ್ದೆ. ನಮ್ಮ ಸಣ್ಣ ಸಮುದಾಯದ ಮನೆಗಳನ್ನು ರಕ್ಷಿಸಿಕೊಡಿ ಎಂದು ಬಾಬಾ ಅವರಿಗೆ ಪ್ರಾರ್ಥನೆ ಸಲ್ಲಿಸಿದೆವು.

"ಪ್ರವಾಸದುದ್ದಕ್ಕೂ ನನಗೆ ಈ ಘಟನೆಯದೇ ಕಾತರ, ಕಳವಳ. ಹಿಂದಿರುಗಿ ಬಂದು ನೋಡಿದಾಗ ಸಮಾಧಾನವಾಯಿತು. ಮಿಕ್ಕ ಮನೆಗಳೆಲ್ಲ ಲವಲೇಶವೂ ಅಲುಗಾಡದೆ ಮೊದಲಿನಂತೆಯೇ ಉಳಿದುಕೊಂಡಿದ್ದುವು. ಭೂವಿಜ್ಞಾನಿಗಳು ಪ್ರತಿ ದಿನವೂ ಒಂದು ಬೆಟ್ಟವನ್ನು ಅಳೆಯುತ್ತಿದ್ದರು. ಬೆಟ್ಟದ ಸ್ವಲ್ಪ ಭಾಗ ಮಾತ್ರ ಸ್ಥಿರವಾಗಿ ಒಂದು ಅಂಗುಲದಷ್ಟಾದರೂ ಕದಲದೆ ಇರುವುದಕ್ಕೆ ಏನು ಕಾರಣ ಎಂದು ಕಂಡುಹಿಡಿಯಲು ಅವರಿಗೆ ಸಾಧ್ಯವಾಗಿರಲಿಲ್ಲ. ಅವರಿಗೆ ನಾವು ಮಾಡಿದ ಪ್ರಾರ್ಥನೆಯಾಗಲಿ, ಸಮುದ್ರದ ಕಡೆಗೆ ತೆರೆದು ಕೊಂಡ ಕಿಟಿಕಿಗೆ ಭಗವಾನರ ಒಂದು ಚಿತ್ರವನ್ನು ಅಂಟಿಸಿದ್ದಾಗಲಿ ಅವರಿಗೆ ತಿಳಿದಿರಲಿಲ್ಲ."

ಈ ಪತ್ರವನ್ನು ಬರೆದವರು ಜಾನ್ ಹಿಸ್ಲಾಪ್. 'ಭಗವಾನ್ ಶ್ರೀ ಸತ್ಯಸಾಯಿಬಾಬಾ ಅವರೊಂದಿಗೆ ಸಂಭಾಷಣೆ' ಎಂಬ ಪುಸ್ತಕವನ್ನು ಅವರು ಪ್ರಕಟಿಸಿದ್ದಾರೆ. ಬಾಬಾ ಹಿಸ್ಲಾಪರಿಗೆ ಹೇಳುತ್ತಾರೆ: "ಈ ಎಲ್ಲ ಪ್ರಶ್ನೆಗಳನ್ನು ಕೇಳುವುದು, ನಿನ್ನ ಎಲ್ಲ ಸಂದೇಹಗಳನ್ನು ನಿವಾರಿಸಿಕೊಳ್ಳುವುದು, ಇದು ಸರಿ. ನೀನು ಸ್ವಾಮಿಯನ್ನು ಪರೀಕ್ಷೆ ಮಾಡುತ್ತಿದ್ದೀಯೆ, ಸ್ವಾಮಿ ಉತ್ತರ ಕೊಡುತ್ತಿದ್ದಾರೆ. ಇದೆಲ್ಲ ಮುಗಿದು ನೀನು ಮತ್ತೆ ಇಲ್ಲಿಗೆ ಬರುವೆಯಲ್ಲ. ಆಗ ಸ್ವಾಮಿ ಪರೀಕ್ಷಕರಾಗಿರುತ್ತಾರೆ, ನೀನು ನಿನ್ನ ಮನಸ್ಸಿನಲ್ಲಿ ಸರಿ ಉತ್ತರಗಳನ್ನು ಸಿದ್ಧಪಡಿಸಿ ಕೊಂಡಿರಬೇಕು."

"ಸಾಯಿಬಾಬಾ ಅವರಲ್ಲಿಗೆ ಹೋಗುವುದಕ್ಕಿಂತ ಮೊದಲು, ನಾನು ಪವಾಡಗಳು ಹೊರತು ಮಿಕ್ಕ ಎಲ್ಲವನ್ನು ಒಪ್ಪಬಲ್ಲೆ ಎಂದು ಇಂದ್ರಾದೇವಿಗೆ ಹೇಳಿದ್ದೆ" ಎಂದು ಬರೆಯುತ್ತಾರೆ ರಿಚರ್ಡ್ ಬಾಕ್. ಪವಾಡಗಳು ನನಗೆ ಇಷ್ಟವಾಗುತ್ತಿರಲಿಲ್ಲ. ರಾಮಕೃಷ್ಣ ಕಥಾಮೃತವನ್ನು ನಾನು ಓದಿದ್ದೆ. ಸಿದ್ಧಿಗಳ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕು, ಏಕೆಂದರೆ ಅವು ದಿಕ್ಕು ತಪ್ಪಿಸುತ್ತವೆ ಎಂದು ಅದರಲ್ಲಿ ಹೇಳಿದೆ. ಹಾಗಾಗಿ ಪವಾಡಮಾಡುವ ಈ ಶಕ್ತಿಯನ್ನು ತೋರಿಸಿಕೊಳ್ಳುವುದು ಒಂದು ರೀತಿಯಲ್ಲಿ ಅಹಂಕಾರ ಪ್ರದರ್ಶನ, ಅದು ಉನ್ನತ ಅಭಿವ್ಯಕ್ತಿಯಲ್ಲ ಎಂದು ನಾನು ಭಾವಿಸಿದ್ದೆ. ಆದ್ದರಿಂದ ಅವುಗಳನ್ನು ಪ್ರದರ್ಶಿಸುವುದರಲ್ಲಿ ಅವರ ಉದ್ದೇಶಗಳೇನಿರಬಹುದೆಂಬ ಬಗೆಗೆ ನನಗೆ ಅನುಮಾನಗಳಿದ್ದುವು. ಆದರೆ ಸಮೀಪಕ್ಕೆ ಹೋಗಿ ಸ್ವತಃ ಅನುಭವ ಮಾಡಿಕೊಳ್ಳತೊಡಗಿದಾಗ ಅವರಿಗೆ ಪವಾಡಗಳು ಅತ್ಯಂತ ಸಹಜ ಕ್ರಿಯೆಗಳು, ಅವುಗಳ ಹಿಂದಿರುವ ವಿಚಾರ ಗಟ್ಟಿಯಾದದ್ದು ಎಂಬುದು ನನಗೆ ಅರ್ಥವಾಯಿತು. ಅವರು ಬೇರೆಯೇ ಲೋಕದಿಂದ ಬಂದವರು ಎನಿಸಿತು. ಅವರು ಏನೋ ಆಗುತ್ತಿರಲಿಲ್ಲ; ಆಗಲೆ ಆಗಿದ್ದರು. ಆದ್ದರಿಂದ ಅವರನ್ನು ಹಾಳುಮಾಡುವಂಥದೇನೂ ಇರಲಿಲ್ಲ ... ಸಾಮಾನ್ಯವಾಗಿ ಪಾಶ್ಚಾತ್ಯನೊಬ್ಬನಿಗೆ ಲೌಕಿಕ ಜಗತ್ತಿನಿಂದ ಮನಸ್ಸನ್ನು ಹೊರಸೆಳೆಯಲು ಏನಾದರೂ ವಿಶೇಷ ಕ್ರಮ ಬೇಕಾಗಿರುತ್ತದೆ. ಲೌಕಿಕ ಜಗತ್ತಿನ ಪಂಜರದಲ್ಲಿ ಪ್ರತಿಯೊಂದನ್ನೂ ವೈಜ್ಞಾನಿಕವಾಗಿ ವಿವರಿಸಬೇಕು ಎಂಬ ಭಾವನೆಯಲ್ಲಿ ಸಿಕ್ಕಿ ಬಿದ್ದಿರುತ್ತಾನೆ. ಬಾಬಾ ಕಾಲಕ್ಕೆ ದೂರವಾದ ಏನನ್ನೋ ಸೃಷ್ಟಿಸುತ್ತಾರೆ. ವೈಜ್ಞಾನಿಕ ನಿಸರ್ಗ ನಿಯಮಗಳು ಎಂದು ತೋರುವ ನಿಯಮಗಳನ್ನು ಮುರಿದು ಪವಾಡ ಎಂದು ನಾವು ಕರೆಯುವುದನ್ನು ಮಾಡುತ್ತಾರೆ.

"ನನ್ನನ್ನು ದಿಗ್ಭ್ರಮೆಗೊಳಿಸಿದ ವಿಷಯ ಇಂದ್ರಾದೇವಿಯು ಬಾಬಾ ಅವರನ್ನು ತನಗೆ ಇನ್ನಷ್ಟು 'ವಿಭೂತಿ' ಕೊಡಬಹುದೆ ಎಂದು ಕೇಳಿದಾಗ ನಡೆದದ್ದು. ಮೊದಲು ಕೊಟ್ಟಿದ್ದ ಅಷ್ಟು ವಿಭೂತಿಯನ್ನೂ ಆಕೆ ಜನರಿಗೆ ಕೊಟ್ಟು ಬಿಟ್ಟಿದ್ದರು. ರೋಗ ಪರಿಹಾರಕ ಗುಣವದ್ದ ಆ ವಿಭೂತಿ ಆಕೆಗೆ ಬೇಕಾಗಿತ್ತು. ಬಾಬಾ 'ಆಗಲಿ' ಎಂದರು. ನಾನು ನೋಡುತ್ತಲೇ ಇದ್ದೆ. ಕೈಯನ್ನು ವರ್ತುಲಾಕಾರವಾಗಿ ಆಡಿಸಿದರು. ಏನನ್ನೋ ಹಿಡಿದುಕೊಳ್ಳುವಂತೆ ಎರಡೂ ಕೈ ಎತ್ತಿದರು. ತಟ್ಟಕ್ಕನೆ ಸುಮಾರು ನಾಲ್ಕು ಅಂಗುಲ ಎತ್ತರ ಇದ್ದ ಒಂದು ಕರಂಡವು ಅವರ ಕೈಗೆ ಬಂದಿತು. ಅದನ್ನು ನೋಡಿ ನಾನಂದು ಕೊಂಡೆ. 'ಇದು ಖಂಡಿತ ಕೈಯ ಚಮತ್ಕಾರವಲ್ಲ, ಅಂಗಿ ತೋಳಿನಲ್ಲಿ ಮರೆಸಿಟ್ಟುಕೊಂಡದ್ದಲ್ಲ, ಬೇರೆ ಏನೋ ಒಂದು'. ಭರಣಿಯ ಮುಚ್ಚಳವನ್ನು ತೆರೆದು ಅದರೊಳಗಿದ್ದ ವಿಭೂತಿಯನ್ನು ಒಂದು ಕಾಗದದ ಮೇಲೆ

ಸುರುವಿದರು. ಖಾಲಿ ಮಾಡಿ ಮತ್ತೆ ಕಾದದ ಮೇಲೆ ಮಗುಚಿದಾಗ ಇನ್ನೊಂದು ಭರಣಿ ಭರ್ತಿ ವಿಭೂತಿ ಆದರಿಂದ ಸುರಿಯಿತು. ಒಟ್ಟಾರೆ ಅದು ಹಿಡಿಸ ಬಹುದಾದಕ್ಕಿಂತಲೂ ಎರಡು ಪಟ್ಟು ವಿಭೂತಿಯನ್ನು ಅದರಿಂದ ಸುರಿಸಿದ್ದರು. ಆಮೇಲೆ ವಿಭೂತಿಯ ಅರ್ಧವನ್ನು ಮತ್ತೆ ಆ ಭರಣಿಯೊಳಕ್ಕೆ ಹಾಕಿ ಮಿಕ್ಕದ್ದನ್ನು ಅಲ್ಲಿದ್ದವರಿಗೆ ಹಂಚಿದರು. ಉಳಿದುದನ್ನು ಒಂದು ಕರವಸ್ತ್ರದಲ್ಲಿ ಹಾಕಿ ಇಂದ್ರಾದೇವಿಗೆ ಕೊಟ್ಟರು. 'ಇದು ಎಂದಿಗೂ ಮುಗಿಯುವುದಿಲ್ಲ. ನೀನು ಬೇಕಾದ ಹಾಗೆ ಕೊಡಬಹುದು' ಎಂದರು. ಆಕೆ ಬಾಬಾ ಅವರಿಂದ ಅದನ್ನು ಪಡೆದು ಹತ್ತು ವರ್ಷಗಳಾದುವು, ಜನರಿಗೆ ಕೊಡುತ್ತಲೇ ಇದ್ದಾರೆ. ಇನ್ನೂ ವಿಭೂತಿ ಹೆಚ್ಚುವುದು ನಿಂತಿಲ್ಲ. ಸಾವಿರಾರು ಜನರಿಗೆ ಆಕೆ ಕೊಟ್ಟಿದ್ದಾರೆ. ಇದನ್ನು ನೋಡಿದ ಮೇಲೆ ನನಗೆ ದೇವರಿದ್ದಾನೆಯೋ ಇಲ್ಲವೋ ಎನ್ನುವುದು ಪ್ರಶ್ನೆಯಾಗಿ ಉಳಿಯಲಿಲ್ಲ.' ಮೂವ್‌ಮೆಂಟ್ ಪತ್ರಿಕೆಯ ವರದಿಗಾರನಿಗೆ 1979 ಸೆಪ್ಟಂಬರಿನಲ್ಲಿ ರಿಚರ್ಡ್ ಬಾಕ್ ನೀಡಿದ ನಿರೂಪಣೆ ಇದು.

ಬಾಬಾ ಎಷ್ಟು ದಯಾಮಯರೆಂದರೆ ಸುಧಾರಿಸಬೇಕು, ಪರಿವರ್ತಿಸಬೇಕು ಎಂದು ಬಯಸುವ ಪ್ರತಿಯೊಬ್ಬ ವ್ಯಕ್ತಿಗೂ ತಕ್ಕಂತೆ ಹೊಸದಾದ ಕಾರ್ಯ ವಿಧಾನಗಳನ್ನು ಅವರು ರೂಪಿಸುತ್ತಾರೆ. ಏಕಕಾಲದಲ್ಲಿ ಜಗತ್ತಿನಾದ್ಯಂತ ಹೆಚ್ಚು ಹೆಚ್ಚು ಸಂಖ್ಯೆಯ ಜನರು ಅವರ ಕರುಣೆಯ ಅನುಭವ ಪಡೆಯುತ್ತಿದ್ದಾರೆ. 'ಒಳದನಿ'ಯ ಮೂಲಕ ನಿಶ್ಶಬ್ದ ವಾತಾವರಣದಲ್ಲಿ, ಗಡಚಿಕ್ಕುವ ಜನಜಂಗುಳಿಯಲ್ಲಿ ಅಥವಾ ದೈಹಿಕವಾಗಿ ಎದುರಿಗೆ ಪ್ರತ್ಯಕ್ಷವಾಗುವ ಮೂಲಕ ಅವರು ಎಚ್ಚರಿಕೆ ನೀಡುತ್ತಾರೆ, ಶ್ರದ್ಧೆಯನ್ನು ಬಲಗೊಳಿಸುತ್ತಾರೆ, ಸಂದೇಹಗಳನ್ನು ಪರಿಹರಿಸುತ್ತಾರೆ. ನಿಜವಾಗಿ ಕಳಿಸಿರದಿದ್ದ ಒಂದು ತಂತಿ ಸಂದೇಶ, ಅಂಚೆಗೆ ಹಾಕದ ಒಂದು ಪತ್ರ, ಸಂಖ್ಯೆ ತಿರುಗಿಸದ ಒಂದು ದೂರವಾಣಿ ಕರೆ ಅವರ ಪ್ರೇಮವನ್ನು ಪ್ರಕಟಿಸುತ್ತವೆ, ಕತ್ತಲಲ್ಲಿ ತಡಕಾಡುತ್ತಿರುವ ವ್ಯಕ್ತಿಯನ್ನು ಎಚ್ಚರಗೊಳಿಸುತ್ತವೆ, ಭರವಸೆ ತುಂಬಿ ಬುದ್ಧಿವಾದ ನೀಡುತ್ತವೆ. ಅಂತಿಮವಾಗಿ ಭಗವಂತನ ಕೈ ತನ್ನನ್ನು ಪ್ರಶಾಂತಿ ನಿಲಯಕ್ಕೆ ಬಾರೆಂದು ಕರೆಯುತ್ತಿರುವುದು ಅವನಿಗೆ ಕಾಣಿಸುತ್ತದೆ.

# ಗರಿಮೂಡಿದ ಮಾತುಗಳು

## ಸನಾತನ ಸಾರಥಿ

ಜಗತ್ತಿಗೆ ಭಗವಾನರ ಸಂದೇಶವನ್ನು ಬಿತ್ತರಿಸುವ ಉದ್ದೇಶ ಹೊಂದಿದ ಮಾಸ ಪತ್ರಿಕೆ ಸನಾತನ ಸಾರಥಿಯನ್ನು 1958ರಲ್ಲಿ ಶಿವರಾತ್ರಿಯ ದಿನದಂದು ಉದ್ಘಾಟಿಸಲಾಯಿತು. ಎರಡೂ ಪದಗಳು ಒಟ್ಟಿಗೆ ಬಾಬಾ ಅವರು ತಮ್ಮ ಮೇಲೆ ಹಾಕಿಕೊಂಡಿರುವ ಗುರುತರ ಜವಾಬ್ದಾರಿಯನ್ನು ಸೂಚಿಸುತ್ತವೆ. ಈ ಸಮಸ್ತ 'ಆಗುತ್ತಿರುವಿಕೆ'ಯ ಮೂಲ ಅವರೇ ಎನ್ನುವುದನ್ನು ಸನಾತನ ಎಂಬ ಪದ ಹೇಳುತ್ತದೆ. ಕಲ್ಕತ್ತೆಯ ಸತ್ಯಸಾಯಿ ಸೇವಾ ಸಮಿತಿಯ ಶ್ರೀ ಆರ್.ಆರ್.ಚಟರ್ಜಿ ಅವರಿಗೆ ಕಳಿಸಿದ ಒಂದು ಲಿಖಿತ ಸಂದೇಶದಲ್ಲಿ ಬಾಬಾ ತಾವು ಯಾವ ಧ್ಯೇಯ ಸಾಧನೆಗೋಸ್ಕರವಾಗಿ ಈ ಮಾನವ ದೇಹ ಧಾರಣೆ ಮಾಡಿದರು ಎನ್ನುವುದನ್ನು ಹೇಳಿದರು. ಭಗವಾನ್ ಕೃಷ್ಣನ ಕಾಲದಿಂದ ಈಚೆಗೆ ಯಾರೊಬ್ಬರೂ ಈ ದಿವ್ಯ ಘೋಷಣೆಯನ್ನು ಆಲಿಸುವ ಪುಣ್ಯ ಮಾಡಿರಲಿಲ್ಲ. "ನಾನು ನನ್ನ ಇಚ್ಛೆಯಂತೆ ಒಂದು ಶಬ್ದದಿಂದ ಈ ಜಗತ್ತನ್ನು ಸೃಷ್ಟಿಸುವವರೆಗೂ ನಾನು ಯಾರೆಂದು ತಿಳಿಯುವುದಕ್ಕೂ ಯಾರೂ ಇರಲಿಲ್ಲ. ಒಡನೆಯೇ ಆಕಾಶ ಮತ್ತು ಭೂಮಿಗಳು ಸೃಷ್ಟಿಗೊಂಡುವು. ಪರ್ವತಗಳು ಮೇಲೆದ್ದು ನಿಂತುವು. ನದಿಗಳು ಪರಿ[illegible]ವು. ಸೂರ್ಯ ಚಂದ್ರ ನಕ್ಷತ್ರಗಳು ಉದಿಸಿದುವು, ನನ್ನ ಅಸ್ತಿತ್ವವನ್ನು ಸಮರ್ಥಿಸುವ ಸಲುವಾಗಿ. ಬಗೆ ಬಗೆಯ ಜೀವಗಳು ಕಾಣಿಸಿಕೊಂಡುವು- ಸಸ್ಯಗಳು, ಕೀಟಗಳು, ಪ್ರಾಣಿಗಳು ಪಕ್ಷಿಗಳು, ಮನುಷ್ಯ ಇತ್ಯಾದಿ. ನನ್ನ ಆದೇಶದಂತೆ ಅವುಗಳಿಗೆ ವಿಧ ವಿಧವಾದ ಶಕ್ತಿ ಸಾಮರ್ಥ್ಯಗಳನ್ನು ನೀಡಲಾಯಿತು. ಮೊದಲನೆಯ ಸ್ಥಾನ ಮನುಷ್ಯರಿಗೆ ನನ್ನ ಅರಿವನ್ನು ಅವನ ಮನಸ್ಸಿನಲ್ಲಿ ಇರಿಸಿದ್ದಾಯಿತು."

ಸನಾತನ ಎಂದರೆ ಕಾಲರಹಿತ, ಅನಂತ ಎಂದು ಅರ್ಥ. ತಾವು ಯಾವಾಗಲೂ ಇದ್ದರು, ಇದ್ದಾರೆ, ಮುಂದೆ ಎಂದೆಂದೂ ಇರುತ್ತಾರೆ ಎಂದು ಬಾಬಾ ಹೇಳಿದ್ದಾರೆ. ಅವರು ಸನಾತನ, ಈಗ ನಮಗೆ ದೊರಕುವುದಕ್ಕೋಸ್ಕರವಾಗಿ, ನಾವು ಪಡೆಯಲು ಅನುಕೂಲವಾಗಲೆಂದು ಅವರು ದೇಶ ಕಾಲ ಬದ್ಧರಾಗಿದ್ದಾರೆ. ದೇಹವುಳ್ಳ ಜೀವಿಗಳು ರಥಗಳು ಎಂದು ಉಪನಿಷತ್ತುಗಳು ಹೇಳುತ್ತವೆ. ಇಂದ್ರಿಯಗಳೆಂಬ ಕುದುರೆಗಳು ಈ ಜಗತ್ತಿನಲ್ಲಿ ರಥವನ್ನು ಎಳೆದುಕೊಂಡು ಹೋಗುತ್ತವೆ. ನಮ್ಮ ವಿವೇಕ ಇರುವುದು, ಈ ರಥಕ್ಕೆ ಸರಿಯಾದ ತಿಳುವಳಿಕೆಯುಳ್ಳ ಸಾರಥಿಯನ್ನು ಆರಿಸಿ ಅವನನ್ನು ಬಳ್ಳಿರಿಸಿ, ಅವನಿಗೆ ರಥ ನಡೆಸುವ ಎಲ್ಲಾ ಅಧಿಕಾರ ಕೊಡುವುದರಲ್ಲಿ, ಆಗ ನಮಗೆ ಕ್ಷೇಮ. ಸನಾತನ ಸಾರಥಿಯ ಜವಾಬ್ದಾರಿಯನ್ನು ತಮ್ಮ ಮೇಲೆ ಹೊತ್ತುಕೊಂಡು ಬಾಬಾ ಅವರು ಸಮಸ್ತರ ಆಂತರಿಕ ಪ್ರೇರಕ ಎಂಬುದನ್ನು ಸೂಚಿಸಿದ್ದಾರೆ. ಮಾನ್ಯರಾಗಿರಲಿ, ಅಮಾನ್ಯರಾಗಿರಲಿ, ಪ್ರಸಿದ್ಧರಿರಲಿ, ಅಲಕ್ಷಿತರಿರಲಿ, ಗೌರವಾನಿತ್ವರಾಗಿರಲಿ, ಕೆಳಮಟ್ಟದವರಾಗಿರಲಿ, ಯಾರೇ ಆಗಿರಲಿ ಅವರ ಪ್ರಬೋಧಕ, ಪ್ರಚೋದಕ ಅವರೇ. 'ಮಾನವನ ಮನಸ್ಸಿನಲ್ಲಿ ನನ್ನ ಅರಿವನ್ನು ಇರಿಸಾಯಿತು' ಎಂದು ಅವರು

ಹೇಳುತ್ತಾರೆ. ಆದರೆ ಮನಸ್ಸು ತನ್ನ ಮೇಲೆ ಮಾಯೆಯ ಮುಸುಕು ಹಾಕಲು ಅವಕಾಶ ಕೊಡುತ್ತದೆ. ಹಾಗಾಗಿ ಶುದ್ಧ ಜ್ಞಾನವು ವಕ್ರಗೊಳ್ಳುತ್ತದೆ ಅಥವಾ ನಿರಾಕೃತವಾಗುತ್ತದೆ.

ಪತ್ರಿಕೆಯ ಮೊದಲನೆಯ ಸಂಚಿಕೆಯಲ್ಲಿ ಬಾಬಾ ಅವರ ಒಂದು ಸಂದೇಶ ಸೇರಿತು. ಅದರಲ್ಲಿ ಅವರು ಪತ್ರಿಕೆ ಯಾವ ಘನ ಉದ್ದೇಶದಿಂದ ಪ್ರಾರಂಭವಾಗಿದೆ ಎಂಬುದನ್ನು ನಿರೂಪಿಸಿದರು. "ಇಂದಿನಿಂದ ಮೊದಲುಗೊಂಡು, ಅಹಂಕಾರದ ಸೈನ್ಯದಳಗಳಾದ ಅನ್ಯಾಯ, ಸುಳ್ಳು, ಅನೈತಿಕತೆ, ಹಿಂಸೆಗಳ ಎದುರಾಗಿ ಸತ್ಯದ ಯೋಧರಾದ ವೇದಗಳು, ಶಾಸ್ತ್ರಗಳು, ಎಲ್ಲ ಧರ್ಮಗಳ ಇಂತಹ ಕೃತಿಗಳ ಪಡೆಯನ್ನು ನಮ್ಮ ಸನಾತನ ಸಾರಥಿಯು ಮುನ್ನಡೆಸುತ್ತದೆ. ಅದು ಉದಯಿಸುತ್ತಿರುವುದೇ ಈ ಕಾರಣಕ್ಕಾಗಿ. ಈ ಸಾರಥಿಯು ವಿಶ್ವದ ಏಳಿಗೆಯನ್ನು, ಪುರೋಭಿವೃದ್ಧಿಯನ್ನು ಸ್ಥಾಪಿಸಲು ಹೋರಾಡುತ್ತದೆ. ವಿಶ್ವಾದ್ಯಂತ ಆನಂದವು ಸಾಧಿತವಾದಾಗ ಅದು ವಿಜಯ ಘೋಷವನ್ನು ಮೊಳಗಿಸುತ್ತದೆ."

## ಪ್ರಸ್ತಾವನೆಗಳು

ತಾವು ಮಾನವ ರೂಪ ತಾಳಿ ಬಂದಿರುವ ವಿಶ್ವತತ್ತ್ವ ಎಂಬುದನ್ನು ಬಾಬಾ ಬಲ್ಲರು. ಅವರು ಪ್ರತಿಯೊಬ್ಬ ಜೀವಿಯೂ ಹುಡುಕುವ ಗುರಿ, ಪಥದರ್ಶಕ ಹಾಗೂ ಪಾಲಕ. ಅವರು ತಮ್ಮ ದಿವ್ಯೋಪನ್ಯಾಸಗಳಲ್ಲೂ ಬರವಣಿಗೆಯಲ್ಲೂ ಈ ಸತ್ಯವನ್ನು ಅಭಿವ್ಯಕ್ತಿಸಿದ್ದಾರೆ. ತಮ್ಮ ಉಪನ್ಯಾಸಕ್ಕೆ ಪೀಠಿಕೆಯಾಗಿ ತೆಲುಗು ಅಥವಾ ಸಂಸ್ಕೃತದ ಒಂದು ಸಣ್ಣ ಶ್ಲೋಕವನ್ನೋ ಹಾಡನ್ನೋ ಹಾಡುತ್ತಾರೆ. ನಮ್ಮ ಕಣ್ಣೆದುರಿನಿಂದ ಅವರ ನಿಜರೂಪವನ್ನು ಮರೆಮಾಡಿರುವ ಗೂಢತೆಯ ತೆರೆಯನ್ನು ಸರಿಸಿ, ಅದು ಮಿಂಚಿನಂತೆ ಮಾನವನ ಪುನರ್ವಸತಿಗಾಗಿ ಅವರು ಕೈಗೊಂಡಿರುವ ಕಾರ್ಯ ಭಾರದ ಯಾವುದೋ ಒಂದು ಮುಖದ ಹೊಳಹನ್ನು ನಮ್ಮೆದುರಿಗೆ ನಿಲ್ಲಿಸುತ್ತದೆ. "ಯಾವ ವಿಷ್ಣುವು ಧ್ರುವನಿಗೆ ಐಹಿಕ ಆಮುಷ್ಮಿಕ ಸಂಪತ್ತುಗಳನ್ನು ನೀಡಿದನೋ, ಪೀಡಕರ ಹಿಂಸೆಯಿಂದ ಯಾರು ಪ್ರಹ್ಲಾದನನ್ನು ಕಾಪಾಡಿದನೋ, ದರಿದ್ರತೆಯೇ ಮೈವೆತ್ತಿದ್ದ ಕುಚೇಲನ ಮೇಲೆ ಯಾವ ಗೋಪಾಲನು ಅನುಗ್ರಹದ ಮಳೆಗರೆದನೋ ಅವನೇ ಇಲ್ಲಿ ಈಗ ಪರಮೋನ್ನತ ಜ್ಞಾನ ಆನಂದಗಳ ಮೂರ್ತಿಯಾಗಿ ಬಂದಿದ್ದಾನೆ. ಸಜ್ಜನರ ಹೃದಯ ಸಿಂಹಾಸನಸ್ಥನಾಗಿದ್ದಾನೆ, ಧರ್ಮದ ಪಥದಿಂದ ಎತ್ತೆತ್ತಲೋ ಹೋಗಿರುವವರನ್ನು ಮತ್ತೆ ಕೈ ಹಿಡಿದು ಕರೆತಂದು ಋಜು ಮಾರ್ಗದಲ್ಲಿ ನಿಲ್ಲಿಸುತ್ತಾನೆ" ಎಂದು ಘೋಷಿಸಿದರು.

ಬೇರೊಂದು ಸಂದರ್ಭದಲ್ಲಿ ತನಗೆ ತಾನೆ ತುಟಿಗಳಿಂದ ಲಾಸ್ಯವಾಡಿ ಹೊಮ್ಮಿದ ಈ ಪದ್ಯವನ್ನು ಬಾಬಾ ಪಲುಕಿದರು: "ಸೂರ್ಯನು ಏಕೆ ಪ್ರತಿದಿನವೂ ತಪಮಾಡದೆ ತಪ್ಪದೆ ಮೂಡುತ್ತಾನೆ ಮುಳುಗುತ್ತಾನೆ? ಕಣ್ಣುಗಳಿಗೆ ಹಬ್ಬವನ್ನುಂಟು ಮಾಡುತ್ತ ಆಗಸವನ್ನು ಬೆಳಗುವ ನಕ್ಷತ್ರಗಳು ಹಗಲು ಮೂಡುತ್ತಿದ್ದಂತೆ ಏಕೆ ತಮ್ಮ ಮುಖವನ್ನು ಮರೆಮಾಡಿಕೊಳ್ಳುತ್ತವೆ? ಎಂದಿಗೂ ಅವು ತಾವು ಇಂಥಲ್ಲಿ ಇದ್ದೇವೆ ಎಂದು ಹಣಿಕಿಕ್ಕಿ ಸೂಚನೆ ಕೊಡುವುದೂ ಇಲ್ಲವಲ್ಲ. ನಮ್ಮ ಸುತ್ತ ಸುಳಿಯುತ್ತಿದ್ದು ಗಾಳಿಯು ನಮ್ಮ ಜೀವನದುಸಿರನ್ನು ಏಕೆ ಸದಾ ನೀಡುತ್ತಿರಬೇಕು? ತೊರೆಗಳು, ನದಿಗಳು ಕಲ್ಲುಗಳ ಮೇಲೆ,

ನೊರಜುಗಳ ಮೇಲೆ, ಮರಳಿನ ಮೇಲೆ ಮೊರೆದು, ಗೊಣಗಿ, ನೊರೆಗಟ್ಟಿ ನಲಿಯಬೇಕು ಏಕೆ? ಮಾನವ ಜನಾಂಗವೆನಿಸಿಕೊಳ್ಳುವ ಕೋಟ್ಯಾನುಕೋಟಿ ಜನರು ಪ್ರತಿಯೊಬ್ಬರೂ ಒಂದೇ ಪರತತ್ವದ ಪ್ರತಿಮೆಗಳನ್ನು ಒಳಗೊಂಡ ಭರಣಿಗಳಾಗಿದ್ದರೂ ಲಕ್ಷಣದಲ್ಲಿ, ಸಾಧನೆಯಲ್ಲಿ, ಅಶೋತ್ತರಗಳಲ್ಲಿ ಮತ್ತು ಮನೋಧರ್ಮದಲ್ಲಿ ಬೇರೆ ಬೇರೆ ಏಕೆ? ಉತ್ತರ ಇಷ್ಟೆ: ಇವೆಲ್ಲ ಹೀಗೆ ಇರಬೇಕೆಂದು, ಹೀಗೆ ವರ್ತಿಸಬೇಕೆಂದು ವಿಧಾಯಕ ಮಾಡಿರುವವನು ನಾನು ಎಂದು ತಿಳಿ."

## ಪಂಚ ಭೂತ ಆಯಾಮಗಳು

ಭಗವಾನರ ಅವತಾರದ ಸತ್ಯಾಸತ್ಯತೆಯನ್ನು ನಿರ್ಧರಿಸಲು ಉಪನಿಷತ್ತುಗಳು ಪರೀಕ್ಷೆಗಳನ್ನು ಹೀಗೆ ವಿಧಿಸಿವೆ: " ಅವನ ಭೀತಿಯಿಂದಾಗಿ ಅಗ್ನಿಯು ಉರಿಯುತ್ತದೆ; ಅವನ ಭೀತಿಯಿಂದಾಗಿ ವಾಯುವ ಬೀಸುತ್ತದೆ; ಬಹು ಸಮರ್ಥನೆನಿಸಿದ ದೇವೇಂದ್ರನೂ ಅವನ ಅಣತಿಗಾಗಿ ಕೈಕಟ್ಟಿ ನಿಲ್ಲುತ್ತಾನೆ. ಮೃತ್ಯುವೂ ಆತನ ನಿರ್ದೇಶನದಂತೆ ತ್ವರಿತಗೊಳ್ಳುತ್ತದೆ ಅಥವಾ ದೂರ ಹೋಗುತ್ತದೆ."

ಯು. ಎಸ್. - ಮೆಕ್ಸಿಕೋ ಗಡಿಯಲ್ಲಿ ಚುಚುಮಾರ್‍ರ್ಯಾಂಚ್ ಕಡೆಗೆ ಭೀಕರವಾದ ಕಾಡುಗಿಚ್ಚು ಧಾವಿಸುತ್ತಿತ್ತು. ಅಲ್ಲಿ ಇಂದ್ರಾದೇವಿ ಕಟ್ಟಿದ ಸಾಯಿ ಯೋಗ ಇನ್‌ಸ್ಟಿಟ್ಯೂಟ್ ಇತ್ತು. ಆಕೆ ಬಾಬಾ ಅವರನ್ನು ಕುರಿತು ಪ್ರಾರ್ಥನೆ ಮಾಡಿದರು. ರ್ಯಾಂಚ್‌ಗೆ ಇನ್ನು ಕೆಲವೇ ಅಡಿಗಳ ದೂರದವರೆಗೆ ಬಂದು ಬಿಟ್ಟಿದ್ದ ಕಾಡುಗಿಚ್ಚು, ಇದ್ದಕ್ಕಿದ್ದಂತೆ ಗಾಳಿಯು ದಿಕ್ಕು ಬದಲಾಯಿಸಿದ್ದರಿಂದ ಹಿಂದಕ್ಕೆ ಹೊರಟು ಹೋಯಿತು. ಅರುಣಾಚಲ ಪ್ರದೇಶ ಲೆಫ್ಟಿನೆಂಟ್ ಗವರ್ನರ್ ಶ್ರೀ ಕೆ. ವಿ. ರಾಜು ಬರೆಯುತ್ತಾರೆ. ತೇಜಪುರದಲ್ಲಿ ಅವರ ಅಧಿಕೃತ ನಿವಾಸದಿಂದ ಕೆಲವೇ ಗಜಗಳಷ್ಟು ದೂರದಲ್ಲಿದ್ದ ಭಾರೀ ಬಿದಿರು ಮಳೆ ಹೊತ್ತಿಕೊಂಡು ಅಗ್ನಿದೇವನು ಬಿದಿರುಗಳನ್ನು ಸಿಡಿಸುತ್ತಾ ಆನಂದವಾಗಿ ಧಗಧಗಿಸುತ್ತಿದ್ದನು. ಹತ್ತಿರದಲ್ಲೇ ನೇಪಾಳೀ ಕೂಲಿಕಾರರ ಗುಡಿಸಿಲುಗಳು. ಶ್ರೀಮತಿ ರಾಜು ಅಲ್ಲಿಗೆ ಓಡಿ ಬಂದವರೇ ಆಗಬಹುದಾದ ಅನಾಹುತ ನೋಡಿ ಗಟ್ಟಿಯಾಗಿ ಬಾಬಾ ಅವರಿಗೆ ಬೆಂಕಿಯ ಆಕ್ರೋಶವನ್ನು ಶಮನ ಮಾಡುವಂತೆ ಮೊರೆಯಿಟ್ಟರು. ಪತ್ರ ಹೇಳುತ್ತದೆ: "ಕೆಲವೇ ಕ್ಷಣಗಳಲ್ಲಿ ಉರಿ ಶಾಂತವಾಗಿ ನಂದಿ ಹೋಯಿತು. ಡಜನ್ ಅಗ್ನಿಶಾಮಕ ಯಂತ್ರಗಳು ಕೂಡ ಅದನ್ನು ಸಾಧಿಸಲು ಸಾಧ್ಯವಾಗುತ್ತಿರಲಿಲ್ಲ." ಹಾಗೆಯೇ ತಮ್ಮ ದರ್ಶನಕ್ಕಾಗಿಯೋ, ತಮ್ಮ ಉಪನ್ಯಾಸ ಕೇಳಲೆಂದೋ ನೆರೆದ ಸಹಸ್ರಾರು ಜನರು ನೆನೆದು ಹೋಗುವಂತೆ ಮಳೆ ಸುರಿಯುವ ಸಂಭವ ಬಂದಾಗ ಕೇವಲ ಒಂದು ಸಂಜ್ಞೆಯಿಂದ, ಅಥವಾ ಒಂದು ಮಾತಿನ ಆದೇಶದಿಂದ ಅದನ್ನು ಅವರು ತಡೆದಿದ್ದಾರೆ.

ಮದರಾಸಿನ ಬಳಿಯ ಒಂದು ಕೋಚ್ ಫ್ಯಾಕ್ಟರಿಯ ಅಧ್ಯಕ್ಷರು ಭಾರತ ಸರಕಾರಕ್ಕೂ ವಿದೇಶವೊಂದಕ್ಕೂ ಆದ ಒಪ್ಪಂದದಂತೆ ಮೊದಲ ಕಂತಿನ 25 ರೈಲ್ವೆ ಕೋಚುಗಳನ್ನು ಬಿಡುಗಡೆ ಮಾಡುವುದಾಗಿ ಒಪ್ಪಿಕೊಂಡುಬಿಟ್ಟಿದ್ದರು. ಅದೊಂದು ಗೌರವಾನ್ವಿತವಾದ ಒಪ್ಪಂದ. ಮುಂಚೂಣಿಯ ಕೈಗಾರಿಕಾ ದೇಶಗಳ ಎದುರು ಸ್ಪರ್ಧೆ ಹೂಡಿ ಗಳಿಸಿ ಕೊಂಡ ಬೇಡಿಕೆ, ಪೂರೈಸಲೇ ಬೇಕಾದದ್ದು. ಆದರೆ ಪ್ರತಿಯೊಂದು ಹಂತದಲ್ಲೂ ಅವರಿಗೆ ಕಷ್ಟ ಎದುರಾಗುತ್ತಿತ್ತು. ಕೋಚುಗಳನ್ನು

ತುಂಬಿಸಿಕೊಳ್ಳಲು ಮುಂಬಯಿ ಬಿಟ್ಟು ಆಗಲೇ ಮದರಾಸಿನತ್ತ ಹೊರಟಿದ್ದ ಜಪಾನಿ ಹಡಗಿಗೆ ಕಾಲ್ಕೆ ಸರಿಯಾಗಿ ಪೂರೈಸಲು ಸಾಧ್ಯವಾಗುತ್ತಿಲ್ಲವಲ್ಲಾ ಎಂಬ ವಿಷಾದ, ಚಡಪಡಿಕೆ ಅವರಿಗುಂಟಾಯಿತು. ಅವರು ತಮ್ಮ ಕಾರ್ಖಾನೆಯ ಗೌರವವನ್ನು ಕಾಪಾಡಬೇಕೆಂದು ಬಾಬಾ ಅವರಲ್ಲಿ ಮೊರೆಯಿಟ್ಟರು. ಬಾಬಾ ಹೇಳಿದರು: "ಹಡಗು ಬರುವುದು ನಿಧಾನವಾಗುತ್ತದೆ, ಬೇಗ ಬೇಗೆ ಕೆಲಸ ಮಾಡಿ ಮುಗಿಸು." ಹಡಗು ಕೊಚಿನ್ ದಾಟಿದೊಡನೆ ಭಾರೀ ಚಂಡಮಾರುತವನ್ನು ಎದುರಿಸಬೇಕಾಯಿತು. ಕೊಲಂಬೋದಲ್ಲಿ ಕೆಲವು ರಿಪೇರಿಗಳನ್ನು ಮಾಡಿಸಿಕೊಳ್ಳಬೇಕಾಯಿತು. ಕೊನೆಗೆ ಮದರಾಸು ತಲುಪಿದಾಗ ಬಂದರು ಎಷ್ಟು ತುಂಬಿ ಹೋಗಿದ್ದಿತೆಂದರೆ ಹಡಗು ಕಟ್ಟೆಗೆ ಬರುವುದೇ ಅದಕ್ಕೆ ಸಾಧ್ಯವಾಗಲಿಲ್ಲ. ಕೊನೆಗೆ ಬಂದರಿನಲ್ಲಿ ಸ್ಥಳಾವಕಾಶವಾಗಿ ಹಡಗು ಬಂದು ನಿಂತು ಕೋಚುಗಳನ್ನು ತುಂಬಿಸಿಕೊಳ್ಳಲು ಅನುವಾಗುವ ವೇಳೆಗೆ ಎಲ್ಲಾ 25 ಕೋಚುಗಳೂ ಅಚ್ಚು ಕಟ್ಟಾಗಿ ಅಣಿಯಾಗಿ ನಿಂತಿದ್ದುವು. ಭಗವಾನರು ತಮಗೆ ಇಚ್ಛೆ ಬಂದ ಹಾಗೆ ಬಿರುಗಾಳಿಯನ್ನು ಏಳಿಸಬಲ್ಲರು, ಶಾಂತಗೊಳಿಸಬಲ್ಲರು. ಬಿಡುಗಡೆ ಬೇಕು ಎಂದು ಹಂಬಲಿಸುವವರನ್ನು ಅವರು ಮೃತ್ಯುವಲಯಕ್ಕೆ ಸ್ವಾಗತಿಸುವರು, ಇವನು ಇಂತಹ ಪಾತ್ರವನ್ನು ಇನ್ನೂ ನಿರ್ವಹಿಸಬೇಕಾಗಿದೆ ಎಂದು ತಾವು ನಿರ್ಧರಿಸುವವನನ್ನು ಮೃತ್ಯುವಿನ ದವಡೆಯಿಂದ ಹೊರಸೆಳೆದು ತರುವರು. ಆದ್ದರಿಂದ ಅವರ ಬಾಯಿಂದ ಬರುವ ಮಾತುಗಳು ದಿವ್ಯ ಆದೇಶಗಳು. ಅವು ಅಪಾರ ಬಲ ಮತ್ತು ಪರಿಶುದ್ಧಗಳನ್ನು ನಮ್ಮಲ್ಲಿ ಮತ್ತೆ ಮತ್ತೆ ತುಂಬಿ ನಮ್ಮನ್ನು ಪ್ರೇಮ ಮತ್ತು ಬೆಳಕಿನ ಭಂಡಾರಗಳಾಗುವಂತೆ ಮಾಡುವುವು.

## ಮರಳಿ ಬಂದಿದ್ದಾನೆ

ಇನ್ನೊಂದು ಸಂದರ್ಭದಲ್ಲಿ ನಿಲಯದಲ್ಲಿ ಪ್ರಶಾಂತಿ ಧ್ವಜವನ್ನು ಆರೋಹಣ ಮಾಡುವಾಗ ಈ ಕೆಳಗಿನ ಅರ್ಥದ ಪದ್ಯವನ್ನು ಬಾಬಾ ಹಾಡಿದರು. "ಗೊಲ್ಲ ಬಾಲಕ, ನಂದನ ಮಗ, ಈಗ ಮತ್ತೆ ಆನಂದ ಮೂರ್ತಿಯಾಗಿ ನಿಮ್ಮ ನಡುವೆ ಬಂದಿದ್ದಾನೆ. ಆಗಿನ ತನ್ನ ಗೆಳೆಯರನ್ನು ಈಗ ಮತ್ತೆ ಅವನು ಕೂಡಿಸಿಕೊಳ್ಳಬೇಕಾಗಿದೆ. ಅದೇ ರಾಮನು ಈಗ ತುಂಬ ಆರಾಮವಾಗಿ ಬಂದಿದ್ದಾನೆ. ಏಕೆಂದರೆ ಈಗ ಅವನಿಗೆ ಸಾಮ್ರಾಜ್ಯದ ಹೊರೆ ಇಲ್ಲ, ವಂಶದ ಹೊಣೆಗಾರಿಕೆಯಿಲ್ಲ. ತನ್ನ ಹಿಂದಿನ ಅನುಯಾಯಿಗಳಿಗೆ ಮರಳಿ ಸೇವಾವಕಾಶ ಕಲ್ಪಿಸಿ ಕೊಡುವ ಸಲುವಾಗಿ ಬಂದಿದ್ದಾನೆ. ಅದೇ ಸಾಯಿಯು ತನ್ನ ಹಿಂದಿನ ಜೊತೆಗಾರರೊಂದಿಗೆ ಕಳೆಯುವ ಸಲುವಾಗಿ ಶಿರ್ಡಿಯಿಂದ ಬಂದಿದ್ದಾನೆ. ಸರ್ವ ಸಮಗ್ರವೂ, ಸರ್ವವ್ಯಾಪಕವೂ ಆದ ವಿಷ್ಣು ತತ್ವವು ಈಗ ಗ್ರಾಹ್ಯವಾದ, ಗುರುತಿಸಬಹುದಾದ ಮಾನವ ರೂಪದಲ್ಲಿ ಬಂದಿದೆ, ನೀವು ಪ್ರಯೋಜನ ಪಡೆದುಕೊಳ್ಳಬೇಕೆಂದು. ಈಗ ಹಿಂದಿನ ಆಯುಧಗಳಾಗಲಿ, ಸಲಕರಣೆಗಳಾಗಲಿ ಅವನಿಗೆ ಇಲ್ಲ. ಏಕೆಂದರೆ ಅವುಗಳನ್ನು ಅವನು ಇಲ್ಲೇ ಸಿದ್ಧಪಡಿಸಿಕೊಳ್ಳುತ್ತಾನೆ. "ತಾವೇ ಆ ಅತಿ ಮಾನುಷ ಬುದ್ಧಿಮತ್ತೆಯ ಸ್ವಯಂ ನಿರ್ಧಾರಿತ ಮಾನವ ಅಭಿವ್ಯಕ್ತಿ ಎಂದು ಬಾಬಾ ಸ್ಥಿರೀಕರಿಸಿದರು. ಅವರು ಹೇಳುತ್ತಾರೆ: "ನಿಮಗೆ ಹುಟ್ಟುವುದು ಒಂದು ಆತಂಕದ ಕ್ಷಣ; ಶೈಶವವೆಲ್ಲ ಆತಂಕದಿಂದ ತುಂಬಿ ಹೋಗಿದೆ; ಬದುಕು ಆತಂಕ ಕಳವಳಗಳ ಸರಣಿಯೇ ಆಗಿದೆ; ಆತಂಕಮಯ ಘಟನೆಗಳಿಂದಲೇ ಜೀವಿಕೆಯನ್ನು ಸಂಪಾದಿಸುತ್ತೀರಿ; ಮುಪ್ಪು ಮತ್ತು ಸಾವು ಅಪಾರವಾದ ಆತಂಕವನ್ನು

ಉಂಟುಮಾಡುತ್ತವೆ; ಸಂತೋಷ ಬಂದರೂ, ಅದೆಲ್ಲಿ ಕಳೆದುಹೋಗುವುದೋ ಎಂದು ಆತಂಕ ಪಡುತ್ತೀರಿ; ಹೀಗೆ ನಿಮ್ಮ ಎಲ್ಲ ಚಟುವಟಿಕೆಗಳೂ ಆತಂಕದಿಂದ ತುಂಬಿ ಹೋಗಿವೆ. ಈ ಎಲ್ಲ ಆತಂಕಗಳನ್ನು ಒಂದೇ ಒಂದು ಕಾತರತೆಗೆ, ಸಾಯಿಯ ಅನುಗ್ರಹವನ್ನು ಹೇಗೆ ತಾನೇ ಪಡೆಯಬಹುದು ಎಂಬ ಒಂದೇ ಆತಂಕಕ್ಕೆ ವಿನಿಮಯ ಮಾಡಿಕೊಂಡು ಬಿಡಿ- ನೀವು ಅಪಾರವಾದ ಯಾತನೆ, ಅಶಾಂತಿಗಳಿಂದ ಬಿಡುಗಡೆ ಹೊಂದುತ್ತೀರಿ." ಅವರ ಪೀಠಿಕಾ ಪದ್ಯಗಳು ಅನೇಕ ವೇಳೆ ಭಕ್ತರನ್ನು ಉದ್ದೇಶಿಸಿರುತ್ತವೆ. ಸ್ಥಿರವಾದ ಶ್ರದ್ಧೆಯೊಂದೇ ನಿತ್ಯವಾದ ಶಾಂತಿಯನ್ನು ನೀಡಬಲ್ಲುದು ಎಂದು ಹೇಳುತ್ತವೆ. "ಕಣ್ಣುಗಳಲ್ಲಿ ಕರುಣೆ; ನಾಲಗೆಯ ಮೇಲೆ ಸಿಹಿಯಾದ ಮಾತು; ಮುಗುಳ್ನಗೆ ತುಂಬಿದ ಮುಖದಲ್ಲಿ ಅಮೃತೋಪಮವಾದ ಹೊಳಪು; ಕೈಯ ಪ್ರತಿ ಚಲನೆಯಲ್ಲೂ ಭರವಸೆ - ಇದು ಸಾಯಿ. ನಿಮ್ಮ ಬಳಿಗೆ ಬಂದಿರುವ ಈ ರಕ್ಷಕನನ್ನು ಬಿಡದೆ ಭದ್ರವಾಗಿ ಹಿಡಿದುಕೊಳ್ಳಿ."

## ಭದ್ರವಾಗಿ ಹಿಡಿಯಿರಿ

ಅನೇಕ ವರ್ಷಗಳ ಹಿಂದೆಯೇ ಅವರು ಹಾಡಿದ ಈ ಪದ್ಯದ ಮಹತ್ವವನ್ನು ಕುರಿತು ಸ್ವಲ್ಪ ಆಲೋಚನೆ ಮಾಡಿ: "ಏನನ್ನೋ ಹಿಡಿದುಕೊಳ್ಳಲು ಹೊರಟು ಬೇರೇನನ್ನೋ ಹಿಡಿದು ಕೊಂಡಿರುವಾಗ ಅದನ್ನು ಭದ್ರವಾಗಿ ಹಿಡಿದಿರಿಸಿಕೊಳ್ಳಿ. ಕೇಳಬೇಕಾದ ಅಗತ್ಯವಿರಲಿಲ್ಲ, ಆದರೂ ನೀವು ಏನನ್ನೋ ಕೇಳಿದಿರಿ; ಆ ಉಡುಗೊರೆ ನಿಮಗೆ ದೊರಕುವವರೆಗೂ ಬಿಡಬೇಡಿ. ಆಸೆಯ ಅವಶ್ಯಕತೆಯಿಲ್ಲದಿದ್ದರೂ ನೀವು ಮನಸ್ಸಿನಲ್ಲಿ ಯಾವುದೋ ಆಸೆಯನ್ನು ಬೆಳೆಸಿಕೊಂಡಿರಿ. ತೆರೆದು ನಿಮ್ಮ ಆಸೆ ಪೂರೈಸುವವರೆಗೂ ಬಿಡದೆ ಬಾಗಿಲು ತಟ್ಟುತ್ತೀರಿ. ಒಂದೇ, ನಿಮ್ಮ ಹಂಬಲಿಕೆಯನ್ನು ತಾಳಲಾರದೆ ನಾನು ನೀವು ಕೇಳಿದ್ದನ್ನು ಈಡೇರಿಸಬೇಕು, ಇಲ್ಲವೆ ನಿಮ್ಮ ಆಸೆಯ ಮೌಲ್ಯ ಹೀನತೆಯನ್ನು ನೀವೇ ಅರ್ಥ ಮಾಡಿಕೊಂಡು ಆ ವ್ಯರ್ಥ ಆಸೆಯನ್ನು ಗೆಲ್ಲಬೇಕು." ಮೊದಲನೆಯ ಜಾಗತಿಕ ಸಮ್ಮೇಳನದಲ್ಲಿ ಇದುವರೆಗೆ ಮನುಷ್ಯನು ದೇವರನ್ನು ಬಣ್ಣಿಸಲು ಬಳಸಿರುವ ಎಲ್ಲ ನಾಮಗಳು ಮತ್ತು ಎಲ್ಲ ರೂಪಗಳು ತಾವೇ ಎಂದು ಮಾಡಿದ ಘೋಷಣೆಗನುಗುಣವಾಗಿ, ರಾಮ ಕೃಷ್ಣ ಶಿವ ಮೊದಲಾದ ದೇವತೆಗಳಿಗೆ ಮೀಸಲಾದ ಉತ್ಸವದ ದಿನಗಳಲ್ಲಿ ಮಾಡುವ ಉಪನ್ಯಾಸಗಳ ಪೀಠಿಕಾ ಪದ್ಯದಲ್ಲಿ ಆ ದೇವತೆಯೂ ತಾವೂ ಒಂದೇ ಎಂಬರ್ಥ ಬರುವಂತೆ ಹೇಳುತ್ತಾರೆ. ಒಂದು ಶಿವರಾತ್ರಿಯಂದು, ಈಗ ಕೆಲವು ವರ್ಷಗಳ ಹಿಂದೆ ಇಪ್ಪತ್ತೈದು ಸಾವಿರ ಶ್ರೋತೃಗಳ ಎದುರಿಗೆ ನಿಂತು ಹೀಗೆ ಘೋಷಿಸಿದರು: "ಇಂದು ಶಿವನು ಮರ್ತ್ಯರ ದೃಷ್ಟಿಗೆ ನಿಲುಕುವಂತೆ ಬಂದಿದ್ದಾನೆ, ಪರ್ತಿಗ್ರಾಮದಲ್ಲಿ ನೆಲೆಸಿರುವ ಶಿವನಿವನು. ಗಂಗೆ ಹರಿಯುತ್ತಿರುವ ಜಟೆ, ಹುಬ್ಬಿನ ನಡುವೆ ಮೂರನೆಯ ಕಣ್ಣು, ನೀಲಕಂಠ, ಸರ್ಪಕಂಕಣ, ಧರಿಸಿದ ವ್ಯಾಘ್ರಚರ್ಮ, ಹಣೆಯಲ್ಲಿ ಕುಂಕುಮ, ತಾಂಬೂಲದಿಂದ ಕೆಂಪಾದ ತುಟಿಗಳು."

ಸುಮಾರು ನೂರೈವತ್ತು ಜನ ಭಕ್ತರ ತಂಡವನ್ನು ಭಗವಾನರು ಹಿಮಾಲಯದ ಸುಪ್ರಸಿದ್ಧ ಬದರೀ ನಾರಾಯಣ ಕ್ಷೇತ್ರಕ್ಕೆ ಕರೆದೊಯ್ದರು. ಬೆಟ್ಟವನ್ನೇರುವ ಮೊದಲು ಅವರನ್ನು ಉದ್ದೇಶಿಸಿ ಹರಿದ್ವಾರದಲ್ಲಿ ಮಾತನಾಡಿದರು. "ನಿಮ್ಮದು ವಿಶೇಷವಾದ ಅದೃಷ್ಟವೇ ಸರಿ. ನಾರಾಯಣನೊಂದಿಗೆ ನಾರಾಯಣನ ಸನ್ನಿಧಿಗೆ ಹೋಗುವುದು."

## ಕಾಣದ ಶಕ್ತಿ

ಒಂದು ಸಾರಿ ಬಾಬಾ ಇನ್ನೊಂದು ಹಾಡು ಹಾಡಿದರು. ಆಕಾಶಕಾಯಗಳು ಹಾಗೂ ಸಕಲ ಜೀವಿಗಳ ಚಲನೆಯನ್ನು ನಿಯಂತ್ರಿಸುವ ಮತ್ತು ನಮ್ಮ ಪ್ರತಿಯೊಬ್ಬರ ಭವಿಷ್ಯವನ್ನೂ ರೂಪಿಸುವ ಕಾಣದ ಶಕ್ತಿ ತಾನು ಎಂದು ಅದರಲ್ಲಿ ಘೋಷಿಸಿದರು. ಇದು ಮದರಾಸಿನಲ್ಲಿ ಅಖಿಲ ಭಾರತ ಸಾಯಿ ಸಂಸ್ಥೆಗಳ ಸಮ್ಮೇಳನವೊಂದನ್ನು ಉದ್ಘಾಟಿಸುವಾಗ ಹಾಡಿದ್ದು. ಸಂಕಲ್ಪವು ಸರ್ವಶಕ್ತವೂ, ಶಾಶ್ವತವೂ ಆಗಿದ್ದರೆ ಅದು ಮಾನವರ ನಡುವೆ ಮಾನವನಾಗಿ ಅವತರಿಸಬಹುದು. ಬೇರೊಂದು ಸಂದರ್ಭದಲ್ಲಿ ಅವರು ನುಡಿದರು: "ಮೂರು ಬಗೆಯ ಜನರಿದ್ದಾರೆ. ಇತರರಿಗೆ ಗಮನಕೊಡದೆ ತಮ್ಮ ಸಂತೋಷವನ್ನು ಮೊದಲು ಗಣಿಸುವವರು; ಇತರರ ಸಂತೋಷವನ್ನು ಮೊದಲು ಗಣಿಸಿ ಅದರಲ್ಲಿ ಆನಂದ ಪಡೆಯುವವರು; ತಮಗೆ ಸಂತೋಷವಾಗದಿದ್ದರೂ ಇತರು ಸಂತೋಷ ಪಡಲು ಅವಕಾಶ ಕೊಡದವರು. "ಅಮೆರಿಕನ್ನರ ಒಂದು ಗುಂಪಿಗೆ ಅವರು ಒಂದು ಸಂದೇಶ ನೀಡಿದಾಗ ಒತ್ತು ಸ್ವಲ್ಪ ಬೇರೆಯ ರೀತಿಯಲ್ಲಿತ್ತು. "ನೀವು ಮುಗುಳು ನಗುವ ಹೂವಿನ ಹಾಗೆ; ಮಿನುಗುವ ನಕ್ಷತ್ರದ ಹಾಗೆ. ಭೂಮಿಯಲ್ಲಾಗಲಿ ಆಕಾಶದಲ್ಲಾಗಲಿ ನೀವಲ್ಲದೆ ಬೇರೆ ಏನಿದೆ? ಅಂದ ಮೇಲೆ ನೀವೇಕೆ ಆಸೆಪಡಬೇಕು? ನೀವೇ ವಿಶ್ವದ ಪ್ರಭುವಾಗಿದ್ದೀರಿ. ವಿಶ್ವವನ್ನು ಸೃಷ್ಟಿಸಿ, ಸ್ವಲ್ಪಕಾಲ ಅದರೊಂದಿಗೆ ಆಟವಾಡಿ ಆಮೇಲೆ ನಿಮ್ಮೊಳಕ್ಕೆ ಸೆಳೆದುಕೊಂಡು ಬಿಡುವಿರಿ. ನೀವು ನಿಜದಲ್ಲಿ ಸತ್- ಚಿತ್- ಆನಂದ" ಪ್ರತಿಯೊಬ್ಬ ವ್ಯಕ್ತಿಗೂ ಅವನ ಬದುಕಿನ ಗುರಿಯನ್ನು ತಿಳಿಸಿಕೊಡಬೇಕು ಎಂದು ಬಾಬಾ ಒತ್ತಾಯ ಪಡಿಸುತ್ತಾರೆ. 'ನಾನು ಬೆಳಕಿನಲ್ಲಿದ್ದೇನೆ' ಎಂಬ ಹಂತದಿಂದ, 'ಬೆಳಕು ನನ್ನಲ್ಲಿದೆ' ಎಂಬ ಹಂತಕ್ಕೆ ಹೋಗಿ ಅಲ್ಲಿಂದ ಅಂತಿಮ ಸತ್ಯವಾದ 'ನಾನೇ ಬೆಳಕಾಗಿದ್ದೇನೆ' ಹಂತವನ್ನು ತಲುಪಬೇಕು. ನೀವೇ ಬೆಳಕಾದಾಗ ಅಲ್ಲಿ ಕತ್ತಲೆ ಇರಲು ಸಾಧ್ಯವಿಲ್ಲ. ಆಸೆ ಇಲ್ಲ, ಭೀತಿ ಇಲ್ಲ, ದ್ವೇಷ ಇಲ್ಲ, ಅಹಂಕಾರ ಇಲ್ಲ.

ಮಕ್ಕಳಿಗೆ ನೀಡಿದ ಈ ಸಂದೇಶದಲ್ಲಿ ಬಾಬಾ ಸರಳವಾಗಿ, ನೇರವಾಗಿ, ಆ ಮಕ್ಕಳು ತಮ್ಮ ಸುತ್ತ ಕುಳಿತು ಅಗಲವಾಗಿ ಕಣ್ಣು ತೆರೆದು ಕೇಳುತ್ತಿದ್ದಾರೆ ಎಂಬಷ್ಟು ಆತ್ಮೀಯತೆಯಿಂದ ಹೇಳಿದ್ದಾರೆ.

## ಪ್ರೀತಿಯ ಮಕ್ಕಳೆ,

ನೀವು ಈ ಅತ್ಯಂತ ಭವ್ಯವಾದ ದೇಶ ಭಾರತದಲ್ಲಿ ಹುಟ್ಟಿದ್ದೀರಿ ಮತ್ತು ಇಲ್ಲಿ ಬೆಳೆದಿದ್ದೀರಿ. ನಿಮ್ಮ ದೇಶದ ಇತಿಹಾಸ, ಪವಿತ್ರ ಪರಂಪರೆಗಳು, ಜ್ಞಾನಿಗಳ ಸಾಧು ಸಂತರ ಜೀವನ ಮತ್ತು ಬೋಧನೆಗಳು ಇವುಗಳನ್ನು ಕಲಿಯದೆ ಹೋದರೆ ನಿಮಗೆ ಕಲಿಯಲು ಬೇರೆ ಏನಿದೆ?

ನೀತಿ ಮತ್ತು ಧರ್ಮಗಳ ಬೆಳಕನ್ನು ಹಚ್ಚಿರಿ. ಈ ದೇಶದಲ್ಲಿ ಹಿಂದೊಮ್ಮೆ ಉಜ್ವಲವಾಗಿ ಬೆಳಗಿದ ಈ ದೀಪವು ಈಗ ಮತ್ತೆ ಜಗತ್ತನ್ನು ಬೆಳಗಲಿ.

## ಸಂದೇಶಗಳು

ವಿದ್ಯಾರ್ಥಿಗಳಿಗೆ ನೀಡಿದ ಸಂದೇಶವೊಂದರಲ್ಲಿ ಅವರು ಕೇಳುತ್ತಾರೆ: "ಜೀವನದ ಗುರಿ ಇಷ್ಟೇಯೆ? ದೃಷ್ಟಿಗೋಚರವಾದ ಈ ಜಗತ್ತಿನಲ್ಲಿ ಮೇಲೇರಿ ಇಳಿಯುತ್ತಲೇ ಇರುವ ಸಂತೋಷ-

ದುಃಖಗಳ ಅಲೆಗಳ ನಡುವೆ ಹೋರಾಡುತ್ತಲೇ ಇರುವುದೇನು? ಕಾಮನೆಗಳ ಸುಂಟರಗಾಳಿಗೆ ಸಿಕ್ಕಿ ಅದು ಒಯ್ದಲ್ಲಿಗೆ ಹೋಗುವುದೇನು? ಆಹಾರ, ವಸತಿ, ಸುಖ, ಇಂದ್ರಿಯಲೋಲುಪ್ತಿ ಇವುಗಳಲ್ಲಿ ಮಗ್ನರಾಗಿದ್ದು ಕೊನೆಗೆ ಸಾವಿನ ಹೆಬ್ಬಂಡೆಯ ಮೇಲೆ ಬಿದ್ದುಕೊಳ್ಳುವುದೇನು?" ಇನ್ನೊಂದು ಸಂದೇಶದಲ್ಲಿ ಅವರು ಒಂದು ಮೂಲ ಸತ್ಯವನ್ನು ಒತ್ತಿ ಹೇಳುತ್ತಾರೆ: ಉನ್ನತ ಜೀವನವನ್ನು ನಡೆಸಲೆತ್ನಿಸುವ ಬದಲು ಮೇಲ್ಮಟ್ಟದ ಬದುಕು ಹುಡುಕಿಕೊಂಡು ಹೋಗುತ್ತಿರುವುದು ಮಾನವ ಸಮಾಜದಲ್ಲಿ ಭಾರೀ ಹಾನಿಯನ್ನುಂಟುಮಾಡಿದೆ. ಉನ್ನತ ಜೀವನವು ನೈತಿಕತೆ, ವಿನಯ, ಅನಾಸಕ್ತಿ, ಕರುಣೆಗಳನ್ನು ಕೋರುತ್ತದೆ; ಸುಖ ಭೋಗ ಸಾಧನಗಳಿಗಾಗಿ ಮೇಲಾಟವನ್ನು, ಸ್ಪರ್ಧೆಯನ್ನು, ಸದಾ ಅವುಗಳನ್ನು ಸವಿಯುತ್ತಿರುವುದನ್ನು ಅದು ಪ್ರೋತ್ಸಾಹಿಸುವುದಿಲ್ಲ. ಇಂದು ಮನುಷ್ಯನು ಆಸೆಗಳ ದಾಸನಾಗಿದ್ದಾನೆ. ಸುಖವನ್ನು ಐಷಾರಾಮವನ್ನು ಗಳಿಸಬೇಕೆಂಬ ಹಂಬಲಿಕೆಯ ಎದುರು ಅವನು ಅಸಹಾಯಕನಾಗಿ ಕುಳಿತಿದ್ದಾನೆ. ಲೌಕಿಕ ಕಾಮನೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲಾಗದಷ್ಟು ದುರ್ಬಲನಾಗಿರುವುದರಿಂದ ಅವನು ತನ್ನೊಳಗೆ ಸುಪ್ತವಾಗಿರುವ ದೈವಿಕತೆಯನ್ನು ಜಾಗ್ರತಗೊಳಿಸಲಾರದಾಗಿದ್ದಾನೆ.'

ಈ ಅವತಾರದಲ್ಲಿ ತಾವು ಪರಮೋನ್ನತ ಶಿಕ್ಷಕರಾಗಿರುವುದಾಗಿ ಬಾಬಾ ಹೇಳಿದ್ದಾರೆ. 'ಅಹಂ ಸತ್ಯ ಬೋಧಕಃ' ಎನ್ನುತ್ತಾರವರು. ಅವರು ಎಲ್ಲಾ ಕಾಲಗಳಲ್ಲೂ, ಎಲ್ಲಾ ಸ್ಥಳಗಳಲ್ಲೂ, ಎಲ್ಲ ವಿಧಾನಗಳಿಂದಲೂ ಬೋಧಿಸುತ್ತಾರೆ. ಪ್ರೇಮವನ್ನು ವರ್ಷಿಸಿ ನಿಮ್ಮನ್ನು ಗೆಲ್ಲುತ್ತಾರೆ; ಪ್ರೇಮವನ್ನು ತಡೆ ಹಿಡಿದಿಟ್ಟುಕೊಂಡು ನಿಮಗೆ ಚಿಕಿತ್ಸೆ ಮಾಡುತ್ತಾರೆ. ಸದಾಕಾಲವೂ ಸುಖಸಮೃದ್ಧಿಯೇ ಹರಿಯುತ್ತಿರಬೇಕೆಂದು ಬಯಸಿದ ಕೆಲವು ಭಕ್ತರಿಗೆ ಒಮ್ಮೆ ಅವರು ಕಟುವಾದ ಮಾತುಗಳಲ್ಲಿ ಹೀಗೆ ಹೇಳಿದರು: "ನನ್ನ ಬಳಿಯೇ ಇರಲು ಅವಕಾಶ ಕೊಟ್ಟರೆ ನಿಮಗೆ ಸಂತೋಷವಾಗುತ್ತದೇನು? ಮರುಕ್ಷಣದಲ್ಲೇ ನಿಮಗೆ ನಾನು ಅಗಲಿಕೆಯ ವೇದನೆಯನ್ನು ಉಂಟುಮಾಡಬಹುದು. ನಿಮ್ಮ ಕಣ್ಣೀರು ನೋಡಿ ಸಾಯಿಗೆ ಆನಂದವಾಗುತ್ತದೆಂದು ಭಾವಿಸುವಿರೇನು? ಅದೇ ಕ್ಷಣಕ್ಕೆ ನೀವು ಪಕ್ಕೆ ಬಿರಿಯುವಷ್ಟು ನಗುವಂತೆ ಮಾಡಬಹುದು. ಅದೇ ಸಂತೋಷ ಮತ್ತೆ ಮತ್ತೆ ಮುಂದುವರಿಯುತ್ತಿರುವಂತೆ ಮಾಡಬಹುದು. ನಿಮ್ಮನ್ನು ತುಸು ಹೊಗಳಿದೊಡನೆ ನೀವು ಸ್ವಲ್ಪ ಎತ್ತರಕ್ಕೆ ಏರಿದಿರೆಂಬ ಭಾವನೆ ಬರುತ್ತದೇನು? ಒಡನೆಯೇ ಅಪಹಾಸ್ಯ ಮಾಡಿ ನಿಮ್ಮ ಗರ್ವದ ಗುಳ್ಳೆಯನ್ನು ಒಡೆದು ಹಾಕುತ್ತೇನೆ. ಹೆದರಬೇಡಿ ಎಂದು ನಾನು ಹೇಳಿದಾಗ ನಿಮಗೆ ಸುರಕ್ಷಿತತೆಯ ಭಾವನೆ ಬರುತ್ತದೆಯೇ? ಮುಂದಿನ ಕ್ಷಣವೇ ನಿಮಗೆ ಸಹಿಸಲಾಗದ ನೋವು ಕೊಟ್ಟು, ಅದರ ವಿಮೋಚನೆಗಾಗಿ ನೀವು ಮೊರೆಯಿಡುವಾಗ ನಾನು ಅಲಕ್ಷಿಸುವಂತೆ ತೋರಿಸಿಕೊಳ್ಳಬಹುದು. ನಿಮ್ಮನ್ನು ನಾನು ಹಿಂದಕ್ಕೆ ಹೋಗಲೂ ಬಿಡುವುದಿಲ್ಲ, ಮುಂದೆ ಹೋಗಲೂ ಬಿಡುವುದಿಲ್ಲ! ನಿಮಗೆ ಹುಚ್ಚು ಹಿಡಿಯುವಂತಾಗಿ, ನಿಮ್ಮ ಅಹಂಕಾರ ಸುಟ್ಟು ಕರಿಕಲಾಗಬೇಕು. ಪ್ರೇಮದ, ಬೆಳಕಿನ ಮೂರ್ತಿಯಾದ ಈ ಮೋಹಕ ಸಾಯಿಯನ್ನು ಅಗಲಿ ಯಾರು ತಾನೆ ದೂರ ಹೋಗಬಲ್ಲರು? ಈ ದ್ವಿವಿಧ ಪಾತ್ರವಿದ್ದರೂ ಏಕೆ ಸಾಯಿ ಅನಿವಾರ್ಯ ಎಂಬುದನ್ನು ಕಂಡುಕೊಳ್ಳಿರಿ."

ಈ ಸಂದೇಶದಲ್ಲಿ ಅವರು ತಮ್ಮ ಒಂದೊಂದು ಕೃತ್ಯವು, ಕೋಪದ ಹೊಳಹೂ, ಕಣ್ಣಿನ ಮಿನುಗೂ, ಪ್ರತಿಯೊಂದು ಮುಗುಳ್ನಗೆಯೂ ಅಥವಾ ಹುಬ್ಬಿನ ಬಾಗೂ ಸ್ವೀಕರಿಸುವವನಿಗೆ ಆಳವಾದ ಮಹತ್ವ ಹೊಂದಿರುತ್ತವೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇಂತಹ ಕೆಲವು ಸಂದೇಶಗಳನ್ನು ಆಶು ಕವಿತೆಗಳಾಗಿ ಕಟ್ಟಿ ಬಾಬಾ ಹಾಡಿದ್ದಾರೆ. ಕೇಳಲು ಆಸಕ್ತಿಯಿಂದ ಕುಳಿತ ಶ್ರೋತೃ ಸಮೂಹವನ್ನು ಕಲಕುತ್ತಿರುವ ವ್ಯಾಕುಲತೆಗಳು, ಪ್ರಶ್ನೆಗಳು, ಸಂದೇಹಗಳಿಗೆ ಉತ್ತರ ಕೊಡುವಂತೆ, ಆ ಗಳಿಗೆಯ ಮನೋಧರ್ಮಕ್ಕೆ ತಕ್ಕಂತೆ ಬಾಬಾ ಹಾಡುಗಳನ್ನು ಕಟ್ಟುತ್ತಾರೆ.

"ಕಲ್ಪವೃಕ್ಷವೇ ನಿಮ್ಮೆದುರಿಗಿರುವಾಗ ಬೇರೆ ಸಣ್ಣ ಪುಟ್ಟ ಗಿಡ ಮರಗಳನ್ನು ಬೆಳೆಸಲೆಂದು ಏಕೆ ಹಂಬಲಿಸುತ್ತೀರಿ?" ಎಂದು ಅವರು ಹಾಡುತ್ತಾರೆ. ಕೇಳಿದೊಡನೆ ಕೊಡುವ ಕಾಮಧೇನು ದೊರಕುತ್ತಿರುವಾಗ, ಹಾಲಿಗಾಗಿ ಸಾಮಾನ್ಯ ಹಸುವನ್ನು ಏಕೆ ಕೇಳುತ್ತೀರಿ? ಚಿನ್ನ ಬೆಳ್ಳಿ ತುಂಬಿರುವ ಮೇರು ಪರ್ವತವೇ ನಿಮ್ಮ ಬಳಿಯಿರುವಾಗ ಸಣ್ಣ ಪುಟ್ಟ ಪ್ರಯೋಜನಗಳಿಗಾಗಿ ಏಕೆ ಹಲುಬಿ ಓಡಾಡುತ್ತೀರಿ? ಮೋಕ್ಷದಾಯಿಯಾದ ಸಾಯಿ ನಿಮ್ಮೊಂದಿಗಿರುತ್ತಾ, ಮತ್ತೆ ಮತ್ತೆ ದುಃಖಕ್ಕೆ ನಿಮ್ಮನ್ನು ತಳ್ಳುವ ಕುಲ್ಲಕ ಆಸೆಗಳಿಗೇಕೆ ಹಂಬಲಿಸುತ್ತೀರಿ?" ಬಾಬಾ ಅವರ ಅನೇಕ ಉಪನ್ಯಾಸಗಳು ಹೀಗೆ ಪೀಠಿಕೆಯಾಗಿ ಹಾಡಿದ ಒಂದು ಆಲೋಚನೆಗೆ ನೀಡಿದ ವ್ಯಾಖ್ಯಾನವಾಗಿರುತ್ತವೆ.

ಒಂದು ಗುಂಪು ಜನ ಅಮೆರಿಕನ್ನರು ತಮ್ಮೊಂದಿಗೆ ಕೊಂಡೊಯ್ಯಲು ಒಂದು ಸಂದೇಶ ದಯಪಾಲಿಸಬೇಕೆಂದು ಬಾಬಾ ಅವರನ್ನು ಬೇಡಿದರು. ಅದಕ್ಕೆ ಬಾಬಾ ಸುಂದರವಾದ ಅಕ್ಷರಗಳಲ್ಲಿ ಕೈಯಾರ ಹೀಗೆ ಬರೆದುಕೊಟ್ಟರು: "ಸಿಪ್ಪೆ ಕಹಿಯಾಗಿರಬಹುದು, ಆದರೆ ಹಣ್ಣು ಸಿಹಿಯಾಗಿರಲೇಬೇಕು. ಹಣ್ಣಿನ ರಸ ಮತ್ತು ಅದರಲ್ಲಿರುವ ಸಿಹಿಯ ಅಂಶ ಮುಖ್ಯ; ಕ್ರೋಧ, ಹೊಟ್ಟೆಕಿಚ್ಚು, ಮಾತ್ಸರ್ಯ, ಲೋಭಗಳ ಕಹಿಸಿಪ್ಪೆಯನ್ನು ಸುಲಿದು ಎಸೆಯಿರಿ; ಹಣ್ಣಿನ ಸಿಹಿಯನ್ನು ಸವಿಯಿರಿ. ಆ ಸಿಹಿ ನಿಮ್ಮಲ್ಲಿ ಹೆಚ್ಚುತ್ತಿರಲಿ. ... ತಾವರೆ ಹೂವಾಗಿರಿ: ತಾವರೆ ಕೆಸರಿನಲ್ಲಿ ಹುಟ್ಟುತ್ತದೆ, ನೀರಿನ ಮೂಲಕ ಮೇಲಕ್ಕೆ ಏರಿ ತಲೆಯನ್ನು ಮೇಲೆತ್ತಿ ನೀರಿನಲ್ಲಿ ನೆನೆಯಲು ನಿರಾಕರಿಸುತ್ತದೆ. ಹಾಗೆ ಅನಾಸಕ್ತಿ ಬೆಳೆಸಿಕೊಂಡು ತಾವರೆಯಂತಾಗಿ, ನೈದಿಲೆಯಂತಾಗಿ."

ಪತ್ರಗಳು, ದಿವ್ಯೋಪನ್ಯಾಸಗಳು, ಪುಸ್ತಕಗಳು ಮತ್ತು ಲೇಖನಗಳ ಮೂಲಕ ಬಾಬಾ ನಮಗೆ ಬೋಧಿಸುತ್ತಾರೆ. ಸರಳವೂ, ಸುಭಗವೂ ಆದ ತೆಲುಗು ಆಡು ಭಾಷೆಯಲ್ಲಿ ಅಥವಾ ಇಂಗ್ಲೀಷಿನಲ್ಲಿ ಅವರು ಬರೆಯುತ್ತಾರೆ. ಸಂದೇಶ ಮಾತ್ರ ಯಾವಾಗಲೂ ಆ ಕ್ಷಣಕ್ಕೆ ಮೂಡಿದುದೆ. ಅವರ ವಿಚಾರಗಳು ಮಧುರವಾದ ಹಾಡುಗಳಾಗಿ ಪದ್ಯಗಳಾಗಿ ಹೃದಯಂಗಮವಾಗಿರುತ್ತವೆ. ಅವರ ಲಿಪಿ ಹಿಂದಿನ ಕಾಲದ ಮಣೀಯ ಬರಹಗಳನ್ನು ನೆನಪಿಗೆ ತರುವಂತೆ ಮನೋಹರ; ಸಾಲುಗಳು ನೇರ ಮತ್ತು ಸಮಾನಾಂತರ, ಕಾಗದದ ಮೇಲೆ ಹರಡಿದ ಹೂಮಾಲೆಯ ಹಾಗೆ. ಪ್ರತಿಯೊಂದು ವಾಕ್ಯದ ಮೂಲಕವೂ ಕಾವ್ಯ ಮತ್ತು ಮಾಧುರ್ಯ ಮಿನುಗುತ್ತವೆ. ಪ್ರತಿಯೊಂದು ನುಡಿಕಟ್ಟಿನ ಹಿಂದೆಯೂ, ಸ್ಪಷ್ಟವಾಗಿ ಮಾನವ ರೂಪವಿದ್ದರೂ, ದೈವಿಕ ಜ್ಞಾನವು ನೆಲೆಯೂರಿರುತ್ತದೆ. ಹಾಗಾಗಿ ಅವರು ಮಾನವ ಜನಾಂಗಕ್ಕೆ ನೀಡಲು ಬಂದಿರುವ ಅನಂತ ಜ್ಞಾನ, ಕರುಣೆಗಳನ್ನು ಅವರ ಸಂದೇಶ ಒಯ್ದು ಕೊಡುತ್ತದೆ.

## ತಾಯಿ ಊಡುತ್ತಾಳೆ

ಹಸಿವೆಯಾಗಿದ್ದರೂ, ಅಜ್ಞಾನದಿಂದ ಊಟ ಮಾಡಲು ನಿರಾಕರಿಸುವ ಹಟಮಾರಿ ಮಗುವಿಗೆ ಊಟ ಮಾಡಿಸಲು ಹಂಬಲಿಸುವ ತಾಯಿಯ ಹಾಗೆ ತಾವು ಎಂದು ಬಾಬಾ ಹೇಳಿಕೊಂಡಿದ್ದಾರೆ. ಮಗುವನ್ನು ಅವಳು ಮುದ್ದಿಸಬೇಕು, ಒಲಿಸಬೇಕು, ಪ್ರೀತಿಯಿಂದ ಅದರ ಮನಸ್ಸನ್ನು ಗೆಲ್ಲಬೇಕು. ಕೆಲವೊಮ್ಮೆ ಕತೆ ಹೇಳುತ್ತಲೋ, ಹಾಡು ಹೇಳುತ್ತಲೋ ಅದಕ್ಕೆ ಅರಿವೇ ಆಗದ ಹಾಗೆ ಅಗತ್ಯವಾಗಿರುವ ಆಹಾರ ತಿನ್ನುವ ಹಾಗೆ ಮಾಡಬೇಕು. ಬಾಬಾ ಅಮಿತವಾದ ಪ್ರೇಮ ಇಟ್ಟುಕೊಂಡಿರುವುದರಿಂದ ಒಂದು ಮಧುರವಾದ ಹೂನಗೆಯ ಒಳಗೆ ಔಷಧಿಯನ್ನು ಅಡಗಿಸಿಡುತ್ತಾರೆ, ಹಿತವಾದ ದೃಷ್ಟಾಂತ ಕತೆಯಲ್ಲಿ ಒಂದು ಬುದ್ಧಿವಾದದ ಕಂತನ್ನು, ರಸತೊಟ್ಟುವ ತಮಾಷೆಯಲ್ಲಿ ಗಂಭೀರ ಚಿಂತನೆಯನ್ನು ತುಂಬಿಕೊಡುತ್ತಾರೆ.

ಮಾನವನ ಹಸಿವು ಇಂಗಿಸಲು ಅವರು ಸಿದ್ಧಪಡಿಸಿಟ್ಟಿರುವ ಔತಣದ ಅಡಿಗೆಯಾದ ಪುಸ್ತಕಗಳ ಬಗೆಗೆ ಸ್ವಲ್ಪ ನೋಡೋಣ. ಅನೇಕ ವಿದ್ವಾಂಸರು ತಮ್ಮ ಅರಿವಿನ ಆಚೆಗಿರುವುದರ ಬಗೆಗೆ ಸಂದೇಹಪಾಡಿಗಳಾಗಿರುತ್ತಾರೆ, ತಮ್ಮದೇ ಶೈಕ್ಷಣಿಕ ಸಾಧನೆಗಳ ಬಗೆಗೆ ಗರ್ವ ಹೊಂದಿರುತ್ತಾರೆ. ಅಂಥವರಿಗೆ ಅಂಚೆಯಲ್ಲಿ ಪುಸ್ತಕಗಳ ಕಟ್ಟು ಬರುತ್ತದೆ (ಅದ್ಭುತವಾದ ರೀತಿಯಲ್ಲಿ ಬಾಬಾ ಅವರೇ ಕಳುಹಿಸಿರುತ್ತಾರೆ) ಅಥವಾ ಬೇರೆ ವಿವರಣೆಗೆ ನಿಲುಕದ ಮೂಲದಿಂದ ಬರುತ್ತವೆ. ನಿತ್ಯ ನೂತನವೂ ಚೇತೋಹಾರಿಯೂ ಆದ ಈ ಪುಸ್ತಕಗಳು ದಿವ್ಯಸನ್ನಿಧಿಗೆ ಅವರನ್ನು ಕರೆಯುವ ಆಹ್ವಾನ ಪತ್ರಿಕೆಗಳೆಆಗುತ್ತವೆ.

ತಮ್ಮನ್ನು ಮಿಕ್ಕೆಲ್ಲವುಗಳಿಗಿಂತ ಮಿಗಿಲಾಗಿ ಒಂದು ಲಕ್ಷಣದಿಂದ ವರ್ಣಿಸಬೇಕೆಂದರೆ ಅತ್ಯುಚಿತವಾಗಿ 'ಪ್ರೇಮ ಸ್ವರೂಪ' ಎನ್ನಬಹುದು ಎಂದು ಬಾಬಾ ಹೇಳಿದ್ದಾರೆ. ಮಾನವನ ಮನಸ್ಸನ್ನು ಹದಗೊಳಿಸಲು ಅವರ ಲೇಖನಿಯಿಂದ ಹರಿದ ಮೊದಲನೆಯ ವಾಹಿನಿಯ ಹೆಸರೇ ಪ್ರೇಮವಾಹಿನಿ. ಪ್ರೇಮವನ್ನು ಆಧ್ಯಾತ್ಮಿಕ ಸಾಧನೆಯಾಗಿ ನಿರೂಪಿಸಿದ ಮಹಾಜ್ಞಾನಿ ನಾರದನು ಅದನ್ನು 'ಸಾತ್ವಸ್ಮಿನ್ ಪರಮ ಪ್ರೇಮ ಸ್ವರೂಪಾ' ಎಂದು ವರ್ಣಿಸಿದ್ದಾನೆ. ಪ್ರೇಮವನ್ನು ಪರಮ ಎಂದು ಬಣ್ಣಿಸಲಾಗಿದೆ. ಏಕೆಂದರೆ ಅದು ಪೂರ್ಣವಾಗಿರುತ್ತದೆ, ಮುಕ್ತವಾಗಿರುತ್ತದೆ. ಯಾವುದೇ ಷರತ್ತುಗಳಾಗಲಿ, ಚರ್ಚೆ ಚೌಕಶಿಗಳಾಗಲಿ, ಭೀತಿಯ ಕುರುಹಾಗಲಿ ಅದಕ್ಕಿರುವುದಿಲ್ಲ. ಅಂತಹ ದಿವ್ಯ ಪ್ರೇಮವನ್ನು ಆಚರಣೆಯಲ್ಲಿ ತಂದಾಗ, ಅನುಭವಿಸಿದಾಗ ಎಲ್ಲಾ ಭೇದಗಳು ಬಿದ್ದು ಹೋಗುತ್ತವೆ, ದ್ವಂದ್ವ ಅಳಿಯುತ್ತದೆ, ಸತ್ಯವೊಂದೇ ಉಳಿಯುತ್ತದೆ.

## ಗೋಪಿಯರು

ಈ ಪರಮ ಪ್ರೇಮದ ಅತ್ಯುತ್ತಮ ಮಾದರಿಯೆಂದರೆ ಕೃಷ್ಣನ ಬಗೆಗೆ ಬೃಂದಾವನದ ಸರಳ ಗೊಲ್ಲ ಗೊಲ್ಲತಿಯರು ತಳೆದ ಅಕಳಂಕ ಪ್ರೇಮ ಎಂದು ಬಾಬಾ ಹೇಳುತ್ತಾರೆ. ಕೃಷ್ಣನೇ ಅದನ್ನು ಹೀಗೆ ಮೆಚ್ಚಿದ್ದಾನೆ: "ನನಗಾಗಿ ಅವರು ಎಷ್ಟು ಆಳವಾಗಿ ಹಂಬಲಿಸುತ್ತಾರೆಂದರೆ, ಅವರ

ಆಲೋಚನೆಗಳು, ಮಾತುಗಳು, ಕೃತಿಗಳು ಹೇಗೆ ನನ್ನೊಂದಿಗೆ ಬೆಸೆದು ಕೊಂಡಿರುತ್ತವೆಂದರೆ, ಅವರಿಗೆ ಕಾಲದೇಶಗಳ ಪರಿವೆಯಿರುವುದಿಲ್ಲ, ತಮ್ಮ ದೇಹದ ಮತ್ತು ಮೂಲ ಅಗತ್ಯಗಳ ಪ್ರಜ್ಞೆಯೂ ಇರುವುದಿಲ್ಲ. ಅವರು ನನ್ನಲ್ಲಿ ಹೇಗೆ ಬೆರೆತಿದ್ದಾರೆಂದರೆ, ಸಾಗರದಲ್ಲಿ ನದಿಗಳು ಬೆರೆತುಕೊಳ್ಳುವಂತೆ ಅವರು ತಮ್ಮ ವ್ಯಕ್ತಿಗತ ಹೆಸರುಗಳನ್ನೂ ವಿಶಿಷ್ಟತೆಗಳನ್ನೂ ಅಳಿಸಿಕೊಂಡುಬಿಟ್ಟಿದ್ದಾರೆ." ಶ್ರೇಷ್ಠ ದಾರ್ಶನಿಕ - ಸಂತ ಶಂಕರರು ಭಕ್ತಿಯನ್ನು ಕುರಿತು ಹೀಗೆ ಬರೆದರು: ಸ್ವಸ್ವರೂಪ ಅನುಸಂಧಾನಂ ಭಕ್ತಿರಿತಿ ಅಭಿಧೀಯತೇ. (ವ್ಯಕ್ತಿಯು ತನ್ನ ಅಂತರಂಗದಾಳವೇ ಆಗಿರುವ ಪರಸತ್ಯವನ್ನು ಕುರಿತು ನಿರಂತರವಾಗಿ ಧ್ಯಾನ ಮಾಡುವುದೇ ಭಕ್ತಿ). ಬಾಬಾ ಈ ಸತ್ಯವನ್ನು ವಿವರಿಸುತ್ತಾರೆ: "ಆತ್ಮವೇ ಅಂತರಂಗದಾಳದಲ್ಲಿರುವ ಸತ್ಯ. ಧ್ಯಾನಿಸಬೇಕಾದ ಸತ್ಯ ಅದೇ. ಕೃಷ್ಣನು ಅರ್ಜುನನಿಗೆ ಸಮಸ್ತ ಕ್ರಿಯೆಗಳನ್ನೂ ನನಗೆ ಸಮರ್ಪಣೆ ಮಾಡಿ ನನ್ನಲ್ಲಿ ಶರಣಾಗು ಎಂದು ಆದೇಶಿದ್ದರ ಅರ್ಥ ಪ್ರತಿಯೊಂದು ಕ್ಷಣವನ್ನೂ ಆತ್ಮ, ನಿಜವಾದ ನಾನು, ಅಥವಾ ಸ್ವಸ್ವರೂಪದ ಅರಿವಿನಲ್ಲಿ ಕಳೆ ಎಂಬುದಾಗಿ."

ಬಾಬಾ ಪ್ರೇಮವಾಹಿನಿಯಲ್ಲಿ ಹೇಳುತ್ತಾರೆ, "ಪ್ರೇಮದಿಂದ ಮಾತ್ರವೇ ಶ್ರದ್ಧೆಯು ಸ್ಥಿರಗೊಳ್ಳುವುದು ಸಾಧ್ಯ; ಶ್ರದ್ಧೆಯ ಮೂಲಕ ಮಾತ್ರವೇ ಜ್ಞಾನವನ್ನು ಪಡೆಯಬಹುದು; ಜ್ಞಾನದಿಂದ ಮಾತ್ರವೇ ಪರಾಭಕ್ತಿ (ಶರಣಾಗತಿಯೊಂದಿಗೆ ಸಂಪೂರ್ಣವಾದ ಭಕ್ತಿ) ಖಚಿತವಾಗುತ್ತದೆ, ಪರಾಭಕ್ತಿಯಿಂದ ಮಾತ್ರವೇ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಸಾಧ್ಯ."

ಜ್ಞಾನದೇವ ತು ಕೈವಲ್ಯಂ ಎನ್ನುತ್ತದೆ ಗೀತೆ (ಜ್ಞಾನವೊಂದೇ ಬಿಡುಗಡೆಯನ್ನು ಕೊಡಬಲ್ಲುದು) ಭಕ್ತಿಯು ದೃಷ್ಟಿಯನ್ನು ಸ್ಪಷ್ಟಪಡಿಸುತ್ತದೆ, ಮನಸ್ಸನ್ನು ಶುಚಿಗೊಳಿಸುತ್ತದೆ, ಆತ್ಮ ಸಂಯಮವನ್ನು ಬಲಪಡಿಸುತ್ತದೆ, ಚಿಂತನೆಯನ್ನು ಪರಿಶುದ್ಧಗೊಳಿಸುತ್ತದೆ. ಇವುಗಳಿಂದಾಗಿ ಭಗವಂತನು ಹೃದಯದಲ್ಲಿ ಸ್ಪಷ್ಟವಾಗಿ ಮತ್ತು ಸಂಪೂರ್ಣವಾಗಿ ಪ್ರತಿಬಿಂಬಿತನಾಗುತ್ತಾನೆ. ಭಗವಂತನ ಕಡೆಗೆ ನಮ್ಮನ್ನು ಒಯ್ಯುವ ಮೂರು ಪಥಗಳಾದ ಭಕ್ತಿ, ಕರ್ಮ, ಜ್ಞಾನಗಳಲ್ಲಿ ಯಾವುದಕ್ಕೆ ಯಾವ ಸ್ಥಾನ ಎಂಬುದನ್ನು ಕುರಿತು ಯುಗಾಂತರಗಳಿಂದ ನಡೆದಿರುವ ಚರ್ಚೆಯ ಬಗೆಗೆ ಬಾಬಾ ಹೇಳುತ್ತಾರೆ: "ಭಕ್ತಿ ಕರ್ಮ ಮತ್ತು ಜ್ಞಾನ ಬೇರೆ ಬೇರೆ ಎಂಬುದನ್ನು ನಾನು ಒಪ್ಪುವುದಿಲ್ಲ. ಇವುಗಳಲ್ಲಿ ಯಾವುದೊಂದನ್ನು ಮಿಕ್ಕವಕ್ಕಿಂತ ಮುಂದಾಗಿ ನಾನು ಇಡುವುದಿಲ್ಲ. ಇವುಗಳ ಮಿಶ್ರಣವಾಗಬೇಕೆಂದೂ ಹೇಳುವುದಿಲ್ಲ. ಕರ್ಮವೇ ಭಕ್ತಿ, ಭಕ್ತಿಯೇ ಜ್ಞಾನ. ಕಲ್ಲು ಸಕ್ಕರೆಯ ಒಂದು ತುಂಡಿಗೆ ರುಚಿಯಿದೆ, ತೂಕವಿದೆ, ಆಕಾರವಿದೆ; ಈ ಮೂರು ಗುಣಗಳನ್ನು ಬೇರೆ ಬೇರೆ ಮಾಡಲು ಸಾಧ್ಯವಿಲ್ಲ. ಪ್ರತಿಯೊಂದು ತುಂಡಿನಲ್ಲೂ ಈ ಮೂರು ಗುಣಗಳಿದ್ದೇ ಇರುತ್ತವೆ. ಒಂದು ತುಂಡಿನಲ್ಲಿ ಆಕಾರವನ್ನೂ, ಇನ್ನೊಂದರಲ್ಲಿ ತೂಕವನ್ನೂ, ಮೂರನೆಯದರಲ್ಲಿ ಸಿಹಿಯನ್ನೂ ನಾವು ನೋಡುವುದಿಲ್ಲ. ಕಲ್ಲು ಸಕ್ಕರೆಯನ್ನು ನಾಲಿಗೆಯ ಮೇಲಿಟ್ಟೊಡನೆ ಅದರ ಆಕಾರ, ತೂಕ, ಸಿಹಿ ಮೂರು ನಮ್ಮ ಅನುಭವಕ್ಕೆ ಬರುತ್ತವೆ. ಹಾಗೆಯೇ ಜ್ಞಾನ, ಕರ್ಮ ಮತ್ತು ಭಕ್ತಿ ಮೂರನ್ನೂ ಒಂದು ಅಖಂಡವಾಗಿ ಅನುಭವಕ್ಕೆ ತಂದು ಕೊಳ್ಳಬಹುದು." ಪ್ರೇಮವು ಕ್ರಿಯೆಯಾಗಿ ಕರ್ಮವಾಗುತ್ತದೆ, ಅನುಭವಕ್ಕೆ ಜ್ಞಾನವಾಗಿ ಬರುತ್ತದೆ, ಸಾರ್ವತ್ರಿಕವಾಗಿ ಹಂಚಿಕೊಂಡು ಭಕ್ತಿಯಾಗುತ್ತದೆ. ಈ ಮೂರು ಸಾಧನಾ ಪಥಗಳ ಮೇಲ್ಮೆಕೀಳ್ಮೆಗಳನ್ನು ಕುರಿತ ಚರ್ಚೆಯನ್ನು ಹೀಗೆ ಬಾಬಾ ಒಂದೇ ಏಟಿಗೆ ತಳ್ಳಿಹಾಕಿ ಬಿಟ್ಟಿದ್ದಾರೆ.

# ಹಲವು ಆಕಾರದ ಬಟ್ಟಲುಗಳು

ಮೂರ್ತಿ ಪೂಜೆಯ ವಿರೋಧಿಗಳನ್ನು ಬಾಬಾ ತಣ್ಣಗಾಗಿಸಿದ್ದಾರೆ. ಅವರು ಹೇಳುತ್ತಾರೆ, ಮನಸ್ಸಿನಲ್ಲಿ ಗ್ರಹಿಸಬಹುದಾದ ರೂಪದಲ್ಲಿ ಅದೇ ಪರತತ್ತ್ವವನ್ನು ಭಕ್ತಿಯ ಮೂಷೆಯಲ್ಲಿ, ಬಲಿ ಕೊಟ್ಟ ಹೊರತು ನಾಮರಹಿತ, ರೂಪರಹಿತ ನಿರ್ಗುಣ ಪರತತ್ತ್ವವನ್ನು ವ್ಯಕ್ತಿಯು ಆರಾಧಿಸುವುದು ಸಾಧ್ಯವಿಲ್ಲ. "ಸಗುಣ ಭಕ್ತನಾಗದೆ ಯಾರೂ ನಿರ್ಗುಣ ಜ್ಞಾನಿಯಾಗಲಾರರು ಎನ್ನುತ್ತಾರೆ ಅವರು. ಶಂಕರರು 'ಈಶ್ವರ ಅನುಗ್ರಹಾದೇವ ಪುಂಸಾಂ ಅದ್ವೈತ ವಾಸನಾ' ಎನ್ನುತ್ತಾರೆ (ಭಗವಂತನನ್ನು ನಾಮರೂಪ ರಹಿತನೆಂದು ಗ್ರಹಿಸಬೇಕಾದರೆ ಈಶ್ವರನ ಅನುಗ್ರಹದಿಂದಲೇ). 'ಪ್ರೇಮವಾಹಿನಿ'ಯಲ್ಲಿ ಬಾಬಾ ಹೇಳುತ್ತಾರೆ: "ಕಾವ್ಯದಲ್ಲಿ ಉಪಮೆ ರೂಪಕಗಳು ಯಾವ ಕೆಲಸ ಮಾಡುತ್ತವೆಯೋ ವಿಗ್ರಹಗಳೂ ಅದೇ ಉದ್ದೇಶವನ್ನು ಈಡೇರಿಸುತ್ತವೆ. ಅವು ದೈವತ್ವವನ್ನು ನಿದರ್ಶಿಸುತ್ತವೆ ಮತ್ತು ಬೆಳಗುತ್ತವೆ." ವಿಗ್ರಹಗಳು ಆಲಂಕಾರಿಕ ಆಕರ್ಷಕ ಬಟ್ಟಲುಗಳಿದ್ದ ಹಾಗೆ. ದೈವೀಕಾಂತಿಯ ದಿವ್ಯಾಮೃತವನ್ನು ಮೊಗೆದು ಕುಡಿಯಲು ಜನರು ಅವುಗಳನ್ನು ಬಳಸುತ್ತಾರೆ. "ಬಟ್ಟಲಿಲ್ಲದೆ ಅಮೃತವನ್ನು ತುಂಬಿಕೊಂಡು ಕುಡಿಯುವುದು ಸಾಧ್ಯವಿಲ್ಲ. ಒಬ್ಬ ವ್ಯಕ್ತಿಯು ಬೃಂದಾವನದ ನೀಲ ವರ್ಣದ ಗೊಲ್ಲನೆಂಬ ಬಟ್ಟಲಿನಿಂದ ಕುಡಿಯಲು ಇಚ್ಛಿಸಬಹುದು; ಇನ್ನೊಬ್ಬನು ಕೈಲಾಸದ ವಿಶ್ವನರ್ತನ ಪಟು ಎಂಬ ಬಟ್ಟಲಿಂದ ಕುಡಿಯಬಯಸಬಹುದು. ಈ ಆಯ್ಕೆ ಅನುವಂಶಿಕವಾಗಿ ಬಂದಿರುವ ಒಲವು ಅಥವಾ ವೈಯಕ್ತಿಕವಾದ ಒಲವು ಅಥವಾ ಆಧ್ಯಾತ್ಮಿಕ ಜಾಗೃತಿಯ ಹೊಸ ಅಲೆಯೊಂದರ ಬೀಸು- ಈ ಯಾವುದಾದರೂ ಒಂದನ್ನು ಅವಲಂಬಿಸಿರಬಹುದು. ಪಾತ್ರೆಯ ಆಕಾರ ಯಾವುದೇ ಇರಲಿ, ಕಾರಣ ಯಾವುದೇ ಇರಲಿ, ಅದೇ ಉನ್ನತ ಉದ್ದೇಶದ ನೆರವೇರಿಕೆಗೆ ಸಾಧನವಾಗುತ್ತದೆ. ಏಕೈಕ ಅಖಂಡ ದಿವ್ಯ ಶಕ್ತಿಯ ಆನಂದವನ್ನು, ಶಕ್ತಿಯನ್ನು, ಪ್ರೇಮವನ್ನು, ಜ್ಞಾನವನ್ನು, ಕಾಂತಿಯನ್ನು ಅರಗಿಸಿಕೊಳ್ಳುವುದೇ ಆ ಉದ್ದೇಶವಾಗಿರುತ್ತದೆ.

ಭಕ್ತಿ ಸೂತ್ರದಲ್ಲಿ ನಾರದರು, ಭಕ್ತನು ಭಗವಂತನಿಗೆ ಶರಣಾಗತನಾಗಿರುವುದರಿಂದ ಅವನಿಗೆ ಯಾವುದೇ ಪ್ರಾಪಂಚಿಕವಾದ ದುಃಖಗಳಿರುವುದಿಲ್ಲ ಎಂದು ಹೇಳುತ್ತಾರೆ. ಬಾಬಾ ಬರೆಯುತ್ತಾರೆ: "ಇದರರ್ಥ ಅವನು ತಣ್ಣಗೆ ಕುಳಿತುಕೊಳ್ಳುತ್ತಾನೆ ಎಂದಲ್ಲ. ಭಕ್ತನಿಗೆ ಮಾನವ ಸೇವೆಯೇ ಮಾಧವಸೇವೆಯಾಗಿರುತ್ತದೆ. ಏಕೆಂದರೆ ಅವನು ಪ್ರತಿಯೊಬ್ಬನಲ್ಲೂ, ಭಗವಂತನನ್ನು ತನ್ನಲ್ಲೂ ಇತರರಲ್ಲೂ ಪ್ರೇರಕನನ್ನಾಗಿ ಕಾಣುತ್ತಾನೆ. ಅವನು ಸತ್ಕಾರ್ಯಗಳಲ್ಲೇ ಸದಾ ಮಗ್ನನಾಗಿರುತ್ತಾನೆ. ಏಕೆಂದರೆ ಅವನ ಮೂಲ ಸ್ವಭಾವವೇ ಹಾಗಿದೆ. ಅವನು ಏನನ್ನೇ ಮಾಡಿದರೂ, ಆಡಿದರೂ, ಆಲೋಚಿಸಿದರೂ ಅದರಿಂದ ಲೋಕ ಸಂಗ್ರಹ (ಮಾನವ ಜನಾಂಗದ ಒಳಿತು) ಸಾಧಿತವಾಗುತ್ತದೆ. ಅವನಿಗೆ ಯಾವುದೇ ಕಳವಳವಾಗಲಿ ನಿರಾಶೆಯಾಗಲಿ ಇರುವುದಿಲ್ಲ. ಏಕೆಂದರೆ, ಅವನ ಪಾಲಿಗೆ ಸಕಲವನ್ನೂ ಒದಗಿಸುವವನು, ನಡೆಸುವವನು, ಸೂಚಿಸುವವನು, ಯೋಜಿಸುವವನು, ನೆರವೇರಿಸಿ ಮುಗಿಸುವವನು ಎಲ್ಲವೂ ಭಗವಂತನೇ."

'ಪ್ರೇಮವಾಹಿನಿ'ಯು ಸನಾತನ ಸಾರಥಿಯಲ್ಲಿ ಧಾರಾವಾಹಿಯಾಗಿ ಹರಿದು ಬರುತ್ತಾ ಒಣಗಿ ಹೋದ ಹೃದಯಗಳಿಗೆ ಹೊಸ ನೀರಿನಂತೆ ತಂಪೆರೆಯುತ್ತಿರುವಾಗಲೇ, ಸಂದೇಹಗಳೆಂಬ ಕಳೆಯನ್ನು ಕಿತ್ತು ಹಸನುಗೊಳಿಸುವ ಸಲುವಾಗಿ ಬಾಬಾ ಇನ್ನೊಂದು ಧಾರವಾಹಿಯನ್ನು ಪ್ರಾರಂಭಿಸಿದರು. ಅವುಗಳನ್ನು ಒಟ್ಟುಗೂಡಿಸಿ ಸಂದೇಹ ನಿವಾರಿಣಿ ಎಂದು ಕರೆಯಲಾಗಿದೆ. ಹತ್ತಿಪ್ಪತ್ತ ಹರಯದಲ್ಲಿದ್ದಾಗಲೇ ಅವರು ತಮ್ಮೆದುರಿಗೆ ಕುಳಿತವರನ್ನು ಆಧ್ಯಾತ್ಮಿಕ ವಿಚಾರಗಳಲ್ಲಿ ಪ್ರಶ್ನೆಗಳನ್ನು ಕೇಳುವಂತೆ ಒತ್ತಾಯಪಡಿಸುತ್ತಿದ್ದರು. ಆದರಿಂದ ಅವರಿಗೆ ಸಂತೋಷವಾಗುತ್ತಿತ್ತು. ಇವೇ ಮಧ್ಯೆ ಮಧ್ಯೆ ಸೇರಿಸಿದ ದೃಷ್ಟಾಂತ ಕತೆಗಳು, ಪದ್ಯಗಳು, ಹಾಡುಗಳು ಇವುಗಳಿಂದ ಕೂಡಿ ಸಣ್ಣ ಅಥವಾ ದೊಡ್ಡ ನಿಬಂಧಗಳಾಗಿ ಪ್ರಶ್ನಿಸಿದವರನ್ನು ಕತ್ತಲಿಂದ ಬೆಳಕಿಗೆ ಒಯ್ಯುತ್ತಿದ್ದುವು.

## ಪ್ರಶ್ನೆಗಳಿಗೆ ಉತ್ತರ

ಚಿತ್ರಾವತಿಯ ನದಿಯ ಮರಳ ಮೇಲೆ ಅಂತಹ ಪ್ರಶ್ನೋತ್ತರ ಗೋಷ್ಠಿಗಳು ಹಲವು ನಡೆಯುತ್ತಿದ್ದುದು ನನಗೆ ನೆನಪಿದೆ. ದಯಾನಂದ ಸಾಗರ್ (ವಕೀಲರು), ವಿಠ್ಠಲ ರಾವ್ (ವೃಕ್ಷ ಪೋಷಕರು), ವಿ. ಹನುಮಂತ ರಾವ್ (ನಾಗರಿಕ ಅಧಿಕಾರಿ) ಮತ್ತು ಇನ್ನೂ ಕೆಲವರು ಉತ್ಸಾಹದಿಂದ ಪ್ರಶ್ನೆ ಕೇಳುತ್ತಿದ್ದರು. ಅನೇಕರು ತಮ್ಮ ಸಂದೇಹಗಳನ್ನು ತಂದು ಬಾಬಾ ಅವರ ಮುಂದೆ ಪರಿಹಾರ ಕೋರಿ ಮಂಡಿಸುತ್ತಿದ್ದರು. ವೆಂಕಟಗಿರಿ, ಯೇರ್ಪೇಡು, ವ್ಯಾಸಾಶ್ರಮ, ತಿರುವಣ್ಣಾಮಲೆ, ಪಾಂಡಿಚೇರಿ, ಕನ್ಹಂಗಾಡು ಮತ್ತು ವಾರ್ಕಲ್ಯೆ ನಾರಾಯಣ ಗುರು ಆಶ್ರಮ - ಹೀಗೆ ಬೇರೆ ಬೇರೆ ಕಡೆಗಳಿಂದ ಪಂಡಿತರು, ಸಾಧಕರು ಬರುತ್ತಿದ್ದರು. ಅಲ್ಲಿಂದ ಅವರು ಶಾಂತಚಿತ್ತರಾಗಿ, ಪರಿಹಾರ ಪಡೆದು ಹಿಂದಿರುಗುತ್ತಿದ್ದರು. ಏಕೆಂದರೆ ಅವರ ಸಮಸ್ಯೆಗಳನ್ನು ಬಾಬಾ ಸ್ಪಷ್ಟವಾಗಿ ವಿಶ್ಲೇಷಿಸುತ್ತಿದ್ದರು; ಆಳವಾದ ಪರಿಶೀಲನೆ, ಆತ್ಮೀಯವಾಗಿ ಸಮಸ್ಯೆಯನ್ನು ಬಿಡಿಸಿ ನೋಡುವಿಕೆ, ಪರಿಣಾಮಕಾರಿ ಚಿಕಿತ್ಸೆಗಳಿಂದ ಜನರಿಗೆ ಸಂತೋಷವಾಗುತ್ತಿತ್ತು. ಒಂದು ದಿನ ವಯಸ್ಸಾದ ಒಬ್ಬ ಸಾಧುವು ಹೃಷೀಕೇಶದಿಂದ ಬಂದು, ವಿನಯದಿಂದ ಕೇಳಿದರು: ಮಾಯೆಯ ಸುಳಿಯಿಂದ ತಪ್ಪಿಸಿಕೊಳ್ಳುವುದು ಹೇಗೆ? ಬಾಬಾ ಉತ್ತರ ಕೊಟ್ಟರು: "ನೀವು ಹುಡುಕಿಕೊಂಡು ಹೋಗುವವರೆಗೂ ಮಾಯೆ ಅಸ್ತಿತ್ವದಲ್ಲೇ ಇಲ್ಲ. ಅದನ್ನು ಹುಡುಕಬೇಡಿ, ಅದು ನಿಮ್ಮ ಮೇಲೆ ಯಾವ ದುಷ್ಪರಿಣಾಮ ಬೀರುವುದಿಲ್ಲ. ಬಾವಿಯಲ್ಲಿ ನಿಮ್ಮ ಮುಖದ ಪ್ರತಿಬಿಂಬ ಇದೆಯೇ ಎಂದು ನೀವು ಇಣಕಿ ನೋಡುವವರೆಗೂ ಅಲ್ಲಿ ಅದು ಇರುವುದೇ ಇಲ್ಲ." ಆ ಸಾಧುವು ಆಮೇಲೆ ನನ್ನ ಬಳಿ ಹೇಳಿಕೊಂಡರು. ಅದುವರೆಗೆ ಯಾರಿಂದಲೂ ಆ ಉತ್ತರವನ್ನು ಅವರು ಪಡೆದಿರಲಿಲ್ಲ. ಅದು ಅನೇಕ ವರ್ಷಗಳಿಂದ ಅವರನ್ನು ಕೊರೆಯುತ್ತಿದ್ದ ಸಮಸ್ಯೆಯನ್ನು ಪರಿಹರಿಸಿಬಿಟ್ಟಿತ್ತು.

'ಸಂದೇಹ ನಿವಾರಿಣಿ'ಯಲ್ಲಿ ಬಾಬಾ ಹೇಳುತ್ತಾರೆ, "ಯಾರಾದರೂ ತನಗೆ ಅರ್ಥವಾಗಿಲ್ಲದ ವಿಷಯ ಕುರಿತು ಕೇಳಿದರೆ ನನಗೆ ಸಂತೋಷವಾಗುತ್ತದೆ. ಕೇಳುವುದು ನಿನ್ನ ಹಕ್ಕು" ಮುಂದುವರಿದು ಶಿಷ್ಯನಿಗೆ ಹೇಳುತ್ತಾರೆ. "ಆದರೆ ನಾನು ಕೊಟ್ಟ ಉತ್ತರಗಳನ್ನು ಮತ್ತೆ ಮತ್ತೆ ಮನನ ಮಾಡುತ್ತಿದ್ದೀಯೋ? ನಿನಗೆ ಹೇಳಿದ್ದನ್ನು ಶ್ರದ್ಧಾ ಜನ್ಯ ನಂಬಿಕೆಯಿಂದ ಆಚರಣೆಯಲ್ಲಿ ತೋರಿಸುತ್ತಿದ್ದೀಯೋ? ಅದು

ಮುಖ್ಯ... ನಾನಿಲ್ಲಿರುವುದಾದರೂ ಏತಕ್ಕೆ? ಯಾವುದೇ ಅಳುಕಿಲ್ಲದೆ, ಹೆದರಿಕೆಯಿಲ್ಲದೆ ನನ್ನನ್ನು ಕೇಳು, ಉತ್ತರ ಕೊಡಲು ಸದಾ ಸಿದ್ಧನಾಗಿದ್ದೇನೆ. ಒಂದು ವಿಷಯ, ನಿನ್ನ ಪ್ರಶ್ನೆ ಪ್ರಾಮಾಣಿಕವಾಗಿರಬೇಕು, ತಿಳಿದುಕೊಳ್ಳಬೇಕೆಂಬ ನೈಜವಾದ ಹಂಬಲದಿಂದ, ಯಾವುದು ಒಳ್ಳೆಯದೋ ಅದನ್ನು ಆಚರಿಸಬೇಕೆಂಬ ಆಸೆಯಿಂದ ಮೂಡಿರಬೇಕು."

ಈಗ ಒಂದು ಅಂಶವನ್ನು ಇಲ್ಲಿ ಹೇಳಬಹುದು. 'ಸಂದೇಹ ನಿವಾರಿಣಿ'ಯ ಪ್ರತಿಯೊಂದು ಅಧ್ಯಾಯದಲ್ಲೂ ವೈಯಕ್ತಿಕವಾದ, ತಾತ್ವಿಕವಾದ, ಧಾರ್ಮಿಕವಾದ ಬಗೆ ಬಗೆಯ ಪ್ರಶ್ನೆಗಳನ್ನು ಹೊತ್ತು ತರುವ 'ಭಕ್ತ' ಕೂಡ ಆ ದಿವ್ಯ ಲೇಖನಿಯ ಸೃಷ್ಟಿಯೇ. ಈ ಪಾತ್ರದ ಮೂಲಕ ಸಂಶಯಾತ್ಮರ ಕಡೆಗೆ ತಾವು ಹೊಂದಿರುವ ಅಪಾರ ಸಹಾನುಭೂತಿಯನ್ನು ಪ್ರೇಮವನ್ನೂ ಬಾಬಾ ಪ್ರಕಟಿಸುತ್ತಾರೆ. ಅವರೇ ಸಮಸ್ಯೆಗಳನ್ನು ಮುಂದಿಟ್ಟು ಉತ್ತರಗಳನ್ನು ನೀಡುತ್ತಾರೆ. "ಭಕ್ತ! ನೀನು ನನ್ನೆದುರಿಗೆ ಇರಿಸಿರುವ ಪ್ರತಿಯೊಂದು ವಿಚಾರವನ್ನು ಕುರಿತೂ ನಿನ್ನೊಂದಿಗೆ ಮಾತನಾಡುತ್ತೇನೆ. ಇದರಿಂದ ಅನೇಕಾನೇಕ ಜನರು ಈ ಸಂಭಾಷಣೆಯಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದೀಯೆ. ಸೂರ್ಯನ ಬೆಳಕು ಕನ್ನಡಿಯ ಮೇಲೆ ಬೀಳುತ್ತದೆ, ಕನ್ನಡಿಯಿಂದ ಮನೆಯ ಗೋಡೆಯ ಮೇಲೆ, ಅಲ್ಲಿಂದ ಕಣ್ಣುಗಳ ಮೇಲೆ ಬೀಳುತ್ತದೆ. ಹಾಗೆಯೇ ನನ್ನ ಬೋಧನೆಯ ಬೆಳಕು ನಿನ್ನ ಮೇಲೆ ಬಿದ್ದು ಅಲ್ಲಿಂದ ಸನಾತನ ಸಾರಥಿಯ ಪುಟಗಳಿಗೆ ಹಾಯಬೇಕು, ಅಲ್ಲಿಂದ ಆ ಬೆಳಕು ಜಗತ್ತನ್ನು ಬೆಳಗಿ ಮಾನವ ಹೃದಯಗಳಿಗೆ ಶಾಂತಿ ಸಾಮರಸ್ಯಗಳನ್ನು ತರಬೇಕು ಎನ್ನುವುದು 'ಸಂದೇಹ ನಿವಾರಿಣಿ'ಯ ಯೋಜನೆಯಾಗಿದೆ."

## ಧರ್ಮವೇ ಆಶ್ರಯ

ಸನಾತನ ಸಾರಥಿಯಲ್ಲಿ ಮುಂದೆ ಧಾರಾವಾಹಿಯಾಗಿ ಬಂದ ಪುಸ್ತಕ 'ಧರ್ಮವಾಹಿನಿ'. ಬಾಬಾ ಹೇಳುತ್ತಾರೆ: "ಧರ್ಮ ಸರಸ್ವತೀ ನದಿಯಿದ್ದ ಹಾಗೆ. ಮಾನವ ಪ್ರಜ್ಞೆಯ ಅಂತರಾಳದಲ್ಲಿ ಹರಿಯುತ್ತಿದ್ದು ಅವನ ಎಲ್ಲ ಚಟುವಟಿಕೆಗಳ ಬೇರಿಗೆ ನೀರುಣಿಸಿ, ಅವನ ಚಿಂತನೆಯ ಚಿಲುಮೆಗಳನ್ನು ಚಿಮ್ಮಿಸಿ, ಭಾವನೆಯ ಕೆಸರುಗಳನ್ನು ಸ್ವಚ್ಛಗೊಳಿಸುತ್ತದೆ. ಈ ನದಿಯು ಒಣಗಿ ಹೋದಾಗ, ಅಥವಾ ಲೋಭ ಮತ್ಸರಗಳು ತುಂಬಿಕೊಂಡು ಮುಂದೆ ಹರಿಯದೆ ನಿಲ್ಲುವ ಸ್ಥಿತಿ ಬಂದಾಗ ಅವತಾರ ಪುರುಷನು ಬಂದು ಕೃಪೆಯ ಪ್ರವಾಹವನ್ನು ಹರಿಸಿ ನದಿಯು ಹೊಚ್ಚ ಹೊಸತಾಗಿ, ಅನಿರ್ಬಂಧಿತವಾಗಿ ಹರಿಯುವಂತೆ ಮಾಡುತ್ತಾನೆ."

ಧರ್ಮವೇ ಒಳ್ಳೆಯ ಜೀವನದ ಮೂಲ ಆಧಾರ ಎಂದು ಬುದ್ಧನು ಘೋಷಿಸಿದನು. ಜೀವನದಲ್ಲಿ ಸದಾ ಬೆನ್ನು ಹತ್ತುವ ನೋವು, ಸಂಕಟಗಳನ್ನು ನಿವಾರಿಸಿಕೊಳ್ಳಲು ಧರ್ಮದ ನಿಯಮಗಳಿಗೆ ಪ್ರತಿಯೊಬ್ಬನೂ ಬದ್ಧನಾಗಬೇಕು. ಚಕ್ರವರ್ತಿ ಅಶೋಕನು ತನ್ನ ಸಾಮ್ರಾಜ್ಯದ ಪ್ರತಿಯೊಂದು ಕಾನೂನನ್ನೂ ಧರ್ಮದಿಂದ ಸಿಹಿಗೊಳಿಸಿದನು. ತನ್ನ ಶಾಸನಗಳನ್ನು ಬಂಡೆಗಳ ಮೇಲೆ, ಸ್ತಂಭಗಳ ಮೇಲೆ ಕೆತ್ತಿಸಿದನು. "ಇದುವರೆಗೆ ನನ್ನ ಹಿರಿಯರು ಮತ್ತು ನನ್ನ ಕುಟುಂಬದ ಜನರು ವಿಜಯಯಾತ್ರೆ ಹೋಗುತ್ತಿದ್ದರು; ಇಲ್ಲಿಂದ ಮುಂದಕ್ಕೆ ನಾನು ಧರ್ಮಯಾತ್ರೆ ಹೋಗುವುದನ್ನು ಮಾತ್ರ ವಿಧಿಸುತ್ತೇನೆ;

ಇದುವರೆಗೆ ಅವರು ದಾನ (ಸಾಮಾನ್ಯವಾಗಿ ಹಣದ ರೂಪದಲ್ಲಿ) ಕೊಡುತ್ತಿದ್ದರು, ಇನ್ನು ಮುಂದೆ ಅವರು ಧರ್ಮದಾನವನ್ನು ನೀಡಲಿ (ಧರ್ಮದ ತಿಳಿವಳಿಕೆಯನ್ನು ದಾನವಾಗಿ); ಇದುವರೆಗೆ ಅವರು ದಿಗ್ವಿಜಯ ನಡೆಸುತ್ತಿದ್ದರು (ಸಾಮ್ರಾಜ್ಯಗಳ ವಿಜಯ), ಇಲ್ಲಿಂದ ಮುಂದಕ್ಕೆ ಅವರು ಧರ್ಮ ವಿಜಯ ನಡೆಸಿ ಸಂತೋಷ ಪಡಲಿ ಎಂದು ಆದೇಶಿಸುತ್ತೇನೆ." ಧರ್ಮವು ಪೋಷಿಸುತ್ತದೆ, ಬಲಪಡಿಸುತ್ತದೆ ಮತ್ತು ರಕ್ಷಿಸುತ್ತದೆ ಎಂಬುದು ಅಶೋಕನಿಗೆ ತಿಳಿದಿತ್ತು.

"ಮನುಷ್ಯನು ಧರ್ಮದ ದಾರಿಯನ್ನು ಏಕೆ ಹಿಡಿಯಬೇಕು?" ಎಂದು ಪ್ರಶ್ನಿಸಿದ ಷೋಪೆನ್ ಹಾವರ್ ತಾನೇ ಉತ್ತರವನ್ನೂ ಕೊಟ್ಟುಕೊಂಡನು: "ನೀತಿಯನ್ನು ಬೋಧಿಸುವುದು ಸುಲಭ; ನೀತಿಯ ನೆಲೆಗಟ್ಟು ಹಾಕುವುದು ಸುಲಭವಲ್ಲ" ಹಿಂದೆ ಸಜ್ಜನರನ್ನು ಪುರಸ್ಕರಿಸಿ ದುರ್ಜನರನ್ನು ಶಿಕ್ಷಿಸುವ ಭಗವಂತನ ಮೇಲೆ ಶ್ರದ್ಧೆ, ನಂಬಿಕೆ ಧರ್ಮದ ಭದ್ರ ತಳಹದಿಯಾಗಿದ್ದಿತು. ಆದರೆ ಸೆಕ್ಯೂಲರಿಸಂ ಈ ನಂಬಿಕೆಯನ್ನು ಹಾಳುಮಾಡಿದೆ. ಬಾಬಾ 'ಧರ್ಮ ವಾಹಿನಿ'ಯಲ್ಲಿ ಈ ಧರ್ಮವನ್ನು ಸಮಸ್ತ ಸೃಷ್ಟಿಯೂ ಒಂದೇ ಎಂಬ ಭದ್ರವಾದ ನೆಲೆಗಟ್ಟಿನ ಮೇಲೆ ನಿಲ್ಲಿಸಿದ್ದಾರೆ. "ಯಾರು ಅಹಂಕಾರವನ್ನು ಗೆದ್ದಿರುತ್ತಾರೆಯೋ, ದೇಹವನ್ನೂ ಅದರ ಸಾಧನ ಸಲಕರಣೆಗಳನ್ನೂ ತನ್ನ ನಿಜವಾದ ಆತ್ಮವೆಂದು ತಪ್ಪಾಗಿ ಭ್ರಮಿಸುವುದನ್ನು ಯಾರು ಗೆಲ್ಲುತ್ತಾರೆಯೋ ಅವನು ನಿಜವಾದ ಧರ್ಮದ ಪಥದಲ್ಲಿ ಇರುತ್ತಾನೆ ಎಂದು ಹೇಳಬಹುದು. ಏಕೆಂದರೆ ಬಹು ಬೇಗನೆ ಈ ಚಂಚಲ ವಿವಿಧತೆಯ ಹಿಂದಿರುವ ಏಕಸತ್ಯವನ್ನು ಅವನು ಕಂಡುಕೊಳ್ಳುತ್ತಾನೆ. ಈ ವಸ್ತು ನಿಷ್ಠ ಜಗತ್ತು ಎನ್ನುವುದು ಏಕೈಕವೂ ಏಕಮಾತ್ರ ಸತ್ಯವೂ ಆದ ಬ್ರಹ್ಮದ ಮೇಲೆ ಹೊದಿಸಿದ ರತ್ನಖಚಿತವಾದ ಮುಸುಕು. 'ಸರ್ವಂ ಖಲು ಇದಂ ಬ್ರಹ್ಮ' (ಇದೆಲ್ಲವೂ ನಿಜವಾಗಿ ಬ್ರಹ್ಮ) ಮನುಷ್ಯನಿಗೆ ಈ ಸತ್ಯ ಮನವರಿಕೆಯಾದಾಗ "ಇನ್ನೊಂದು" ಎನ್ನುವುದಿರುವುದೇ ಇಲ್ಲ: ಎಲ್ಲವೂ 'ನೀನು'. ನೀನು ಅತ್ಯಂತ ಹೆಚ್ಚಾಗಿ ನಿನ್ನನ್ನೇ ಪ್ರೀತಿಸಿ ಕೊಳ್ಳುವೆಯಾದ್ದರಿಂದ ಚೇತನಾಚೇತನಾಗಳೆಲ್ಲವನ್ನೂ ಆವರಿಸಿಕೊಳ್ಳುತ್ತದೆ. "1855ರಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷರಿಗೆ ಒಬ್ಬ ರೆಡ್ ಇಂಡಿಯನ್ ಪತ್ರ ಬರೆದಂತೆ, "ಈ ಭೂಮಿಯ ಪ್ರತಿಯೊಂದು ಭಾಗವೂ ನನ್ನ ಜನರಿಗೆ ಪವಿತ್ರವಾದದ್ದೇ ಆಗಿದೆ- ಥಳಥಳಿಸುವ ಪೈನ್ ಎಲೆಯ ಒಂದೊಂದು ದಳವೂ, ಪ್ರತಿಯೊಂದು ಮರಳದಂಡೆಯೂ, ಕಾಡಿನ ಪ್ರತಿಯೊಂದು ಹಿಮಬಿಂದುವೂ ಪ್ರತಿಯೊಂದು ತೋಟವೂ, ಗುಯ್‌ಗುಡುವ ಕೀಟವೂ ನನ್ನ ಜನರ ಸ್ಮರಣೆಯಲ್ಲಿ ಮತ್ತು ಅನುಭವದಲ್ಲಿ ಪವಿತ್ರವಾಗಿರುತ್ತವೆ."

ಈ ಆಳವಾದ ತಿಳುವಳಿಕೆಯ ಆಧಾರದ ಮೇಲೆ ಧರ್ಮವನ್ನು ಕಟ್ಟಬೇಕು. "ಆತ್ಮದ ಅಡಿಪಾಯದ ಮೇಲೆ ನಿಮ್ಮ ಬದುಕಿನ ಕಟ್ಟಡವನ್ನು ಕಟ್ಟಿರಿ. ಆನಂದದ ಸಾಗರದ ಮೇಲಿನ ಒಂದು ಅಲೆ, ವಿಶ್ವ ಪ್ರಜ್ಞೆಯ ಒಂದು ಕಿಡಿ ಎಂಬ ನಂಬಿಕೆ ಆ ಆಧಾರವಾಗುತ್ತದೆ." ಮುಂದುವರಿದು ಅವರು ಕೇಳುತ್ತಾರೆ: ಒಂದು ವಿಗ್ರಹವನ್ನು ಪೂಜಿಸುವಾಗ ನೀವು ವಾಸ್ತವವಾಗಿ ಏನು ಮಾಡುತ್ತೀರಿ? ಮೊದಲು ಭಗವಂತನ ಒಂದು ರೂಪವು ನಿಮ್ಮ ಮನಸ್ಸಿನ ಮೇಲೆ ಮುದ್ರೆಯೊತ್ತಿರುತ್ತದೆ. ಆ ಮೇಲೆ ಅವನ ಶಕ್ತಿ, ಅವನ ಕರುಣೆ, ಅವನ ಸರ್ವವ್ಯಾಪಿತ್ವ ಮೊದಲಾದ ಅಂಶಗಳನ್ನು ಧ್ಯಾನಿಸಿ ಈ ಗುಣಗಳನ್ನು

ತ್ರಿ ವಿಗ್ರಹಕ್ಕೆ ಆರೋಪಿಸುತ್ತೀರಿ. ಇದರಿಂದ ನಿಮ್ಮ ಪ್ರಜ್ಞೆಯು ಆ ವಿಗ್ರಹಕ್ಕಿಂತಲೂ ಮೇಲಕ್ಕೇರಿ ಎದುರಿಗಿರುವ ಶಿಲಾ ವಿಗ್ರಹ ಅರಿವಿಗೆ ಬಾರದಂತೆ ಆಗುತ್ತದೆ. ಅದೇ ರೀತಿಯಲ್ಲಿ ನಿಮಗೆ ಅತಿ ಹೆಚ್ಚು ಆನಂದ ಕೊಡುವ ಭಗದವದ್ರೂಪವನ್ನು ನಿಮ್ಮ ಪ್ರಜ್ಞೆಯ ಮೇಲೆ ಅಚ್ಚೊತ್ತಿಕೊಂಡು ಅದನ್ನು ಪ್ರತಿಯೊಬ್ಬ ಮನುಷ್ಯ, ಪ್ರತಿಯೊಂದು ಪಕ್ಷಿ, ಪ್ರಾಣಿ, ಕೀಟ, ಸಸ್ಯ, ಕಲ್ಲು- ಎಲ್ಲದರ ಮೇಲೂ ಹಾಯಿಸಿ. ಈ ಸಾಧನೆ ನಿಮ್ಮನ್ನು ಸತ್ಯ, ಶಿವ ಮತ್ತು ಸುಂದರರನ್ನಾಗಿ ಮಾಡುತ್ತದೆ."

ಇದೇ ಮೂಲ ಆಧಾರ: ಆತ್ಮ ಪ್ರಜ್ಞೆ, ಏಕವು ಅನೇಕವಾಗಿ ಕಾಣಿಸುತ್ತದೆ ಎಂಬ ಸತ್ಯವನ್ನು ಸದಾ ಸ್ಮರಣೆಯಲ್ಲಿ ಇಟ್ಟುಕೊಂಡಿರುವುದು. 'ನಾನು- ಕನ್ನಡಕ'ವನ್ನು ಹಾಕಿಕೊಂಡಿರುವವರು ಪದೇ ಪದೇ ಕೇಳುವ, 'ನಾನು ನನ್ನ ಸೋದರನ ಪಾಲಕನೆ?' ಎಂಬ ಪ್ರಶ್ನೆಗೆ ಉತ್ತರವಾಗಿ ಬಾಬಾ ಹೇಳುತ್ತಾರೆ: "ನೀವೇ ನಿಮ್ಮ ಸೋದರ; ಅವನ ಆರೋಗ್ಯವೇ ನಿಮ್ಮ ಆರೋಗ್ಯ. ನಿಮ್ಮ ಪವಿತ್ರತೆ ಅವನದೂ. ಏನೂ ವ್ಯತ್ಯಾಸವಿಲ್ಲ. ನೀವು ಈಜಿದರೆ ಅವನೂ ಈಜುತ್ತಾನೆ; ನೀವು ಮುಳುಗಿದರೆ ಅವನೂ ಮುಳುಗುತ್ತಾನೆ."

## ಶಕ್ತಿಯ ಮೂಲ

ಜ್ಞಾನವೇ ಶಕ್ತಿ ಎಂಬ ಮಾತನ್ನು ಬಾಬಾ ಒಪ್ಪುವುದಿಲ್ಲ. ಏಕೆಂದರೆ ಅಹಂಕಾರವನ್ನು, ಸ್ಪರ್ಧೆ, ಘರ್ಷಣೆಗಳನ್ನು ಉಂಟು ಮಾಡಬಹುದು. ಅದಕ್ಕೆ ಬದಲು ಅವರು ಯಾವಾಗಲೂ ಒತ್ತಿ ಹೇಳುವ ಮಾತು 'ಶೀಲವೇ ಶಕ್ತಿ' ಎಂದು. ಶೀಲದ ಆಧಾರವನ್ನು ವಿಸ್ತರಿಸುತ್ತಾ ಅವರು ಭಗವದ್ಗೀತೆಯನ್ನು ಉದ್ಧರಿಸುತ್ತಾರೆ (ಅಧ್ಯಾಯ 12, ಶ್ಲೋಕ 13-19) "ಶೀಲ ಶುದ್ಧಿಯುಳ್ಳವನು ಯಾರನ್ನೂ ದ್ವೇಷಿಸುವುದಿಲ್ಲ, ದಯೆ ಕರುಣೆಗಳನ್ನು ಹೊಂದಿರುತ್ತಾನೆ, ಅಹಂಕಾರ ರಹಿತನಾಗಿರುತ್ತಾನೆ, ಸುಖವನ್ನೂ ದುಃಖವನ್ನೂ ಸಮಾನ ಮನೋಧರ್ಮದಿಂದ ಸ್ವೀಕರಿಸುತ್ತಾನೆ, ಸಹಿಷ್ಣುವಾಗಿರುತ್ತಾನೆ, ಸದಾ ತೃಪ್ತನಾಗಿರುತ್ತಾನೆ, ಸಂಯಮಿಯಾಗಿರುತ್ತಾನೆ, ವಿಶ್ವದ ಐಕ್ಯತೆಯ ಬಗ್ಗೆ ಸ್ಥಿರವಾದ ನಂಬಿಕೆಯುಳ್ಳವನಾಗಿರುತ್ತಾನೆ. ಅವನಿಗೆ ಜಗತ್ತಿನಿಂದ ಯಾವುದೇ ತೊಂದರೆಯ ಭಾವನೆಯಿಲ್ಲ. ಅವನೂ ಯಾವುದೇ ರೀತಿಯಲ್ಲೂ ಜಗತ್ತಿಗೆ ತೊಂದರೆ ಉಂಟು ಮಾಡುವುದಿಲ್ಲ. ಕೋಪ, ಭೀತಿ, ಕಾತರ, ಕಳವಳಗಳ ಕುರುಹು ಕೂಡ ಅವನಲ್ಲಿಲ್ಲ. ಅಥವಾ ಮಾತ್ಸರ್ಯ ಸೇಡುಗಳ ಸರಪಣಿಯಿಂದ ಬಂಧಿತನೂ ಅಲ್ಲ. ಅವನು ಯಾವುದಕ್ಕೂ ಹಲ್ಲುಕಿರಿದು ಹಂಬಲಿಸುವುದಿಲ್ಲ, ಅಥವಾ ಹಲುಬಿ ದುಃಖಿಸುವುದಿಲ್ಲ, ಶೀತೋಷ್ಣಗಳಂತೆ ಎಲ್ಲ ದ್ವಂದ್ವಗಳನ್ನು ಸಮಾನವಾಗಿ ಸ್ವಾಗತಿಸುತ್ತಾ ಒಳ್ಳೆಯದನ್ನೂ ಕೆಟ್ಟದ್ದನ್ನೂ ಅಲಿಪ್ತನಾಗಿ ದಾಟುತ್ತಾನೆ. ಅದೃಷ್ಟ ತನಗೆ ಏನು ತಂದಿದೆಯೋ ಅದರಲ್ಲಿ, ಅದು ಒಳಿತಾಗಲಿ, ಕೆಡುಕಾಗಲಿ, ತೃಪ್ತನಾಗಿರುತ್ತಾನೆ. ಅವನು ಬಿಟ್ಟು ಹೋಗಲಾರೆನೆಂದು ಹೇಳುವ ಯಾವ ಮನೆಯೂ ಇಲ್ಲ."

ಸೇವೆಗೆ ಎರಡು ಅಮೂಲ್ಯ ಪರಿಣಾಮಗಳಿವೆ: ಅಹಂಕಾರ ನಾಶ ಮತ್ತು ಬಾಂಧವ್ಯಾನುಭವ. ಒಂದು ಹೃದಯವು ಇನ್ನೊಂದನ್ನು ಆತ್ಮೀಯವಾಗಿ ಸಂಧಿಸದೆ ಹೋದರೆ ಅಂತಹ ದಾನ ಕೂಡ ಕ್ರೌರ್ಯವೇಯೆ ಎನ್ನುತ್ತಾರೆ ಬಾಬಾ. ಪ್ರತಿಯೊಂದು ಸೇವಾ ಕಾರ್ಯವನ್ನೂ ಪ್ರೇಮದ ಪರಿಮಳವೂ,

ಪ್ರಾಮಾಣಿಕತೆಯ ಮಾಧುರ್ಯವೂ ಪಾವನಗೊಳಿಸಬೇಕು. 'ಪ್ರಶಾಂತಿ ವಾಹಿನಿ'ಯಲ್ಲಿ ಬಾಬಾ ಹೇಗೆ ಧರ್ಮವು ಸಂಸಾರದ ಹೊರೆಯನ್ನು ಹಗುರಗೊಳಿಸಬಲ್ಲುದು, ಹೇಗೆ ಧರ್ಮಯುತ ಬಾಂಧವ್ಯಗಳ ಮೂಲಕ ಸಾಮಾಜಿಕ ಜೀವನವು ಹೆಚ್ಚು ಆರೋಗ್ಯಕರವೂ ಸಂತೋಷಕರವೂ ಆಗಬಲ್ಲುದು ಎಂಬುದನ್ನು ಬೋಧಿಸುತ್ತಾರೆ. ಧರ್ಮವು ಪ್ರವರ್ತಿತವಾದರೆ ಒಡೆಯರು- ಸೇವಕರು, ಹಿರಿಯರು- ಕಿರಿಯರು; ಗುರುಗಳು- ಶಿಷ್ಯರು ಎಲ್ಲರೂ ಪ್ರಯೋಜನ ಪಡೆಯುತ್ತಾರೆ.

ಆದರೆ ಧರ್ಮದ ಪ್ರಾಚೀನ ವಿದ್ಯಾಲಯಗಳು ಇಂದು ಲೋಭ, ಮಾತ್ಸರ್ಯಗಳ ಕೇಂದ್ರಗಳಾಗಿವೆ. "ಮನೋಹರವಾದ ತೋಟಗಳು, ಗದ್ದೆಗಳು ದಾರಿಯನ್ನೇ, ಕಾಣಲಾಗದ ಮುಳ್ಳಿಡಿದ ಕಾಡುಗಳಾಗಿವೆ" ಎನ್ನುತ್ತಾರೆ ಬಾಬಾ. ಹೇಗೆ ತಂದೆ ತಾಯಂದಿರು ಈ ನೆಲದ ಸಂಸ್ಕೃತಿಯನ್ನು ರಕ್ಷಿಸಿ ಬೆಳೆಸಬಹುದು, ಧರ್ಮವನ್ನು ಮಲಿನಗೊಳ್ಳದಂತೆ ಹೇಗೆ ಕಾಪಾಡಬಹುದು ಎಂದು ವಿಸ್ತಾರವಾಗಿ ಅವರು ನಿರೂಪಿಸುತ್ತಾರೆ. ಹಳ್ಳಿಯ ದೇವಸ್ಥಾನವನ್ನು ಧರ್ಮದ ಜಲಾಶಯವನ್ನಾಗಿ ಪುನರುಜ್ಜೀವನಗೊಳಿಸಬೇಕೆಂದು ಬಾಬಾ ಮನವಿ ಮಾಡಿಕೊಳ್ಳುತ್ತಾರೆ. "ಅದು, ಪ್ರಾಚೀನರು ಹೇಳಿದ ದಾರಿಯಲ್ಲಿ ಕಾರ್ಯೋನ್ಮುಖವಾದರೆ, ಸಮಾಜ ದೇಹದ ಪ್ರತಿಯೊಂದು ನರ ನಾಡಿಗಳಲ್ಲೂ ಹೊಸ ಚೈತನ್ಯ, ಹೊಸ ಪವಿತ್ರತೆಯನ್ನು ಹರಿಸುತ್ತದೆ."

## ಪ್ರಶಾಂತಿ

ಬಾಬಾ ಕೆಲವೊಮ್ಮೆ ವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಕೊಡುವ ಹೆಸರುಗಳ ಮಹತ್ವವನ್ನು ಕುರಿತು ಸ್ವಲ್ಪ ಆಲೋಚನೆ ಮಾಡಿದರೆ ಆದರಿಂದ ತುಂಬ ಪ್ರಯೋಜನವಿದೆ. 1948-50 ರಲ್ಲಿ ಪುಟ್ಟಪರ್ತಿಯಲ್ಲಿ ಕಟ್ಟಿದ ಅವರ ನೂತನ ನಿವಾಸಸ್ಥಾನವನ್ನು ಪ್ರಶಾಂತಿ ನಿಲಯ (ಪರಮ ಶಾಂತಿಯ ನೆಲೆ) ಎಂದು ಕರೆದಿದ್ದಾರೆ. ಪ್ರತಿಯೊಂದು ಜೀವಿಯೂ ಒಂದಿಲ್ಲ ಒಂದು ಸಮಯದಲ್ಲಿ, ಒಂದಿಲ್ಲೊಂದು ಕಡೆ ಅದನ್ನು ಗಳಿಸಬೇಕು ಭಗವಂತನ ನಿರ್ದೇಶನದಲ್ಲಿ, ಕೃಪೆಯ ಬಲದಿಂದ ಅದನ್ನು ತಾನೇ ಕಟ್ಟಿಕೊಳ್ಳಬೇಕು. ಈ ಯುಗದ ಮಾನವವಾದಿಗಳಿಗೂ, ಶಿಕ್ಷಣಾಸಕ್ತರಿಗೂ ಬಾಬಾ ಎಚ್ಚರ ಕೊಡುತ್ತಾರೆ ಇಂದು ಜನರು ದುರಾಶೆಯ ಪೂರೈಕೆಗೆ ಅಗತ್ಯವಾದ ಸಣ್ಣಪುಟ್ಟ ವಸ್ತುಗಳಿಗಾಗಿ ಹಂಬಲಿಸುತ್ತಿಲ್ಲ; ಬದಲು ಭಗವದೈಭವಕ್ಕಾಗಿ, ಭೂಮಿಯ ಮೇಲೆ ಶಾಂತಿ ಸ್ಥಾಪನೆಗಾಗಿ, ಮಾನವರ ನಡುವೆ ಸೌಹೃದಕ್ಕಾಗಿ ಹಂಬಲಿಸುತ್ತಿದ್ದಾರೆ. ಅಬ್ಬರಿಸುವ ಉದ್ವೇಗಕ್ಕಿಂತ ಅವರಿಗೆ ಬೇಕಾಗಿರುವುದು ಶಾಂತವಾದ ತೃಪ್ತಿ, ಸಮಾಧಾನ, ಡಬ್ಲ್ಯು. ಎಂ. ಡಿಕ್ಸನ್, ಗಿಫರ್ಡ್ ಭಾಷಣಗಳನ್ನು ನೀಡುತ್ತಾ ಈಡನ್ನಿನ ನವನಂದನದಲ್ಲಿ ಒಳ್ಳೆಯ ರಸ್ತೆಗಳು, ನೀರಿನ ಸರಬರಾಜು, ಕೊನೆಯೇ ಇಲ್ಲದಷ್ಟು ಚಿತ್ರಮಂದಿರಗಳು, ಸ್ವಚ್ಛವಾದ ತಂಪು ಪಾನೀಯಗಳು, ಅತ್ಯುತ್ತಮ ಒಳಚರಂಡಿ ವ್ಯವಸ್ಥೆ, ಉತ್ತಮ ಶಾಲೆಗಳು, ನಿಸ್ತಂತು ವ್ಯವಸ್ಥೆಗಳು, ಉಚಿತವಾದ ರಂಗ ಕಾರ್ಯಕ್ರಮಗಳು, ಉಪನ್ಯಾಸಗಳು ಇತ್ಯಾದಿ. ದೂರದಿಗಂತವಾಗಲಿ, ಪೂರೈಸಲಾಗದ ಆಸೆಯಾಗಲಿ ಅಲ್ಲಿರುವುದಿಲ್ಲ. ಜನನ ಮರಣಗಳ ವಿಚಾರವನ್ನಾಗಲಿ, ಅನಂತ ವಸ್ತುವನ್ನು ಕುರಿತಾಗಲಿ ನಾವು ಯೋಚನೆ ಮಾಡುವುದನ್ನು ನಿಲ್ಲಿಸಿಬಿಡುತ್ತೇವೆ. ದೇವರ ವಿಷಯವೂ ಬೇಕಿಲ್ಲ, ವಿಶ್ವದ ಅದ್ಭುತ ಭವ್ಯ ವ್ಯವಸ್ಥೆಯ ವಿಚಾರವೂ

ಬೇಕಿಲ್ಲ. ಆರು ಕಾಸಿನ ಈ ಆದರ್ಶ ರಾಜ್ಯಗಳು, ಪವರ್‌ಹೌಸ್‌ಗಳು, ಕಾರ್ಖಾನೆಗಳು ಇವಕ್ಕೆ ಪಂಚವಾರ್ಷಿಕ ಯೋಜನೆಗಳನ್ನು ಹಾಕುವವರು, ಸಾಂಪ್ರದಾಯಿಕ ಮೌಲ್ಯಗಳ ಸವಕಳಿ, ಅದರ ಫಲವಾಗಿ ಸಣ್ಣತನ, ಅಲ್ಪ ಪ್ರಯೋಜನ ಇವುಗಳ ಶೇಖರಣೆ- ಈ ಅನಿವಾರ್ಯ ವಿಪತ್ತನ್ನು ತಡೆಯಲು ಸೂಕ್ತ ಯೋಜನೆಗಳನ್ನು ಹಾಕಬೇಕು ಎಂದು ಬಾಬಾ ಒತ್ತಾಯಿಸುತ್ತಾರೆ. ದಿಢೀರನೆ ಬಂದ ಸಂಪತ್ತಿನಿಂದ ಮತ್ತರಾದವರಿಗೆ, ಮೌಲ್ಯಗಳ ನಾಶದಿಂದ ಎದೆಗುಂದಿದವರಿಗೆ, ಧೈರ್ಯವನ್ನು ಸಮಸ್ಥಿತಿಯನ್ನು ತುಂಬಲು ಪ್ರಶಾಂತಿ ಮತ್ತು ಪ್ರೇಮ ಅತ್ಯಗತ್ಯವಾಗಿದೆ.

ಬಾಬಾ ಅವರ 'ಪ್ರಶಾಂತಿ ವಾಹಿನಿ' ಕೃತಿಯು ಅರಿವಿಗೆ ನಿಲುಕದೆ, ತರ್ಕಕ್ಕೆ ಬಗ್ಗದೆ ಹೋಗುವ ಪ್ರಶಾಂತಿಯ ಭಂಡಾರಕ್ಕೆ ಕೀಲಿ ಕೈ ಒದಗಿಸುತ್ತದೆ. ಭಗವದ್ಗೀತೆಯು ಮಾನವನ ಸಮಸ್ತ ಸಾಧನೆಯ ಗುರಿ ಎಂದು ಹೇಳುವುದು ಇದನ್ನೇ. 'ಶಾಂತಿ'ಗೆ 'ಪ್ರ' ಎನ್ನುವುದು ಉಪಸರ್ಗ. ಲೋಭ, ಮಾತ್ಸರ್ಯ ಅಥವಾ ಕ್ರೋಧ ಇವುಗಳಿಂದ ಮಲಿನಗೊಳ್ಳದ ಶಾಂತಿ. ಅದು ಪ್ರತಿಕೂಲ ಪರಿಸ್ಥಿತಿಯಲ್ಲಿ ಕುಂಠಿತಗೊಳ್ಳುವುದಿಲ್ಲ, ಅನುಕೂಲ ಪರಿಸ್ಥಿತಿಯಲ್ಲಿ ದ್ವಿಗುಣಗೊಳ್ಳುವುದಿಲ್ಲ. ನಮಗೆ ಪ್ರಶಾಂತಿಯು ಲಭ್ಯವಾಗಬೇಕಾದರೆ ವಿವೇಕ, ವೈರಾಗ್ಯ, ವಿಚಕ್ಷಣೆ ಎಂಬ ಮೂರು ಗುಣಗಳನ್ನು ಬೆಳೆಸಿಕೊಳ್ಳಬೇಕು ಎಂದು ಬಾಬಾ ಹೇಳುತ್ತಾರೆ. ಈ ಮೂರು ಗುಣಗಳನ್ನು ಕಲಿಸುವ ಪಠ್ಯಪುಸ್ತಕವಾಗಿ ಶಂಕರರ ವಿವೇಕ ಚೂಡಾಮಣಿ ಕೃತಿಯನ್ನು ವಿಧಿಸುತ್ತಾರೆ. ಮಕ್ಕಳು ಆಟವಾಡುವಾಗ ಮಾಡುವಂತೆ ನೀವು ಕೆಲವರನ್ನು ಆನೆಗಳು ಎಂದೂ ಇನ್ನೂ ಕೆಲವರನ್ನು ಕುದುರೆಗಳು ಎಂದು ಕರೆಯುತ್ತೀರಿ. ಕೆಲವರನ್ನು ಗೆಳೆಯರು ಎನ್ನುವಿರಿ, ಬೇರೆ ಕೆಲವರನ್ನು ಶತ್ರುಗಳು ಎನ್ನುವಿರಿ. ಇಡೀ ಜೀವಮಾನವನ್ನೇ ಹೀಗೆ ನಂಬಿಸಿಕೊಳ್ಳುವ ಆಟದಲ್ಲಿ ಕಳೆಯುತ್ತೀರಿ. ಆತ್ಮವಿಲ್ಲದೆ ಹೋದರೆ ಅವರೆಲ್ಲರೂ ಒಂದೇ ರೀತಿಯ ಜಡವಸ್ತು ಎಂಬುದು ಅರ್ಥವಾದರೆ ಆಗ , 'ಅನೇಕ' ಎಂಬ ಕಲ್ಪನೆಯೂ, ನಾಮರೂಪಗಳ ವೈವಿಧ್ಯವೂ ಮಾಯವಾಗುತ್ತವೆ. ಆಗ ಇಷ್ಟ- ಅನಿಷ್ಟಗಳ ಗೊಡವೆಯೇ ಇರುವುದಿಲ್ಲ. ನೀವು ನಗುವಿರಿ- ಅಳುವಿರಿ, ಪ್ರೇಮಿಸುವಿರಿ- ದ್ವೇಷಿಸುವಿರಿ, ಸಂತಸ, ದುಃಖ, ಕ್ರೋಧ, ಆಕರ್ಷಣೆ ಇವುಗಳನ್ನು ಬದುಕುವಿರಿ. ಆದರೆ ಈ ಎಲ್ಲ ವೈವಿಧ್ಯಪೂರ್ಣ ಪ್ರಕ್ರಿಯೆಗಳು ವಸ್ತು ನಿಷ್ಠ ಜಗತ್ತಿನ ಅವಾಸ್ತವತೆಯನ್ನು ಸ್ವಲ್ಪವಾದರೂ ಕಡಿಮೆ ಮಾಡುವುದಿಲ್ಲ.

'ಪ್ರಶಾಂತಿ ವಾಹಿನಿ'ಯಲ್ಲಿ ವೈರಾಗ್ಯಕ್ಕೆ ಹೊಸ ಅರ್ಥ ಬರುತ್ತದೆ. ರಾಗ ಎಂದರೆ ಮೋಹ, ಆಸಕ್ತಿ. ನೀವು ಅಷ್ಟೊಂದು ಮೋಹಿಸುತ್ತಿದ್ದ ಶಿಲಾವಿಗ್ರಹವು ನಿಜವಾಗಿ ದೇವರು ಎಂಬ ಅರಿವುಂಟಾದಾಗ ವೈರಾಗ್ಯ ಬರುತ್ತದೆ. ನೀವು ಏನಾಗಿದ್ದೀರೋ ಅದೇ ವಸ್ತುವೇ ಆ ವಿಗ್ರಹವೂ ಆಗಿದೆ. ನಿಮ್ಮ ಅಜ್ಞಾನವು ಅದರ ಮೇಲೆ 'ಶಿಲಾತನದ' ಮುಸುಕು ಹಾಕಿದೆ. ಹೀಗೆ ಬಂದ ವೈರಾಗ್ಯವು ಶಾಶ್ವತವಾದುದು ಮತ್ತು ಅತ್ಯಂತ ಭವ್ಯವಾದದ್ದು.

## ಅಷ್ಟಾಂಗ ಸಾಧನೆ

ಆಧ್ಯಾತ್ಮಿಕ ಶಿಕ್ಷಣದ ಎಂಟು ಸಾಂಪ್ರದಾಯಿಕ ಹಂತಗಳನ್ನು ಕುರಿತೂ ಬಾಬಾ ಈ ಪುಸ್ತಕದಲ್ಲಿ ಉತ್ತಮವಾದ ಮಾತುಗಳನ್ನಾಡಿದ್ದಾರೆ. ಅವು ಒಂದೊಂದಕ್ಕೂ ವ್ಯಾಪಕವಾದ ಮತ್ತು ಆಳವಾದ

ಅರ್ಥವನ್ನು ನೀಡಿದ್ದಾರೆ. ಮೊದಲನೆಯ ಸಾಧನೆ ಯಮ. ಇದರಲ್ಲಿ ಅಹಿಂಸೆ, ಸತ್ಯ, ಬ್ರಹ್ಮಚರ್ಯ, ಅಸಂಗ್ರಹ ಇವೆಲ್ಲ ಸೇರಿಕೊಳ್ಳುತ್ತವೆ. ಸಾಮಾನ್ಯವಾಗಿ ಈ ಪದಕ್ಕೆ ಕೊಡುವ ಅರ್ಥ ಇದು. ಆದರೆ ನಾನು ಹೇಳುತ್ತೇನೆ, ಯಮ ಎನ್ನುವುದು ನಿಜವಾಗಿ ದೇಹ ಮತ್ತು ಇಂದ್ರಿಯಗಳ ಮೋಹವನ್ನು ತೊರೆಯುವುದು ಎನ್ನುತ್ತಾರೆ ಬಾಬಾ.

ಎರಡನೆಯ ಸಾಧನೆ ನಿಯಮ. ರಾಜಯೋಗಕೃತಿಗಳಲ್ಲಿ ಇದನ್ನು ದೈಹಿಕ ಪರಿಶುದ್ಧತೆ, ಮಾನಸಿಕ ಉನ್ನತಿ, ವ್ರತ, ಸ್ಥಿರಗತಿಯ ಅಧ್ಯಯನ, ಮತ್ತು ಭಗವಂತನಲ್ಲಿ ಶರಣಾಗತಿ- ಎಂದು ವರ್ಣಿಸಲಾಗಿದೆ. ಬಾಬಾ ಹೀಗೆ ವಿವರಿಸುತ್ತಾರೆ: ಕಾಲ ದೇಶ ಪರಿಸ್ಥಿತಿಗಳ ವಿವಕ್ಷೆಯಿಲ್ಲದ ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲಿಸಿದ ಪ್ರೇಮವೇ ನಿಯಮ.

ಮುಂದಿನ ಸಾಧನೆಯಾದ ಆಸನ ಸಾಧಕನು ಧ್ಯಾನಕ್ಕೆ ಅನುಸರಿಸಬೇಕಾದ ದೇಶ, ಕಾಲ, ಭಂಗಿಗಳನ್ನು ವಿವರಿಸುತ್ತದೆ. ಇವುಗಳಿಂದ ಅವನು ಧ್ಯಾನದಲ್ಲಿ ಸ್ಥಿರತೆ ಪಡೆಯುತ್ತಾನೆ. ಬಾಬಾ ವಿವರಿಸುತ್ತಾರೆ: "ಅತ್ಯುತ್ತಮ ಭಂಗಿ ಉದಾಸೀನ (ಪೂರ್ತಿಯಾಗಿ ಸಡಿಲ ಬಿಟ್ಟು ಪೂರ್ತಿಯಾಗಿ ಅನಾಸಕ್ತವಾಗುವಿಕೆ)" ಎಂದು. ಪತಂಜಲಿಯು ಯೋಗ ಸೂತ್ರಗಳಲ್ಲಿ ಸ್ಥಿರಂ ಸುಖಂ ಆಸನಂ ಎನ್ನುತ್ತಾನೆ (ಸ್ಥಿರವಾದ ಹಿತಕರವಾದ ಭಂಗಿ). ನಾನು ಅದನ್ನೇ ಬೇರೆ ಮಾತುಗಳಲ್ಲಿ ಹೇಳುತ್ತಿದ್ದೇನೆ. ಅತ್ಯಂತ ಪರಿಣಾಮಕಾರಿಯಾದ ಆಸನ ಯಾವುದೆಂದರೆ, ಬಾಹ್ಯ ಪ್ರಪಂಚದಿಂದ ಯಾವುದು ಸ್ವಲ್ಪವಾದರೂ ದುಷ್ಪರಿಣಾಮಗೊಳ್ಳದೋ ಅದು. ಅದೇ ಉದಾಸೀನ ಎಂದು ಬಾಬಾ ವಿವರಿಸುತ್ತಾರೆ.

ಪ್ರಾಣಾಯಾಮವನ್ನು ಕುರಿತು ಬಾಬಾ ಹೇಳುವುದು ಹೀಗೆ: ಯೋಗದಲ್ಲಿ ಈ ಹಂತವನ್ನು ಉಸಿರಾಟದ ನಿಯಂತ್ರಣ ಎಂದು ವಿವರಿಸಲಾಗಿದೆ. ಆದರೆ ಈ ಪ್ರಪಂಚವು ಸತ್ಯ ಮತ್ತು ಮಿಥ್ಯೆಗಳ ಮಿಶ್ರಣ ಎಂದು ಯಾರು ಅರ್ಥಮಾಡಿಕೊಂಡಿದ್ದಾರೋ ಅವರಿಗೆ ಮಾತ್ರ ಹೀಗೆ ಪ್ರಾಣವಾಯುಗಳ ನಿಯಂತ್ರಣ ಸಾಧ್ಯವಾಗುವುದು. ಮನಸ್ಸಿನ ಮೇಲೆ ಈ ವಿಶ್ವದ ಮುದ್ರೆ ಹೇಗಿರುತ್ತದೆಂದರೆ, ಬಹುಕಾಲದ ಹಿಂದೆ ಪೆನ್ಸಿಲಿನಲ್ಲಿ ಬರೆದ ಅಕ್ಷರಗಳ ಹಾಗೆ. ಈಗ ಅವು ಮಸುಕಾಗಿವೆ, ಅಸ್ಪಷ್ಟವಾಗಿವೆ, ಬಿಡಿಸಿ ಓದಲು ಸಾಧ್ಯವಿಲ್ಲದಂತಿವೆ, ಅರ್ಧ ಸತ್ಯ ಅರ್ಧ ಸುಳ್ಳು ಬೆರೆತಹಾಗಿವೆ. ಆದರೆ ಸೃಷ್ಟಿಯ ಈ ವೈಚಿತ್ರ್ಯದ ಅರಿವಿರುವ ವ್ಯಕ್ತಿಯು ಪ್ರಾಣವಾಯುವು ತನಗೆ ವಿಧೇಯವಾಗಿರುವಂತೆ ಮಾಡಬಲ್ಲನು.

ಪ್ರತ್ಯಾಹಾರ ಎಂಬ ಐದನೆಯ ಸಾಧನಾ ಹಂತವನ್ನೂ ಬಾಬಾ ವಿವರಿಸಿ ಸ್ಪಷ್ಟಪಡಿಸುತ್ತಾರೆ. ಆಂತರಿಕ ಸತ್ಯವನ್ನು ಕುರಿತು ಅವಿಚ್ಛಿನ್ನವಾಗಿ ಅಖಂಡವಾಗಿ ಧ್ಯಾನ ಮಾಡಬೇಕಾದರೆ ಮನಸ್ಸು ಬಾಹ್ಯ ಜಗತ್ತಿನ ಅರಿವಿನಿಂದ ಮುಕ್ತವಾಗಬೇಕು. ಇಂದ್ರಿಯ ಗ್ರಹಿಕೆಗಳಿಂದ ಒಳಸೆಳೆದುಕೊಳ್ಳುವುದೇ ಪ್ರತ್ಯಾಹಾರ. ಇದನ್ನು ಹೇಗೆ ಸಾಧಿಸಬಹುದು? ಬಾಹ್ಯ ವಿಶ್ವವು ಹುಟ್ಟಿರುವುದು ಮಾಯೆಯಿಂದ, ಅದು ಪೋಷಿತವಾಗುತ್ತಿರುವುದೂ ಮಾಯೆಯಿಂದ ಎಂಬ ಅರಿವು ಇಂದ್ರಿಯಗಳನ್ನು ಬಳಸೆಳೆದು ಕೊಳ್ಳಲು ಚಾಲಕ ಶಕ್ತಿಯನ್ನು ನೀಡುತ್ತದೆ. ಬಾಬಾ ಅವರ ಪ್ರಕಾರ ಬೇರೆ ಯಾವ ಸಾಧನೆಯಿಂದಲೂ ಇದನ್ನು ಸಾಧಿಸಲು ಬರುವುದಿಲ್ಲ. ಆದ್ದರಿಂದ ಇಲ್ಲಿಯೂ ಜ್ಞಾನದ ಗಳಿಕೆ ಮಹತ್ವದ ಪೂರ್ವಾಗತ್ಯವಾಗುತ್ತದೆ.

ಬಾಬಾ ಮುಂದುವರಿಸುತ್ತಾರೆ, ಚಿತ್ತವು ಒಂದು ಆಲೋಚನೆಯಲ್ಲಿ ಸ್ಥಿರವಾಗಿ ನಿಂತಾಗ ಅದನ್ನು ಧಾರಣ ಎಂದು ಕರೆಯಲಾಗುತ್ತದೆ ಎನ್ನುತ್ತಾನೆ ಪತಂಜಲಿ. ಚಿತ್ತದ ಹಲವು ಹತ್ತು ಕ್ರಿಯೆಗಳ ರಾಹಿತ್ಯ ಎಂಬಷ್ಟಕ್ಕಿಂತ ಹೆಚ್ಚಿನ ಅರ್ಥವನ್ನು ಧಾರಣ ಹೊಂದಿದೆ. ಚಿತ್ತವನ್ನು ನಿಮ್ಮ ಎಳೆಯ ಮಗುವಿನ ಹಾಗೆ ಭಾವಿಸಿ. ಪ್ರೀತಿಯಿಂದ ಮುದ್ದು ಮಾಡಿ ಅದನ್ನು ಸರಿಯಾದ ದಾರಿಗೆ ಕರೆತನ್ನಿರಿ. 'ಕಾಣು'ತ್ತಿರುವುದೆಲ್ಲ ಮಾಯೆ, ಮೇಲೆ ಆರೋಪಿಸುವುದು, ನಂಬಿಸಿರುವುದು ಎಂಬುದನ್ನು ಕ್ರಮೇಣ ಅದಕ್ಕೆ ತಿಳಿಯುವ ಹಾಗೆ ಮಾಡಿ. ಪ್ರೀತಿಯ ಖಂಡನೆಯಿಂದ ಅದರ ಮನಸ್ಸಿನ ಹೆದರಿಕೆಗಳನ್ನು ತೆಗೆದುಹಾಕಿ, ಅದರ ಗಮನವು ಗುರಿಯ ಮೇಲೆ ಕೇಂದ್ರೀಕೃತವಾಗುವಂತೆ ಮಾಡಿ.

ಮುಂದಿನ ಹಂತ ಧ್ಯಾನ. ಇದನ್ನು ಕುರಿತು ಬಾಬಾ ಬೇರೊಂದು ಕೃತಿಯನ್ನು ರಚಿಸಿದ್ದಾರೆ. ಪ್ರಜ್ಞೆಯು ಅವಿಚ್ಛಿನ್ನವಾಗಿ ಪ್ರಜ್ಞೆಯಲ್ಲಿಯೇ ನೆಲೆಗೊಂಡಿರುವುದೇ ಧ್ಯಾನ ಎಂದಿಷ್ಟನ್ನು ಇಲ್ಲಿ ಹೇಳಿದರೆ ಸಾಕು. ಕೊನೆಯ ಹಂತ ಸಮಾಧಿ. ಸವಿಕಲ್ಪ ಸಮಾಧಿಯಲ್ಲಿ ಜ್ಞಾತೃ, ಜ್ಞಾನ ಮತ್ತು ಜ್ಞೇಯಗಳ ಕುರುಹು ಉಳಿದಿರುತ್ತದೆ; ನಿರ್ವಿಕಲ್ಪ ಸಮಾಧಿಯಲ್ಲಾದರೆ ಈ ಕುರುಹು ಕೂಡ ಅಳಿಸಿ ಹೋಗುತ್ತದೆ. ಇದೊಂದು ಸಾಗರದ ಹಾಗೆ. ಪ್ರಜ್ಞೆಯು ಅಂತಿಮವಾಗಿ ಅದರಲ್ಲಿ ಲೀನವಾಗಿ ಬಿಡುತ್ತದೆ. ಅದೇ ಸಾಧಿಸಬೇಕಾದ ಗುರಿ. ಅಲ್ಲಿ ಪರಮಶಾಂತಿ ಲಭ್ಯವಾಗುತ್ತದೆ.

ಇಂದು ಪ್ರಪಂಚದ ಎಲ್ಲೆಡೆಗಳಿಂದ ಬರುವ ಜನರಿಗೆ ಪ್ರಶಾಂತಿ ನಿಲಯವು ಆ ದಿವ್ಯ ಶಾಂತಿಯ ಬೆಚ್ಚನೆಯ ಹಿತ ಅನುಭವ ಪಡೆಯುವ ಸ್ಥಾನವಾಗಿದೆ. 'ಭೂಮಿಯ ಮೇಲೆ ಶಾಂತಿಯನ್ನೂ ಮಾನವರಲ್ಲಿ ಸೋದರ್ಯವನ್ನೂ' ಸ್ಥಾಪಿಸಲು ದೇವಪುತ್ರನು ಧರೆಗವತರಿಸಿದ ಕ್ರಿಸ್‌ಮಸ್ ದಿನದಂದು ವಿದೇಶಗಳಿಂದ ಸಾವಿರಾರು ಜನ ಕ್ರಿಶ್ಚಿಯನರು ಬಾಬಾ ಅವರ ಸನ್ನಿಧಿಗೆ ಬರುತ್ತಾರೆ, ಇಲ್ಲಿನ ಕ್ರೈಸ್ತರೊಂದಿಗೆ ಬೆರೆಯುತ್ತಾರೆ. ಬಾಬಾ ಕೂಡ ಅದೇ ದಿವ್ಯ ಉದ್ದೇಶದಿಂದ ಬಂದಿದ್ದಾರೆ, ಮಾನವನನ್ನು ಆ ಉದ್ದೇಶ ಸಾಧನೆಗೆ ತಕ್ಕ ಉಪಕರಣವಾಗುವಂತೆ ಪರಿವರ್ತನೆಗೊಳಿಸುವುದರಲ್ಲಿ ನಿರತರಾಗಿದ್ದಾರೆ ಎನ್ನುವುದು ಅವರಿಗೆ ಗೊತ್ತು. ಸತ್ಯಸಾಯಿ ಸೇವಾ ಸಂಸ್ಥೆಯ ಪ್ರತಿಯೊಂದು ಘಟಕವೂ ಪ್ರತಿ ಗೋಷ್ಠಿಯನ್ನೂ ಲೋಕಾಃ ಸಮಸ್ತಾಃ ಸುಖಿನೋ ಭವಂತು ಎಂಬ ಪ್ರಾರ್ಥನೆಯೊಂದಿಗೆ ಸಮಾಪ್ತಿಗೊಳಿಸಬೇಕೆಂದು ಅವರು ವಿಧಿಸಿದ್ದಾರೆ. ಆದರೆ ಇಲ್ಲಿ ಒಂದು ಎಚ್ಚರಿಕೆಯನ್ನೂ ಕೊಟ್ಟಿದ್ದಾರೆ. ಪ್ರಾರ್ಥನೆ ಹೇಳುವಾಗ ಇತರರ ಬಗೆಗೆ ಕೆಟ್ಟದಾಗಿ ಆಲೋಚಿಸಿದರೆ, ಇತರರನ್ನು ಹೀನಾಯವಾಗಿ ಕಂಡರೆ, ವೇಷಭೂಷಣ ಭಾಷೆ ಧರ್ಮ ಮನೋಭಾವನೆ ಇವುಗಳ ಭಿನ್ನತೆಯನ್ನು ಸಹಿಸಿಕೊಳ್ಳಧೆ ಹೋದರೆ ಎಂದೆಂದಿಗೂ ನೀವು ಶಾಂತಿಯನ್ನು ಹರಡಲಾರಿರಿ. ನಿಮ್ಮ ಹೃದಯಗಳು ಮಾತ್ಸರ್ಯ, ಲೋಭಗಳ ಗುಂಡಿಗಳಾಗಿರುತ್ತವೆ. ಆದರೆ ಇಂದಿನಿಂದ ಮುಂದಕ್ಕೆ ನಿಮ್ಮ ನಾಲಿಗೆಯು ಶಾಂತಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿರುವಾಗ ನಿಮ್ಮ ಕೈಗಳು ಸೇವಾ ಕಾರ್ಯದಲ್ಲಿ ತೊಡಗಿರಲಿ, ನಿಮ್ಮ ಹೃದಯ ಪ್ರೇಮಭರಿತವಾಗಲಿ.

## ಶಾಂತಿಗಾಗಿ ವಿಧಾಯಕಗಳು

ಇಂದು ವಿಷಪೂರಿತವಾದ ವಿಚಾರಗಳನ್ನು ತುಂಬಿಕೊಂಡಿರುವ ಪಂಡಿತವೇಷಿಗಳು ಧ್ಯಾನಕ್ಕೆ ಅಗತ್ಯವಾದ ನಿಯಮಗಳನ್ನು ರೂಪಿಸುತ್ತಿದ್ದಾರೆ ಎನ್ನುತ್ತಾರೆ ಬಾಬಾ. ಪ್ರತಿಯೊಬ್ಬನೂ ತನ್ನದೇ ಆದ ವಿಧಿ ವಿಧಾನಗಳನ್ನು ಹೇಳುತ್ತಾನೆ, ಬೇರೆಯವರದಕ್ಕಿಂತ ಮಿಗಿಲಾಗಿ ತನ್ನ ವಿಧಾನವು ಪ್ರಯೋಜನಕಾರಿಯಾಗುತ್ತದೆ ಎಂದು ಬಡಾಯಿ ಕೊಚ್ಚಿಕೊಳ್ಳುತ್ತಾನೆ. ಆದರೆ ಇವರು ಯಾರೂ ಧ್ಯಾನದ ನಿಜವಾದ ಮಾಧುರ್ಯವನ್ನಾಗಲಿ ಪಾವಿತ್ರ್ಯವನ್ನಾಗಲಿ ಸವಿದಿಲ್ಲ. ಅನೇಕರು ಧ್ಯಾನ ಎಂಬ ಪದವನ್ನು ಕೇಳಿದೊಡನೆ ವ್ಯಂಗ್ಯದಿಂದ ನಗೆಯಾಡುವಂತಾಗಿರುವುದಕ್ಕೆ ಇದೇ ನಿಜವಾದ ಕಾರಣ. ನನ್ನ ಉದ್ದೇಶ ಅಂತಹ ಜನರಿಗೆ ತಿಳಿವಳಿಕೆ ಕೊಟ್ಟು, ಅವರನ್ನು ಋಜು ಮಾರ್ಗಕ್ಕೆ ತರುವುದೇ ಆಗಿದೆ.

ತಮ್ಮ ಕೃತಿ 'ಧ್ಯಾನವಾಹಿನಿ'ಯ ಉಗಮಕ್ಕೆ ಬಾಬಾ ಅವರು ಈ ರೀತಿಯಲ್ಲಿ ಕಾರಣವನ್ನು ಸೂಚಿಸಿದ್ದಾರೆ. ಅತ್ಯಂತ ಶಕ್ತಿಶಾಲಿಯಾದ ಔಷಧ ಕೂಡ ರೋಗಿಯ ಹಾಸಿಗೆಯ ಪಕ್ಕದಲ್ಲಿ ನಿಂತು ವಿಸ್ತಾರವಾಗಿ ಅದರ ಸಾಮರ್ಥ್ಯ, ಪ್ರಭಾವಗಳನ್ನು ಬಣ್ಣಿಸುತ್ತಿದ್ದರೆ ರೋಗವನ್ನು ಗುಣಪಡಿಸಲಾರದು. ಔಷಧಿಯನ್ನು ರೋಗಿಯು ಸೇವಿಸಬೇಕು, ರಕ್ತನಾಳಗಳ ಮೂಲಕ ಹರಿದು ಅದು ತನ್ನ ಕೆಲಸಮಾಡಲು ಅವಕಾಶ ಕೊಡಬೇಕು. ನಾನು ಧ್ಯಾನದ ವಿಚಾರವಾಗಿ ಬರೆಯುವುದನ್ನು ನೀವು ಓದಿದ ಮಾತ್ರಕ್ಕೆ ಅದು ಸುಲಭವಾಗುವುದಿಲ್ಲ. ಮನಸ್ಸು ಸುಖ ಭೋಗಗಳ ಹಿಂದೆ ಹುಚ್ಚು ಹುಚ್ಚಾಗಿ ಓಡುತ್ತದೆ. ಅಸಮರ್ಥವಾದ, ಆದ್ದರಿಂದಲೇ ಮೋಸಗೊಳಿಸುವ ಇಂದ್ರಿಯಗಳ ಮೂಲಕ ಕಾಣುವ ಬಿಸಿಲುಗುದುರೆಗಳ ಬೆನ್ನಟ್ಟುತ್ತದೆ. ಮನಸ್ಸಿಗೆ ಸೋಂಕುಹತ್ತಿ ಅದನ್ನು ಹಾಳು ಮಾಡಿರುವ ಅಸಂಖ್ಯಾತ ಆಸೆಗಳನ್ನು ಮೊದಲು ತಣ್ಣಗಾಗಿಸಬೇಕು. ಆಮೇಲೆ ಅದನ್ನು ಕೇವಲ ಆನಂದದ ಕಡೆಗೆ ಏಕಾಗ್ರಗೊಳಿಸಬೇಕು. ಭಗವಂತನೇ ಅತ್ಯುನ್ನತ ಆನಂದ ಎಂಬ ಅರಿವು ಮೂಡಿದೊಡನೆ ಮನಸ್ಸು ತಾನಾಗಿ ಭಗವಂತನ ಕಡೆಗೆ ಒಲಿಯುತ್ತದೆ. ಜ್ಞಾನವನ್ನು ಒಡೆಯನೆಂದು ಅಂಗೀಕರಿಸಿ ಕಡಿವಾಣವನ್ನು ಅದರ ಕೈಗೆ ಒಪ್ಪಿಸಿದಾಗ, ದುಷ್ಟತನವನ್ನು ಮೊಟ್ಟೆಯಿಟ್ಟು ಬೆಳೆಸುವ ಆಹಾರವನ್ನು ಮನಸ್ಸಿಗೆ ಕೊಡದ ಹೋದಾಗ, ಕಟ್ಟುನಿಟ್ಟಾಗಿ, ಶ್ರದ್ಧಾ ಪೂರ್ವಕವಾಗಿ ಇಂದ್ರಿಯಗಳನ್ನು ಪಳಗಿಸಿದಾಗ ಧ್ಯಾನವು ಖಂಡಿತವಾಗಿಯೂ ನಿಮ್ಮನ್ನು ಆ ಗುರಿಯ ಕಡೆಗೆ ಒಯ್ಯುತ್ತದೆ.

ಏಕಾಗ್ರತೆ, ಚಿಂತನೆ, ಧ್ಯಾನ ಈ ಮೂರರ ನಡುವೆ ಇರುವ ವ್ಯತ್ಯಾಸವನ್ನು ಬಾಬಾ ಗುರುತಿಸುತ್ತಾರೆ. ಏಕಾಗ್ರತೆಯೆನ್ನುವುದು ಇಂದ್ರಿಯಗಳ, ಭಾವನೆಗಳ ಮತ್ತು ಬುದ್ಧಿಯ ಕ್ಷೇತ್ರದಲ್ಲಿ ದೈನಂದಿನ ವ್ಯವಹಾರದಲ್ಲಿ ಅಚಂಚಲವಾದ ನಿರ್ಧಾರಣ. ಇಂದ್ರಿಯಗಳು ಸ್ವಲ್ಪ ಸಮಯ ವಿಷಯಗಳಿಂದ ಹಿಂತೆಗೆದುಕೊಂಡು ವಸ್ತು ಪ್ರಪಂಚದ ಕಡೆಗಿನ ಮೋಹ ತೆಳುವಾದಾಗ ಚಿಂತನ ಸಾಧ್ಯವಾಗುತ್ತದೆ. ಯಾವಾಗ ಎಲ್ಲ ಬಗೆಯ ಮೋಹಗಳಿಂದ ಬಿಡುಗಡೆ ಹೊಂದುವಿರೋ ಆಗ ಧ್ಯಾನ ಸ್ಥಿತಿಯನ್ನು ನೀವು ಪ್ರವೇಶಿಸುವಿರಿ ಎನ್ನುತ್ತಾರೆ ಅವರು.

'ಧ್ಯಾನವಾಹಿನಿ'ಯಲ್ಲಿ ಧ್ಯಾನಕ್ಕೆ ಮತ್ತು ಮನೋ ನಿಯಂತ್ರಣಕ್ಕೆ ಅಗತ್ಯವಾದ ನಿರ್ದೇಶಕ ಸೂತ್ರಗಳನ್ನು ಬಾಬಾ ಕೊಡುತ್ತಾರೆ. ಅವರು ಹೇಳುವುದು, ಧ್ಯಾನವು ಧಾನ್ಯದಂತೆಯೇ ಜೀವ ಪೋಷಕ ಎಂದು. ಹಲವು ವಿಧಾನಗಳನ್ನು ಪ್ರಯೋಗ ಮಾಡಿ ನೋಡಿರುವ ಪಾಲ್ ಬ್ರಂಟನ್ ವಿಧಾನಗಳು ಅನೇಕ ಬಗೆಯಾಗಿವೆ ಎನ್ನುತ್ತಾನೆ. ಆದರೆ ಸಾಮಾನ್ಯವಾಗಿ ಅವೆಲ್ಲವೂ ದೈಹಿಕವಾಗಿ ವಿರಕ್ತಿಯನ್ನೂ ಪ್ರಪಂಚ ಪರಿತ್ಯಾಗವನ್ನೂ ಒಳಗೊಂಡಿರುತ್ತವೆ. ನಿರ್ದಿಷ್ಟ ಸಮಯಗಳಲ್ಲಿ ಶಿಸ್ತಿಗೊಳಪಡಿಸಿ, ಮಾನವನ ಅಂತರಂಗದ ಚಿಂತನೆಯ ಗೊಂದಲಗಳನ್ನೂ, ಅದರ ಮೇಲೆ ಬೀಳುವ ಮುದ್ರೆಗಳ ರಾಶಿಯನ್ನೂ ಸಮಾಧಾನ ಪಡಿಸುವುದೂ ಅದರೊಂದಿಗೆ ಸೇರುತ್ತದೆ. ಸ್ಥಳ, ಆಸನ, ವೇಳಾಪಟ್ಟಿ, ಪಾಠ್ಯಕ್ರಮ ಮೊದಲಾದ ಅಂಶಗಳನ್ನು ಬಾಬಾ ವಿವರಿಸುತ್ತಾರಾದರೂ ಹೆಚ್ಚು ಮಹತ್ವ ಕೊಟ್ಟು ಹೇಳುವುದು ಭಗವದನುಗ್ರಹವನ್ನು, ಧ್ಯಾನವಾಗಿ ಹರಳುಗಟ್ಟಿದ ಪ್ರಾರ್ಥನೆಗೆ ಭಗವಂತ ಪ್ರತಿಸ್ಪಂದಿಸುತ್ತಾನೆ. ಸಾಧಕನು ಯಾವ ನಾಮ ರೂಪವನ್ನಿಟ್ಟುಕೊಂಡು ಧ್ಯಾನ ಮಾಡುತ್ತಾನೋ ಆ ನಾಮರೂಪವನ್ನೇ, ಅವನಿಗೋಸ್ಕರವಾಗಿ ದೇವರು ತಳೆಯುತ್ತಾನೆ. ಆದ್ದರಿಂದ ಧ್ಯಾನವು ಎಂದಿಗೂ ವಿನಿಮಯ ಅಥವಾ ಕೊಳುಕೊಡೆ ಪ್ರಯತ್ನವಾಗಬಾರದು ಎಂದು ಬಾಬಾ ಹೇಳುತ್ತಾರೆ. ಪಟ್ಟು ಬಿಡದ ಸಾಧನೆಯಿಂದ ಶಿಖರಾವಸ್ಥೆ ತಲುಪಬಹುದು, ಏಕೆಂದರೆ ಹೋರಾಟ ಮಾಡುತ್ತಿರುವವನನ್ನು, ಬಳಲಿ ಕುಸಿಯುತ್ತಿರುವವನನ್ನು ಅವನೇ ಕೈ ಹಿಡಿದು ತನ್ನ ಬಳಿಗೆ ಎತ್ತಿಕೊಳ್ಳುತ್ತಾನೆ.

ಪ್ರಾಮಾಣಿಕನಾದ ಸಾಧಕನಿಗೆ ಅಡ್ಡಲಾಗುವ ಒಂಬತ್ತು ಶತ್ರುಗಳ ಬಗ್ಗೆ ಬಾಬಾ ನಮಗೆ ಎಚ್ಚರ ಕೊಡುತ್ತಾರೆ. ಅವುಗಳಲ್ಲಿ ಮೂರು ದೈಹಿಕವಾದುವು: ದೈಹಿಕ ಕಾಮನೆಗಳು, ವಸ್ತುಗಳನ್ನು ಸಂಗ್ರಹಿಸಬೇಕೆಂಬ ದುರಾಸೆ ಅಥವಾ ಪೂರ್ಣ ಪ್ರೇಮವನ್ನು ತಾನೇ ಗಳಿಸಬೇಕೆಂಬ ಲೋಭ ಮತ್ತು ಜೀವಿಗಳಿಗೆ ಹಿಂಸೆ ಉಂಟು ಮಾಡುವ ಪ್ರವೃತ್ತಿ. ಇನ್ನು ಮೂರು ಶಾಬ್ದಿಕವಾದವು: ಸುಳ್ಳೇ ಸುದ್ದಿ ಹಬ್ಬಿಸಿ ಎಲ್ಲೆಲ್ಲೂ ಗಾಬರಿ ಉಂಟುಮಾಡುವುದು, ಸುಳ್ಳಾಡುವುದು ಮತ್ತು ಅಪಪ್ರಚಾರ ಮಾಡುವುದು. ಕೊನೆಯ ಮೂರು ಮಾನಸಿಕವಾದವು: ಬೇರೆಯವರಿಗೆ ಸಂಬಂಧಿಸಿದ್ದಕ್ಕಾಗಿ ಹಂಬಲಿಸುವುದು, ಹೊಟ್ಟೆ ಕಿಚ್ಚು ಹಾಗೂ ಸಂದೇಹ. ನಿರ್ದಿಷ್ಟ ರೂಪವನ್ನು ಕುರಿತ ಧ್ಯಾನದ ಜೊತೆ ಜೊತೆಯಲ್ಲಿ ಆ ರೂಪವನ್ನು ನಿರ್ದೇಶಿಸುವ ನಾಮದ ಮಾಧುರ್ಯವನ್ನು ಅಖಂಡವಾಗಿ ಸವಿಯಬೇಕು ಎಂದು ಬಾಬಾ ಹೇಳುತ್ತಾರೆ. ರೂಪವೇನಾದರೂ ಗಮನದಿಂದ ಜಾರಿದರೆ, ನಾಮವು ಒಡನೆಯೇ ಅದನ್ನು ಮತ್ತೆ ಹಿಂದಕ್ಕೆ ತರುತ್ತದೆ; ನಾಮವು ಅಂದಿನಿಂದ ಜಾರಿದರೆ ರೂಪವು ಮತ್ತೆ ಅದನ್ನು ಮನಸ್ಸಿಗೆ ತಂದು ನೆಲೆಗೊಳಿಸುತ್ತದೆ. ಹೀಗಾಗಿ ಪ್ರಜ್ಞೆಯಲ್ಲಿ ಭಗವಂತನ ಸನ್ನಿಧಿ ಅವಿರತವಾಗಿ ಖಚಿತವಾಗುತ್ತದೆ ಎನ್ನುತ್ತಾರೆ ಬಾಬಾ.

## ಆನಂದದ ಅರಳು ಮೊಗ್ಗುಗಳು

ಇಲ್ಲಿ ಸಣ್ಣದೊಂದು ಪುಸ್ತಿಕೆಯ ಪ್ರಸ್ತಾಪ ಮಾಡಬಹುದು. 'ಡಯಲಾಗ್ಸ್ ವಿತ್ ದಿ ಡಿವೈನ್' ಎಂಬುದು ಅದು. ಬಾಬಾ ಸ್ಥಾಪಿಸಿದ ಅಖಿಲ ಭಾರತ ವಿದ್ವಾಂಸರು ಮತ್ತು ಸಾಧಕರ ಅಕಾಡೆಮಿಯಾದ ಪ್ರಶಾಂತಿ ವಿದ್ವನ್ಮಹಾಸಭಾದ ಮಹಾರಾಷ್ಟ್ರ ಶಾಖೆಯು ಈ ಪುಸ್ತಿಕೆಯನ್ನು ಪ್ರಕಟಿಸಿದೆ. ವಿ. ಎಸ್. ಪಾಗೆ ತನ್ನ ಅಂತರಾತ್ಮದಲ್ಲಿ ಸವಿದ ಆನಂದದ ಫಲವಾಗಿ ಈ ಕೃತಿ ಅರಳಿದೆ ಎಂದು ಬಾಬಾ

ಬರೆಯುತ್ತಾರೆ. ಶ್ರೀ ಸತ್ಯಸಾಯಿಬಾಬಾ ಅವರ ಪದತಲದಲ್ಲಿ ಕುಳಿತು ಅಪಾರವಾದ ವಿನಯದಿಂದ ಶ್ರದ್ಧೆಯಿಂದ ತನ್ನ ಅಧ್ಯಯನ ಮತ್ತು ಆಧ್ಯಾತ್ಮಿಕ ಸಾಧನೆಯ ಕ್ಷೇತ್ರಗಳಲ್ಲಿ ಎದುರಾದ ಸಮಸ್ಯೆಗಳ ಬಗೆಗೆ ಪ್ರಶ್ನೆ ಕೇಳಿದರು. ಬಾಬಾ ಅವರಿಗೆ ಹೇಳುತ್ತಾರೆ: ನಿರಂತರ ಅಭ್ಯಾಸವಿಲ್ಲದೆ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿಯೊಂದು ಕ್ಷಣದಲ್ಲೂ ನೀನು ಭಗವಂತನನ್ನು ಸ್ಮರಿಸುತ್ತಿರಬೇಕು, ಆ ಚಿಂತನೆಯಲ್ಲೇ ಸಂತೋಷ ಕಾಣುತ್ತಿರಬೇಕು. ಆಗ ನೀನು ಶಾಂತಿಯನ್ನು ಗಳಿಸಲು ಸಮರ್ಥನಾಗುವೆ. ಒಂದು ಆಲೋಚನೆ ಅಡಗಿ ಇನ್ನೊಂದು ಮೂಡುವುದಕ್ಕಿಂತ ಮೊದಲು ನಾವು ಶಾಂತಿ ಪಡೆಯುವುದಿಲ್ಲವೆ, ಆ ಬಗೆಯ ತೆರಪಿಗಾಗಿ ನೀನು ಕಾಯುತ್ತಿರಬೇಕು, ಆ ಶಾಂತಿಯೊಡನೆ ಒಂದಾಗಬೇಕು. ಆಗ ಆ ಶಾಂತಿಯು ಅವಿರತವಾಗುತ್ತದೆ, ಶಾಶ್ವತವಾಗುತ್ತದೆ.

"ನೀರಿನ ಮೇಲೆ ಏಳುವ ಸಣ್ಣ ಅಲೆಗಳ ಹಾಗೆ ಆಲೋಚನೆಗಳು ಮೂಡುತ್ತವೆ, ಮುಳುಗುತ್ತವೆ. ನೀನು ನದಿಯ ನೀರಿನ ರಾಶಿಯನ್ನು ನೋಡಬೇಕೇ ಹೊರತು ಮೇಲೆ ಏಳುವ ಕಿರುತೆರೆಗಳನ್ನಲ್ಲ. ಆತ್ಮನು ಸದಾಕಾಲವೂ ಶಾಂತಿಯಲ್ಲಿ ನೆಲೆಸಿರುತ್ತಾನೆ; ಮಾನವನು ಇದನ್ನು ಗ್ರಹಿಸಲಾರದೆ, ಮನಸ್ಸಿನ ಚಂಚಲತೆಗಳಲ್ಲೇ ಮುಳುಗಿ ಹೋಗುತ್ತಾನೆ. ಅಲೆಗಳನ್ನು ಅಲಕ್ಷಿಸಿ ಜಲರಾಶಿಯನ್ನು ಗಮನಿಸಬೇಕಾದ ನಿತ್ಯಾವಧಾನ (ನಿರಂತರವಾದ ಜಾಗರೂಕತೆ) ಅಗತ್ಯ... ಅಶಾಂತಿ ಎನ್ನುವುದು ನೀನು ನಿಜವಾಗಿ ಆಗಿರುವ ಸಾಗರದ ಮೇಲಿನ ಅಲೆಯ ಏಳು ಮತ್ತು ಬೀಳು ಅಷ್ಟೆ."

ಸನಾತನ ಸಾರಥಿಯಲ್ಲಿ ಧಾರವಾಹಿಯಾಗಿ ಬಂದ ಮುಂದಿನ ವಾಹಿನಿಯೆ 'ಜ್ಞಾನವಾಹಿನಿ' ಸ್ಥೂಲವನ್ನೂ, ಕೊನೆಗೆ ಸೂಕ್ಷ್ಮವನ್ನೂ ಮೀರಿ ಏರಿದಾಗ, ಬುದ್ಧಿಯು ಪಕ್ವವಾದಾಗ, ಯಾವುದೇ ಭಾವನೆಗಳು, ಒತ್ತಡಗಳು, ಉದ್ವೇಗಳಿಲ್ಲದಾದಾಗ, ಪ್ರಜ್ಞೆಯಲ್ಲಿ ಉಳಿಯುವುದು ನಿಜವಾದ ಆತ್ಮ ಮಾತ್ರ. ವ್ಯಕ್ತಿಯು ಆಗ ನಿತ್ಯ ಸತ್ಯದಲ್ಲಿ, ಪ್ರತಿಯೊಂದರ ಹಿಂದಿರುವ ಏಕೈಕ ಪರವಸ್ತುವಿನಲ್ಲಿ ಒಂದಾಗಿರುತ್ತಾನೆ. ಅವನು ತಾನೇ ಬ್ರಹ್ಮನ್ ಅಥವಾ ಪರಮಾತ್ಮನ್ ಆಗುತ್ತಾನೆ. "ಈ ಅರಿವೇ ಆನಂದದ ತಿರುಳು. ತೈತ್ತಿರೀಯ ಉಪನಿಷತ್ತಿನಲ್ಲಿ "ಇದೆಲ್ಲವೂ ಆನಂದದಿಂದ ಹುಟ್ಟಿವೆ, ಎಲ್ಲವೂ ಆನಂದದ ಮೂಲಕವೇ ಜೀವಿಸುತ್ತವೆ, ಮತ್ತು ಆನಂದದಲ್ಲೇ ಇದೆಲ್ಲವೂ ಲೀನವಾಗುತ್ತವೆ. ಆನಂದದಲ್ಲಿ ಎಲ್ಲವೂ ವಿಶ್ರಾಂತಿ ಪಡೆಯುತ್ತವೆ ಎಂದಿದೆ. ಪರಮಾತ್ಮನ ಅರಿವು ಎಷ್ಟೆಷ್ಟು ಹೆಚ್ಚಾಗುತ್ತದೋ ಆನಂದವೂ ಅಷ್ಟಷ್ಟು ಹೆಚ್ಚುತ್ತದೆ. ಬಾಬಾ ಒಂದು ವಾಕ್ಯದಲ್ಲಿ ಇದನ್ನು ಸಂಗ್ರಹಿಸುತ್ತಾರೆ: ಅರಿವೇ ಬದುಕು ಅವರು ಮುಂದುವರಿದು ಹೇಳುತ್ತಾರೆ: "ಎಲ್ಲ ಮನುಷ್ಯರೂ ನನ್ನ ಹಾಗೆಯೇ ದೇವರು; ಇರುವ ಒಂದೇ ಒಂದು ವ್ಯತ್ಯಾಸವೆಂದರೆ ಅವರಿಗೆ ತಮ್ಮ ದೈವತ್ವದ ಅರಿವು ಇನ್ನೂ ಆಗಿಲ್ಲ. ಅನೇಕ ಜನ್ಮಗಳಲ್ಲಿ ಮಾಡಿದ ಕರ್ಮಗಳ ಮೂಲಕ ಈ ಕರ್ಮಜಗತ್ತಿಗೆ ಬಂದಿಯಾಗಿ ಬಂದಿದ್ದಾರೆ; ನಾನು ನನ್ನ ಇಚ್ಛೆಯಿಂದ ಮನುಷ್ಯ ರೂಪ ಧರಿಸಿದ್ದೇನೆ. ಅವರು ದೇಹಕ್ಕೆ ಬದ್ಧರು, ನಾನು ಈ ಬಂಧನದಿಂದ ಮುಕ್ತ."

ಮುಂದಿನದು 'ಉಪನಿಷದ್ ವಾಹಿನಿ' ಹತ್ತು ಪ್ರಧಾನ ಉಪನಿಷತ್ತುಗಳ ಸಾರ, ಒಂದು ಮುನ್ನುಡಿ, ಒಂದು ಹಿನ್ನುಡಿಯಲ್ಲಿ ಅಪೂರ್ವವಾದ ಬ್ರಹ್ಮಾನುಭವ ಉಪನಿಷತ್ತಿನ ಪಠ್ಯ ಇವು ಈ

ಕೃತಿಯಲ್ಲಿವೆ. ಈ ಉಪನಿಷತ್ತುಗಳು ನಿಗೂಢವಾದವು. ಆದರೂ ಮಾನವಮತಿಗೆ ನಿಲುಕಬಹುದಾದ ಅತ್ಯುನ್ನತ ಸತ್ಯಗಳನ್ನು ಅವು ನಿರೂಪಿಸುತ್ತವೆ.

ಬಾಬಾ ಅವರು ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿ ಪ್ರೌಢಶಾಲೆಯ ಐದನೆಯ ಫಾರಂ ಕೂಡ ಪೂರ್ತಿ ಮಾಡಲಿಲ್ಲ. ಅವರು ಗ್ರಂಥಗಳನ್ನು ಓದಲಿಲ್ಲ, ಯಾವ ಉಪಾಧ್ಯಾಯರಿಂದಲೂ ಕಲಿಯಲಿಲ್ಲ. ಅವರೇ ಜ್ಞಾನದ ಸಾಕಾರ ಮೂರ್ತಿ. ಅವರು ಕವಿ, ಪಂಡಿತ, ಭಾಷಾತಜ್ಞ, ಶಿಕ್ಷಣ ತಜ್ಞ, ಕಲಾವಿದ, ಅನುಭವಿ - ಈ ಎಲ್ಲಾ ಕ್ಷೇತ್ರಗಳಲ್ಲೂ ಅಗ್ರಮಾನ್ಯ, ಅತಿ ಶ್ರೇಷ್ಠ. ತಮ್ಮ ದಿವ್ಯೋಪನ್ಯಾಸಗಳಲ್ಲಿ ಅವರು ಧಾರಾಳವಾಗಿ ಕುರಾನಿನಿಂದ, ಬೈಬಲಿನಿಂದ, ಸೂಫಿ ಪದ್ಯಗಳಿಂದ, ಸಾಕ್ರಟೀಸ್‌ನ ಸಂಭಾಷಣೆಗಳಿಂದ, ಜಾನ್ಸನ್ನನ ಉಕ್ತಿಗಳಿಂದ, ಹರ್ಬರ್ಟ್ ಸ್ಪೆನ್ಸರ್, ಕ್ಯಾಂಟ್, ಕಾರ್ಲ್ ಮಾರ್ಕ್ಸ್ ಇವರ ತತ್ವಗಳಿಂದ ಪ್ರಾಚೀನ ಸಂಸ್ಕೃತಿಗಳ ಪುರಾಣಗಳು, ದಂತಕತೆಗಳಿಂದ ಉದ್ಧರಿಸುತ್ತಾರೆ. ಉಪನಿಷತ್ತುಗಳಿಂದ ಉದ್ಧರಿಸಿ ಋಷಿವಾಣಿಗೆ ನೂತನ ಅರ್ಥವನ್ನು ತೆರೆದು ತೋರಿಸುತ್ತಾರೆ. ಬಹಳಕಾಲದಿಂದ ಶುಷ್ಕ ಪಾಂಡಿತ್ಯವಷ್ಟಕ್ಕೇ ಸೀಮಿತಗೊಂಡಿದ್ದ ವಿದ್ವಾಂಸರಿಗೆ ಆಶ್ಚರ್ಯವಾಗುತ್ತದೆ.

ಬೃಂದಾವನದಲ್ಲಿ ಐದು ಸಾವಿರಕ್ಕಿಂತಲೂ ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳನ್ನು ವಿದ್ವಾಂಸರನ್ನು ಕುರಿತು ಹದಿನೈದು ದಿನ ಸಂಜೆ ವೈದಿಕ ಶಬ್ದ ಬ್ರಹ್ಮನ್ ಎಂಬುದನ್ನು ಕುರಿತು ಅದ್ಭುತವಾಗಿ ನಿರರ್ಗಳವಾಗಿ ವಿಶ್ಲೇಷಣೆ ಮಾಡಿ ಎಲ್ಲರನ್ನೂ ಮೂಕ ವಿಸ್ಮಯಗೊಳಿಸಿದರು. ಬ್ರಹ್ಮನ್ ಎಂದರೆ, 'ಜ್ಞಾನವಾಹಿನಿ'ಯಲ್ಲಿ ಬಾಬಾ ಬರೆದಿರುವ ಹಾಗೆ 'ದೊಡ್ಡದು, ವಿಸ್ತಾರವಾದದ್ದು, ಸ್ಥೂಲವಾದದ್ದು, ಉನ್ನತವಾದದ್ದು' ಎಂದರ್ಥ. ಅದು ಬಂದಿರುವುದು ಬೃಹತ್ ಎಂಬ ಧಾತುವಿನಿಂದ. ಆ ಮಹತ್ವ ಪೂರ್ಣವಾದ ಶಬ್ದಕ್ಕೆ ಸಿಕ್ಕಿಕೊಂಡಿದ್ದ ಅಸಂಗತಗಳ, ಮಿಥ್ಯಾ ಕಲ್ಪನೆಗಳ ಗೋಜಲನ್ನು ಜಾಗರೂಕತೆಯಿಂದ ಬಿಡಿಸಿದರು. ಬೇರಿನಿಂದ ಅತಿ ಎತ್ತರದ ಕೊಂಬೆಯವರೆಗೆ, ತುತ್ತತುದಿಯ ಎಳೆ ಕಡ್ಡಿಯವರೆಗೆ ಆ ಪದದ ಎಳೆ ಎಳೆಯನ್ನು ಬಿಡಿಸಿ ನೋಡಿದರು. ಕಾಲದ ಅಂಗಳದಲ್ಲಿ ಉರುಳುತ್ತಾ ಬಂದಂತೆ ಆ ಪದದ ಮೇಲೆ ದಟ್ಟವಾಗಿ ಕುಳಿತುಕೊಂಡ ತಪ್ಪು ಅರ್ಥಗಳ ಧೂಳನ್ನು ಕಸವನ್ನು ತೆಗೆದು ಹಾಕುವ ಸಲುವಾಗಿ ವೇದ ಪಾಠಗಳ ಮೂಲೆ ಮೂಲೆಯನ್ನೂ ತಡಕಿ ಸೂರೆಗೈದರು. ಇದಾದ ನಂತರ ಮತ್ತೆ ಹದಿನೈದು ದಿನ ಇನ್ನೊಂದು ವೈದಿಕ ಪದ ಭಾರತ ಎಂಬುದನ್ನು ಕುರಿತು ಮಾತನಾಡಿದರು. ಆ ಪದದ ಮೂಲ, ಜನರ ನಡುವೆ ಹಾಗೂ ಕೃತಿಗಳ ಮೂಲಕ ಆ ಪದವು ನೆಲೆಗೊಂಡ ರೀತಿ ಇವನ್ನು ವಿಸ್ತರಿಸಿದರು. ವೈದಿಕ ಆದರ್ಶಗಳ ಆಚರಣೆಯನ್ನು ಪುನರುಜ್ಜೀವಗೊಳಿಸಲು ವೇದಾಧ್ಯಯನ ಮತ್ತು ಸಂಶೋಧನೆಯನ್ನು ಅಧಿಕಗೊಳಿಸುವುದು ತಮ್ಮ ಮಾನವ ಪುನರ್ವಸತೀಕರಣ ಯೋಜನೆಯಲ್ಲಿ ಒಂದು ಅಂಶವಾಗಿದೆ ಎಂದು ಒಂದಲ್ಲ, ಹಲವು ಸಾರಿ ಬಾಬಾ ಹೇಳಿದ್ದಾರೆ.

## ಉಪನಿಷತ್ ವಾಹಿನಿ

ವೇದಾಂತದ ಉನ್ನತಿಕೆಯನ್ನು ಜಗತ್ತಿನ ಗಮನಕ್ಕೆ ತರಲು ಬಾಬಾ ಉಪನಿಷತ್ತುಗಳನ್ನು ಕುರಿತು ಒಂದು ಸಣ್ಣ ಪುಸ್ತಕವನ್ನು ಹೊರತರಲು ನಿರ್ಧರಿಸಿದರು. ಈ ಪುಸ್ತಕದ ಅಧ್ಯಾಯಗಳನ್ನು

ಧಾರಾವಾಹಿಯಾಗಿ ಪ್ರಕಟಿಸಿದ ಪತ್ರಿಕೆಯ ಸಂಪಾದಕನಾಗಿ ಒಂದು ಇಡೀ ವರ್ಷ ನನಗೆ ಅಪೂರ್ವವಾದ ಅನುಭವವಾಯಿತು. ತಿಂಗಳ 16ನೆಯ ತಾರೀಕು ಪತ್ರಿಕೆಯನ್ನು ರವಾನೆ ಮಾಡಿದ ನಂತರ ಮುಂದಿನ ಭಾಗದ ಹಸ್ತಪ್ರತಿ ಪಡೆಯಲು ಬಾಬಾ ಅವರ ಬಳಿಗೆ ಹೋಗುತ್ತಿದ್ದೆ. ಉಪನಿಷತ್ತಿನ ಹೆಸರನ್ನು ತಾವೇ ಹೇಳಿ, ನನಗೆ ತಮ್ಮ ಕೊಠಡಿಯಲ್ಲಿ ಸ್ವಲ್ಪ ಕಾದಿರುವಂತೆ ಸೂಚಿಸಿ ಕೈಯಲ್ಲೊಂದು ಪೆನ್ನು ಮತ್ತು ನೋಟ್ ಬುಕ್ ಹಿಡಿದುಕೊಂಡು ವರಾಂಡಾದಲ್ಲಿ ನಡೆದು ಎದುರಿನ ಕೊಠಡಿಗೆ ಹೋಗುತ್ತಿದ್ದರು. ಅಲ್ಲಿ ಒಂದು ಕುರ್ಚಿ ಒಂದು ಮೇಜು ಬಿಟ್ಟರೆ ಬೇರೇನೂ ಇರಲಿಲ್ಲ. ಒಮ್ಮೆ ಬೃಹದಾರಣ್ಯಕ ಉಪನಿಷತ್ತಿನ ಸರದಿ. ಅದನ್ನು ಸಂಗ್ರಹಿಸಿ, ಸರಳೀಕರಿಸಿ ಹೇಳಬೇಕಾಗಿತ್ತು. ದಶೋಪನಿಷತ್ತುಗಳಲ್ಲಿ ಅದು ಅತ್ಯಂತ ದೊಡ್ಡದು ಮತ್ತು ಅತ್ಯಂತ ಗಹನವಾದದ್ದು. ಬಾಬಾ ಅದನ್ನು ಎಂದೂ ಓದಿರಲಿಲ್ಲ ಎಂಬುದನ್ನು ನಾನು ಬಲ್ಲೆ, ಅಥವಾ ಅದನ್ನು ಕುರಿತು ಮಾತನಾಡಬಲ್ಲವರ ಸಲಹೆಯನ್ನೂ ಅವರು ಪಡೆದಿರಲಿಲ್ಲ. ಸುತ್ತಮುತ್ತ ಹಲವು ಮೈಲುಗಳವರೆಗೆ ಅದರ ಒಂದು ಪ್ರತಿ ಕೂಡ ಲಭ್ಯವಿರಲಿಲ್ಲ. ಆದರೂ ನಲವತ್ತು ನಿಮಿಷಗಳ ನಂತರ ಪೆನ್ನು, ನೋಟ್‌ಬುಕ್ ಹಿಡಿದುಕೊಂಡು ಅವರು ಕೊಠಡಿಯಿಂದ ಹೊರಬಂದರು. ಈ ಉಪನಿಷತ್ತಿನಲ್ಲಿ ಅಡಕವಾಗಿರುವ ಮಹಾಸತ್ಯಗಳನ್ನು ಕುರಿತ ಹತ್ತು ಪುಟಗಳ ಒಂದು ವಿದ್ವತ್ ಲೇಖನದ ಹಸ್ತಪ್ರತಿ ಹಿಡಿದುಕೊಂಡು ಅವರ ಕೊಠಡಿಯಿಂದ ಹದಿನೆಂಟು ಮೆಟ್ಟಲುಗಳನ್ನಿಳಿದು ಕೆಳಗೆ ಬಂದೆ. ಮುದ್ರಣಾಲಯದ ಕಡೆಗೆ ಹೋಗುತ್ತಾ ಹಸ್ತಪ್ರತಿಯೊಳಗೆ ಇಣುಕಿ ನೋಡಿದೆ. ತೆಲುಗು ಪದಗಳ ಮೇಲೆ ನನ್ನ ದೃಷ್ಟಿ ಬಿತ್ತು. "ಋಷಿ ಯಾಜ್ಞವಲ್ಕ್ಯರ ಭವ್ಯ ಪ್ರತಿಭೆಯು ಈ ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತದೆ ಎಂದು ನನ್ನಲ್ಲಿ ನಾನೇ ಹೇಳಿಕೊಂಡೆ: "ಸರ್ವಜ್ಞ ಗುರು ಬಾಬಾ ಅವರ ಭವ್ಯ ಪ್ರತಿಭೆ ಇಂದು ನನಗೆ ಮನವರಿಕೆಯಾಗಿದೆ."

ವೈದಿಕ ಸಾಹಿತ್ಯವನ್ನು ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡ ಎಂದು ಮೂರು ವರ್ಗವಾಗಿ ವಿಂಗಡಿಸಿದ್ದಾರೆ. ಉಪನಿಷತ್ತುಗಳು ಮೂರನೆಯ ವರ್ಗಕ್ಕೆ ಸೇರುತ್ತವೆ. ಆದರೆ ಬಾಬಾ ಹೇಳುವುದು, ಪ್ರತಿಯೊಂದು ಮುಖ್ಯ ಉಪನಿಷತ್ತೂ ಈ ಮೂರನ್ನೂ ಒಳಗೊಂಡಿದೆ ಎಂದು. ಆದ್ದರಿಂದ ಎಲ್ಲ ಬಗೆಯ ಸಾಧಕರಿಗೂ ಅದು ಬೋಧಪ್ರದವಾಗಿದೆ. ಹೆಚ್ಚಿನವುಗಳಲ್ಲಿ ವಿಶಿಷ್ಟವಾದ ಧಾರ್ಮಿಕವಿಧಿಗಳನ್ನು ಹೇಳಿರುವುದರ ಜೊತೆಗೆ ಗುರುಗಳು ಮತ್ತು ದೇವತೆಗಳ ಪ್ರಶಂಸೆ, ಸ್ತುತಿಗಳೂ ಇವೆ. ಭಗವಂತನು ಮನುಷ್ಯನಿಗೆ ಪಿಸುಗುಟ್ಟಿದ ಮಾತುಗಳು ಉಪನಿಷತ್ತುಗಳಲ್ಲಿವೆ ಎನ್ನುತ್ತಾರೆ ಬಾಬಾ. ಶಂಕರ ಮತ್ತು ಇತರ ವಿದ್ವಾಂಸರು ವಿವರವಾದ ಭಾಷ್ಯಗಳನ್ನು ಬರೆದಿರುವ ಸುಮಾರು ಹತ್ತು ಉಪನಿಷತ್ತುಗಳ ಬಗೆಗೆ ಅವರ ಮಾತು: ಈ ಹತ್ತರಿಂದ ಮಾನವ ಜನಾಂಗವು ಪ್ರಯೋಜನ ಪಡೆಯಬಹುದು, ಇಲ್ಲವೆ ಕೈಬಿಟ್ಟು ನಷ್ಟ ಮಾಡಿಕೊಳ್ಳಬಹುದು. ... ಅವು ಮಾನವ ಚಿಂತನೆಯ, ಅನುಭವದ, ಅಶೋತ್ತರಗಳ ಅತ್ಯುನ್ನತ ಸ್ಥಿತಿಯ ಸಮ್ಮಿಶರಣ. ಮಾನವ ಪರಿಪೂರ್ಣತೆಯ ಸಾಧ್ಯತೆಯನ್ನು ಅವು ಸ್ಥಿರಪಡಿಸುತ್ತವೆ. ಇಂದು ಮಾನವನು ಯಾವ ಮುಸುಕು ಧರಿಸಿ ಸಂತೋಷ ಪಡುತ್ತಿದ್ದಾನೋ ಆ ಮಾಯೆಯ ಮುಸುಕು ತೆಗೆದು ಬಿಸುಟರೆ ಮಾತ್ರ ತಾನೂ ವಾಸ್ತವದಲ್ಲಿ ಭಗವಂತನೆ ಎಂಬ ಅರಿವನ್ನು ಅವನು ಪಡೆಯುವುದು ಸಾಧ್ಯ ಎಂಬುದನ್ನು ಅವು ಘೋಷಿಸುತ್ತವೆ.

# ಮತ್ತೆ ಹೇಳಿದ ಗೀತೆ

ಆಧುನಿಕ ಮಾನವನನ್ನು ಅಹಂಕಾರ ತುಂಬಿದ ಭೌತವಾದವೆಂಬ ದೃಷ್ಟಿದೋಷದಿಂದ ರಕ್ಷಿಸುವ ಸಲುವಾಗಿ ಬಾಬಾ ಭಗವದ್ಗೀತೆಯನ್ನು ಮತ್ತೆ ಹೇಳಿದ್ದಾರೆ. ಅದೇ 'ಗೀತಾ ವಾಹಿನಿ' ತಾವು ಅವತರಿಸಿರುವುದು, ಮಾನವನ ಪವಿತ್ರ ಆಕಾಂಕ್ಷೆ ಅಭೀಪ್ಸೆಗಳನ್ನು ಒಟ್ಟುಗೂಡಿಸಲು, ಸ್ಪಷ್ಟಪಡಿಸಲು, ಫಲ ನೀಡಲು ಮತ್ತು ಜೋಪಾನವಾಗಿ ರಕ್ಷಿಸಲು ಎಂದು ಹೇಳಿದ್ದಾರೆ. ನಮ್ಮ ಹೊರ ಮತ್ತು ಒಳ ಬಂಧು ಬಾಂಧವರೊಡನೆ ಕುರುಕ್ಷೇತ್ರ ಕದನದಲ್ಲಿ ತೊಡಗಿರುವಾಗ ಅನೇಕ ಬಗೆಯ ಸಂದೇಹಗಳು, ಮಿಥ್ಯಾಭ್ರಮೆಗಳು ನಮ್ಮನ್ನು ಕಾಡುತ್ತವೆ. ಅವುಗಳನ್ನು ಪ್ರೇಮದಿಂದ ಸಹಾನುಭೂತಿಯಿಂದ ಸಾಯಿಕೃಷ್ಣನು ಎದುರಿಸಿ ಉತ್ತರ ನೀಡಿದ್ದಾನೆ.

ಒಮ್ಮೆ ಒರಿಸ್ಸಾ ರಾಜ್ಯದ ಸಂಸ್ಕೃತ ಪಾಠಶಾಲೆಗಳ ನಿವೃತ್ತ ಇನ್ಸ್‌ಪೆಕ್ಟರ್ ಆಗಿದ್ದ ಎಂಬತ್ತು ವರ್ಷದ ವೃದ್ಧ ಪಂಡಿತರೊಬ್ಬರು ಪುರಿಯಲ್ಲಿ ತಾವು ಕಟ್ಟಿಸಿದ್ದ ಗೀತಾ ಮಂದಿರಕ್ಕೆ ನನ್ನನ್ನು ಕರೆದುಕೊಂಡು ಹೋದರು. ತಾವು ಅದುವರೆಗೆ ಗಳಿಸಿದ್ದೆಲ್ಲವನ್ನೂ ಈ ಮಂದಿರದ ನಿರ್ಮಾಣಕ್ಕೆ ಅವರು ವ್ಯಯಿಸಿದರು. ಈ ದೇವಾಲಯವು ಒಂದು ಭವ್ಯವಾದ ರಥದ ಆಕಾರದಲ್ಲಿದೆ. ಇಪ್ಪತ್ತು ಅಡಿಗಳಿಂತಲೂ ಎತ್ತರವಾದ, ಚಕ್ರಗಳು, ಕುದುರೆಗಳು ಎಲ್ಲವೂ ಜೋಡಣೆಗೊಂಡು ಪೂರ್ಣವಾಗಿದೆ. ಕಣ್ಣಿನಲ್ಲಿ ಹೊಳಪು ಸೂಸುತ್ತಾ, ನಡುಗುವ ದನಿಯಲ್ಲಿ ಅವರು ರಥದ ಸುತ್ತೂಲು ಕೆತ್ತಿಸಿದ್ದ ಸಂಕೇತಗಳನ್ನು ವಿವರಿಸಿದರು. ಅವು ಸಾಧನೆಯ ವಿವಿಧ ಹಂತಗಳನ್ನು, ಆಧ್ಯಾತ್ಮಿಕ ಸಿದ್ಧಿಯ ವಿವಿಧ ಅವಸ್ಥೆಗಳನ್ನು ನಿರೂಪಿಸುತ್ತಿದ್ದುವು. ರಥದ ಮೇಲೆ ಸ್ಥಾಪಿಸಿದ ಸ್ತಂಭದ ತುದಿಯ ಧ್ವಜದಲ್ಲಿ ಹನುಮಂತನಿದ್ದನು. ರಥದ ಮುಂದೆ ನೆಲದ ಮೇಲೆ ನಿಂತು ತಲೆಯೆತ್ತಿ ನೋಡಿದಾಗ ನಿಜವಾಗಿ ಇಬ್ಬರು ವ್ಯಕ್ತಿಗಳು ಕುಳಿತಿದ್ದಂತೆ ಕಂಡೆ. ಭಗವಂತ ಮತ್ತು ಆಗತಾನೆ ಮೋಹದಿಂದ ಮೈ ತಿಳಿಯುತ್ತಿದ್ದ ಅವನ ಶಿಷ್ಯ! ನನಗೆ ಮೈ ಜುಮ್ಮೆಂದಿತು. ಇಂಥದೊಂದು ಪ್ರಭಾವವನ್ನು ನಾನು ನಿರೀಕ್ಷಿಸಿರಲಿಲ್ಲ. ಸಂದೇಹ ಶೀಲವೂ ಮ್ಲಾನವೂ ಆಗಿದ್ದ ಶಿಷ್ಯನ ಮುಖದಲ್ಲಿ ಮೋಹಕವಾದ ಮಂದಹಾಸವನ್ನು ನಾನು ಕಂಡೆ. ಅರ್ಜುನನ ಕಡೆಗೆ, ಅವನನ್ನು ಬಳಿ ಸೆಳೆದುಕೊಳ್ಳಲೋ ಎಂಬಂತೆ ಪ್ರೀತಿಯಿಂದ ಕೈ ಚಾಚಿದನು. ಆ ಕೈಯಲ್ಲಿ ಗ್ರಂಥಗಳಲ್ಲಿ ಅತಿ ಶ್ರೇಷ್ಠ ಗ್ರಂಥವಾದ, ಭಗವಾನ್ ಶ್ರೀ ಸತ್ಯಸಾಯಿ ಬಾಬಾ ಅವರ 'ಗೀತಾ ವಾಹಿನಿ'ಯ ಒಂದು ಪ್ರತಿ! ಸಾಯಿಕೃಷ್ಣನು ಅರ್ಜುನನನ್ನು ಸಾಂತ್ವನಗೊಳಿಸುತ್ತಿದ್ದನು, ಒಲಿಸುತ್ತಿದ್ದನು, ಒಪ್ಪಿಸುತ್ತಿದ್ದನು. ಬಾಬಾ ಅವರ ಗೀತಾವಾಹಿನಿಯು ಒಂದು ಹೊತ್ತು ಕಳೆಯುವ ರಂಜನೆಯಲ್ಲ, ಕೇವಲ ಒಂದು ಭಾಷ್ಯವಲ್ಲ ಅಥವಾ ಗೀತೆಯ ಸಂಗ್ರಹವಲ್ಲ ಎಂದು ಆ ಪಂಡಿತರಿಗೆ ತಿಳಿದಿತ್ತು. ಸ್ವಾರ್ಥ, ಮತ್ಸರಗಳ ಸಂಘರ್ಷವನ್ನು ಮೀರಿ, ಹೆಚ್ಚು ಅರ್ಹವೂ, ಸಮಯೋಚಿತವೂ ಆದ ವಿಜಯಗಳನ್ನು ಸಾಧಿಸುವಂತೆ ಕೃಷ್ಣನೇ ಕರೆ ನೀಡುತ್ತಿದ್ದನು.

'ಗೀತಾ ವಾಹಿನಿ'ಯಲ್ಲಿ ಅರ್ಜುನನ ಹೃದಯದಲ್ಲಿ ಮೂಡಿಸುವ ಪ್ರಾರ್ಥನೆಯನ್ನು ಬಾಬಾ

ಅವರಿಗೆ ಅರ್ಪಿಸಬೇಕೆನ್ನಿಸುತ್ತದೆ: ಈ ರಥವನ್ನು ನಡೆಸುತ್ತಿರುವ ಹಾಗೆಯೇ ನನ್ನನ್ನೂ ಸರಿಯಾದ ದಾರಿಯಲ್ಲಿ ನಡೆಸಿ ಅನುಗ್ರಹಿಸು. ಏಕೆಂದರೆ ಪ್ರತಿಯೊಬ್ಬರ ಅಂತರಂಗದಲ್ಲೂ ಸ್ಥಾಪಿತನಾಗಿರುವ ಸಾರಥಿ ಅವನು. ಬಾಬಾ ವ್ಯಾಖ್ಯಾನಿಸಿರುವ ಗೀತೆ ಒಂದು ಯೋಗ ಶಾಸ್ತ್ರ ಹಾಗೂ ಸಾಧನೆಗೆ ಕೈಪಿಡಿ. ಯೋಗಶಾಸ್ತ್ರ ಮತ್ತು ಬ್ರಹ್ಮವಿದ್ಯೆಗಳೆರಡೂ ಒಂದಾಗಿರುವುದು. ಉಪಮೆಯಿಂದ-ಕತೆಯಿಂದ, ಮೂದಲೆಯಿಂದ- ನಗೆಯಿಂದ ಛೇಡಿಕೆಯಿಂದ- ಖಂಡನೆಯಿಂದ, ಪ್ರಶ್ನೆಯಿಂದ- ಪ್ರತಿಪ್ರಶ್ನೆಯಿಂದ ಬಾಬಾ ಜ್ಞಾನದ ಅಮೃತವನ್ನು ಹರಿಸಿದ್ದಾರೆ.

ಮನಸ್ಸನ್ನೂ ಅದರ ಚಂಚಲತೆಯನ್ನೂ ಅಭ್ಯಾಸ ಮತ್ತು ವೈರಾಗ್ಯಗಳಿಂದ ಪಳಗಿಸಬಹುದು ಎಂದು ಕುರುಕ್ಷೇತ್ರದಲ್ಲಿ ಕೃಷ್ಣನು ಹೇಳಿದನು. 'ಗೀತಾ ವಾಹಿನಿ'ಯಲ್ಲಿ ಸಾಯಿಕೃಷ್ಣನು ಇದಕ್ಕೆ ವಿಚಾರವನ್ನೂ ಸೇರಿಸುತ್ತಾರೆ. ಕ್ಷೇತ್ರ, ಯಜ್ಞ, ಯೋಗ, ಮಾಯೆ ಮೊದಲಾದ ಪರಿಕಲ್ಪನೆಗಳನ್ನು ವಿಶ್ಲೇಷಣೆ ಮಾಡಿ, ಪ್ರಾಚೀನ ಆಚಾರ್ಯರು ಬೆಳಕು ಚೆಲ್ಲಿರದಿದ್ದ ಮೂಲೆ ಮೊಡಕುಗಳನ್ನೂ ಬೆಳಗುತ್ತಾರೆ. ನಿಷ್ಕಾಮ ಕರ್ಮ ಎನ್ನುವ ಆದರ್ಶವನ್ನು ಕರ್ಮಫಲ ತ್ಯಾಗ, ವಿಜಯ ಹಾಗೂ ವೈಫಲ್ಯಗಳಿಂದ ಪ್ರಜ್ಞಾಪೂರ್ವಕವಾಗಿ ವಿಮುಖನಾಗುವ ಧೈರ್ಯ ಎಂದು ವಿವರಿಸಿ ಅದನ್ನೊಂದು ವೀರೋಚಿತ ಕ್ರಿಯೆಯಾಗಿಸಿ ಅದಕ್ಕೆ ಹೊಸ ಹೊಳಪು ಕೊಡುತ್ತಾರೆ.

## ಆತ್ಮ ಸಾಕ್ಷಾತ್ಕಾರ

'ಗೀತಾ ವಾಹಿನಿ'ಯಲ್ಲಿ ಬಾಬಾ ಅವರ ಆತ್ಮ ಸಾಕ್ಷಾತ್ಕಾರದ ಹಲವು ಉಕ್ತಿಗಳು ಬರುತ್ತವೆ. ನಮ್ಮೊಂದಿಗೆ ಆ ಮಾತುಗಳನ್ನಾಡುತ್ತಿರುವವರು ಯಾರು, ಕೃಷ್ಣನೋ ಸಾಯಿಯೋ ಎಂಬುದನ್ನು ನಿರ್ಧರಿಸುವುದು ಕಷ್ಟವಾಗುತ್ತದೆ. ಯಾರು ಎಂದೂ ನನ್ನನ್ನು ಮರೆಯುವುದಿಲ್ಲವೋ ಅವರನ್ನು ನಾನು ಹೇಗೆ ತಾನೇ ಮರೆಯಬಲ್ಲೆ? ಎಂಬುದು ಪ್ರಶ್ನೆ. ಮರೆಯುವುದು ಮಾನವನ ದೌರ್ಬಲ್ಯ. ನಾನು ಹೇಳುತ್ತೇನೆ ಕೇಳು: ಯೋಗವಾಗಲಿ, ತಪಸ್ಸಾಗಲಿ, ಕೊನೆಗೆ ಜ್ಞಾನವಾಗಲಿ ಅವಶ್ಯಕವಲ್ಲ. ನಿನ್ನ ಮನಸ್ಸನ್ನು ನನ್ನ ಮೇಲೆ ನೆಲೆಗೊಳಿಸು, ಅಷ್ಟು ಸಾಕು. ಅದನ್ನು ಪೂರ್ತಿಯಾಗಿ ನನಗೆ ಅರ್ಪಿಸಿ ಬಿಡು. ಅದಷ್ಟನ್ನೇ ನಾನು ಕೇಳುವುದು, ನೀನು ಮಾಡಬೇಕಾಗಿರುವುದೂ ಅದಷ್ಟನ್ನೇ.

ಇಂದು ಪ್ರತಿಯೊಬ್ಬ ಅರ್ಜುನನೂ ಪಡೆಯಲಾಶಿಸಬಹುದಾದ ಕೃಪೆಯ ಭರವಸೆ. ನಮಗೆ ತುಂಬ ನೋವಾದಾಗ, ತಳಮಳವಾದಾಗ ಕೃಪೆ ನಮ್ಮನ್ನು ಮೇಲೆತ್ತುತ್ತದೆ. ಅರ್ಥಶೂನ್ಯವಾದ ಬರಿದಾದ ಬದುಕಿನ ಕತ್ತಲು ಮೂಲೆಗಳಲ್ಲಿ ದಿಕ್ಕರಿಯದೆ ತೆವಳುತ್ತಿರುವಾಗ ನಮ್ಮ ಅಲಕ್ಷ್ಯ, ನಮ್ಮ ದೌರ್ಬಲ್ಯ, ನಮ್ಮ ವೈರ ಭಾವನೆ, ಒಟ್ಟಾರೆ ಸೂಕ್ತ ನಿರ್ದೇಶನದ ಮತ್ತು ಗಾಂಭೀರ್ಯದ ಕೊರತೆ ಅಪಾರವಾಗಿ ಬಾಳು ಬೇಸರಗೊಂಡಾಗ ಕೃಪೆ ಕೈ ಹಿಡಿಯುತ್ತದೆ. ಹೊಸ ಉಲ್ಲಾಸ ಚಿಮ್ಮಿಸುತ್ತದೆ. ವರ್ಷಗಳು ಉರುಳಿ, ನಿರೀಕ್ಷಿಸಿದ ಪರಿಪೂರ್ಣತೆ ಸಾಧಿತವಾಗದೆ ಹೋದಾಗ, ನೀರಸವಾದ ಒತ್ತಡಗಳು ಹಲವಾರು ದಶಕಗಳಿಂದ ನಮ್ಮನ್ನು ಆಳಿರುವಂತೆ ಈಗಲೂ ಮುಂದುವರಿದಾಗ, ನಿರಾಶೆಯು ಎಲ್ಲ

ಸಂತೋಷವನ್ನು ಸ್ಥೈರ್ಯವನ್ನೂ ನಾಶಮಾಡಿದಾಗ ದೈವ ಕೃಪೆಯು ನಮ್ಮನ್ನು ಕಾಯುತ್ತದೆ. ಆ ಕ್ಷಣದಲ್ಲಿ ಕೆಲವೊಮ್ಮೆ ನಮ್ಮಲ್ಲಿನ ಕಗ್ಗತ್ತಲನ್ನು ಸೀಳಿ ಬೆಳಕಿನ ತರಂಗವೊಂದು ಹಾಯುತ್ತದೆ. ಟಿಲ್ಲಿಚ್ ತನ್ನ 'ದಿ ನ್ಯೂ ಬೀಯಿಂಗ್' ಪುಸ್ತಕದಲ್ಲಿ ನಿನ್ನನ್ನು ಅಂಗೀಕರಿಸಿದ್ದೇನೆ ಎಂದು ವರ್ಣಿಸುವ ವಾಣಿಯಂತೆ ಅದು ಅಪ್ಯಾಯಮಾನವಾಗಿ ಬೀಸುತ್ತದೆ.

'ಗೀತಾ ವಾಹಿನಿ'ಯು ಧರ್ಮಾಂಧರಾದ, ಕಣ್ಣಡೆ ಕಟ್ಟಿಕೊಂಡ ಗುರುಗಳನ್ನೂ ಗೀತೆಯ ವ್ಯಾಖ್ಯಾನಕಾರನ್ನೂ ಖಂಡಿಸುತ್ತದೆ. ಅವರು ಗೀತೆ ಏನನ್ನೂ ಬೋಧಿಸುವುದೋ ಅದನ್ನು ಆಚರಣೆಯಲ್ಲಿ ತಾವೇ ತರುವುದಿಲ್ಲವಾದ್ದರಿಂದ ಅವರ ಮಾತು ಪೊಳ್ಳಾಗಿರುತ್ತದೆ.

ಭಾರತದ ಮಹಾಕಾವ್ಯ ಮಹಾಭಾರತದ ಕಿರೀಟದ ಮಧ್ಯಮಣಿ ಭಗವದ್ಗೀತೆ. ಭೌತಿಕ, ಮಾನಸಿಕ, ನೈತಿ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳ ಭವ್ಯ ವೀರ ಪರಾಕ್ರಮದ ಅತಿಸುಂದರ ನೆಯ್ಗೆಯ ಈ ಕುಸುರಿ ವಸ್ತ್ರವನ್ನು ವ್ಯಾಸ ಮಹರ್ಷಿ ನೆಯ್ದರು. ಅವರೇ ವೈದಿಕ ಮಂತ್ರಗಳನ್ನೂ ಆಚರಣೆಗಳನ್ನೂ ಸೂತ್ರೀಕರಿಸಿದ್ದರು. ಮೂಲಭೂತ ದಾರ್ಶನಿಕ ಸತ್ಯಗಳ ಸಾರವನ್ನು ಒಳಗೊಂಡು ಸೂತ್ರಗಳನ್ನು ರಚಿಸಿದರು. ವಿಶ್ವಕೋಶ ಸದೃಶ ವಿದ್ವತ್ತು. ಅದ್ಭುತವಾದ ರಚನ ಶೀಲ ಪ್ರತಿಭೆಗಳಿದ್ದರೂ ವ್ಯಾಸರು ಮನದಾಳದಲ್ಲಿ ಹುದುಗಿದ ಯಾವುದೋ ದುಃಖದಿಂದ ಮಿಡುಕುತ್ತಿದ್ದರು. ಅವರಿಗೆ ಶಾಂತಿಯಿರಲಿಲ್ಲ. ಆನಂದದ ಸಾಧನವು ಭಕ್ತಿ ಎಂದು ಸಾರಿದ ನಾರದರು, ಕೃಷ್ಣನಾಗಿ ಅವತರಿಸಿರುವ ಭಗವಂತನ ದಿವ್ಯ ಲೀಲೆಗಳನ್ನು ಬಣ್ಣಿಸಬೇಕೆಂದು ವ್ಯಾಸರಿಗೆ ಸೂಚನೆ ನೀಡಿದರು. ಈ ಸಲಹೆಯಂತೆ ವ್ಯಾಸರಿಂದ ಮೂಡಿ ಬಂದದ್ದೇ ಭಾಗವತ ಪುರಾಣ. ಬಾಬಾ ಅದನ್ನು ಅತ್ಯಂತ ಮಧುರವಾದ ರೀತಿಯಲ್ಲಿ ಅಡಕವಾಗಿರುವ ನಮಗೆ 'ಭಾಗವತ ವಾಹಿನಿ'ಯಾಗಿ ಮತ್ತೆ ನೀಡಿದ್ದಾರೆ.

## ಮರಣದ ದಂಡನೆ

ಬಾಬಾ ಅವರ 'ಭಾಗವತ ವಾಹಿನಿ'ಯ ಪುಸ್ತಕದ ಪುಟದಿಂದ ಹೃದಯಕ್ಕೆ ನೇರವಾಗಿ ಸ್ಪಷ್ಟವಾಗಿ ತಂಪಾಗಿ ಹರಿದು ಬರುತ್ತದೆ. 338 ಪುಟಗಳಿರುವ ಈ ಪುಸ್ತಕದ ಮೊದಲ 270 ಮತ್ತು ಅದರ ಕೊನೆಯ 90 ಪುಟಗಳು ಶ್ರೀ ಕೃಷ್ಣನ ಲೀಲೆಗಳಿಂದ ನಮ್ಮನ್ನು ರೋಮಾಂಚಗೊಳಿಸುತ್ತವೆ; ಮತ್ತು ಅವನ ಅನುಗ್ರಹವನ್ನು ಪಡೆದ ಭಕ್ತರ ಮಹಾತ್ಮೆಯನ್ನು ಬಣ್ಣಿಸುತ್ತವೆ. ಮಿಕ್ಕ ೮೦ ಪುಟಗಳು ವಿದ್ವತ್ತಿನ ಮಾನಕಗಳಿಗೆ ಹೊಂದುವ ಹಾಗೆ ವ್ಯಾಸರು ನಿರೂಪಿಸಿದ ತಾತ್ವಿಕ ಕ್ಷೇತ್ರವನ್ನು ನಿರೂಪಿಸುತ್ತವೆ. ಇದರ ಫಲವಾಗಿ, 'ಭಾಗವತ ವಾಹಿನಿ' ಕೇವಲ ಒಂದು ಪುಸ್ತಕವಾಗಿ ಉಳಿದಿಲ್ಲ; ಅದೊಂದು ಶಕ್ತಿದಾಯಕ ಟಾನಿಕ್; ನೋವು ಕಳೆಯುವ ಅಂಜನವಾಗಿದೆ. ಅದೊಂದು ಪವಿತ್ರ ಯಾತ್ರೆ; ಒಂದು ದಿವ್ಯ ಸಂಕೀರ್ತನೆ ಆಗಿದೆ. ಒಂದು ಕಹಳೆದನಿ, ಒಂದು ಹಾಯಿ ಬೆಳಕು ಆಗಿದೆ. ಅಲ್ಪಕ್ಕೆ ಅಂಟಿಕೊಂಡಿರುವ ನಮ್ಮನ್ನು ಬಂಧಮುಕ್ತಗೊಳಿಸಿ, ನಮ್ಮ ಮನಸ್ಸುಗಳ ಕ್ರೌರ್ಯವನ್ನು ಪಳಗಿಸುವಂತೆ ಬಾಬಾ ಅದನ್ನು ಯೋಜಿಸಿದ್ದಾರೆ. ಮಹರ್ಷಿ ವ್ಯಾಸರ ಪುತ್ರ ಶುಕನು ಪರೀಕ್ಷಿತ್ ರಾಜನಿಗೋಸ್ಕರವಾಗಿ

ಭಾಗವತವನ್ನು ಪ್ರವಚನ ಮಾಡಿದನು. .ಏಳನೆಯ ದಿನದ ಕೊನೆಗೆ ಸಾಯುವುದೆಂಬ ಶಾಪಕ್ಕೆ ರಾಜನು ಗುರಿಯಾಗಿದ್ದನು. ಭಾಗವತದ ಪ್ರವಚನವು ಏಳುದಿನಗಳನ್ನು ತೆಗೆದುಕೊಂಡಿತು. ರಾಜನು ಭವದ್ವೈಭವದ ಈ ನಿರೂಪಣೆಯನ್ನು ಮನಸ್ಸಿನಲ್ಲಿ ತುಂಬಿ ಕೊಂಡುದರಿಂದ ತುಟಿಗಳ ಮೇಲೆ ಭಗವನ್ನಾಮ, ಕಣ್ಣುಗಳೆದುರು ಭಗವದ್ರೂಪಗಳಿಂದ ಮೃತಿಯನ್ನೈದಿದನು. ನಮ್ಮಲ್ಲಿ ಒಬ್ಬೊಬ್ಬರೂ ಹಾಗೆ ಮರಣ ದಂಡನೆಯನ್ನು ಹೊತ್ತು ಬಂದಿದ್ದೇವೆ, ವ್ಯತ್ಯಾಸ ಇಷ್ಟೇ, ಮೃತ್ಯು ನಮ್ಮನ್ನು ಯಾವಾಗ ನುಂಗುತ್ತದೆಂದು ನಮಗೆ ಗೊತ್ತಿಲ್ಲ. ಮೃತ್ಯು ಭೀತಿಯನ್ನು ಯಾರು ಗೆಲ್ಲ ಬಯಸುವರೋ, ಜೀವನದ ಕಕ್ಷೆಯಿಂದಾಚೆಗೆ ನಗುನಗುತ್ತಾ, ಸದಾಶಯಗಳನ್ನು ಹೊತ್ತು ಹೋಗಲು ಯಾರು ಬಯಸುವರೋ ಅವರೆಲ್ಲರನ್ನೂ 'ಭಾಗವತ ವಾಹಿನಿ'ಯು ಸಂರಕ್ಷಿಸುತ್ತದೆ.

## ಹಿಂದಿನ ನೆನಪು

ಬಾಬಾ ಅವರ ಲೇಖನಿಯಿಂದ ಈಚೆಗೆ ಮೂಡಿ ಬಂದ ವಾಹಿನಿ ರಾಮನಕತೆಯ ರಮ್ಯ ನಿರೂಪಣೆ 'ರಾಮಕಥಾರಸವಾಹಿನಿ' ಆ ಅದೇ ರಾಮನೇ ತಾವು, ತಮ್ಮ ಆಗಿನ ಅನುಯಾಯಿಗಳ ಮೂಲಕವಾಗಿ ಉದ್ದೇಶ ಸಾಧನೆ ಮಾಡಲು ಬಂದಿದ್ದೇನೆ ಎಂಬುದಾಗಿ ಬಾಬಾ ಪ್ರಕಟಿಸಿದ್ದಾರೆ. ಅವರ ಪ್ರೇಮದಿಂದ ಆಕರ್ಷಿತರಾಗಿ ನಾವು ಮಾನವನ ಪುನರ್ನಿರ್ಮಾಣ ಕಾರ್ಯದಲ್ಲಿ ಸ್ವಲ್ಪವಾದರೂ ಹಂಚಿಕೊಳ್ಳುವ ಸುಯೋಗವನ್ನು ಪಡೆದಿದ್ದೇವೆ.

ರಾಮನಾಗಿ ತಮ್ಮ ಜೀವನದ ಘಟನೆಗಳನ್ನು ಮೆಲುಕು ಹಾಕುತ್ತಾ ಬಾಬಾ ತಮ್ಮ ಕಥನದಲ್ಲಿ ವಾಲ್ಮೀಕಿ ಕಲ್ಪಿಸಿರದ, ಅಥವಾ ಇತ್ತೀಚಿನ ಯಾವುದೇ ಲೇಖಕನು ಸೇರಿಸಿರದ ಕೆಲವು ಸಂಭಾಷಣಾ ವಿವರಗಳನ್ನೂ ಮಾರ್ಪಾಟುಗಳನ್ನೂ ಮಾಡಿದ್ದಾರೆ. ರಾಮಾಯಣಾಭ್ಯಾಸಿಗಳನ್ನು ಬಹುಕಾಲದಿಂದ ಬಿಡದೆ ಕಾಡಿರುವ ಕೆಲವು ತೆರಪುಗಳನ್ನೂ, ಕೊರತೆಗಳನ್ನೂ ಅವರು ಕೂಡಿಸುತ್ತಾರೆ ಮತ್ತು ಉಲ್ಲೇಖಿಸುತ್ತಾರೆ. ರಾಮನನ್ನು ಒಬ್ಬ ಐತಿಹಾಸಿಕ ರಾಜಕುಮಾರನೆಂದು ಪರಿಗಣಿಸಬೇಕೆ, ಭಗವದವತಾರವೆಂದು ಭಾವಿಸಬೇಕೆ ಎಂಬ ಚರ್ಚೆಗೆ ಬಾಬಾ ಕೊನೆಯ ಮಾತು ಹೇಳಿಬಿಟ್ಟಿದ್ದಾರೆ. ನಿಜವಾಗಿ 'ರಾಮಕಥಾರಸ ವಾಹಿನಿ' ಕಾವ್ಯಾಮೃತವೇ ಸರಿ.

## ಅವರ ಪತ್ರಗಳು

ಕಷ್ಟದಿಂದ ತೊಳಲುವವರಿಗೆ ಸಂದೇಹಗಳಿಂದ ಪೀಡಿತರಾದವರಿಗೆ ಅವತಾರ ಪುರುಷನ ಲೇಖನಿಯು ಪತ್ರಗಳನ್ನೂ ಬರೆಯುತ್ತದೆ. ಈ ಪತ್ರಗಳು ಹಾಗೆ ನೊಂದವರ ಹೃದಯಗಳಿಗೆ ಪ್ರೇಮವನ್ನೂ, ಕರುಣೆಯನ್ನೂ ಹೊತ್ತು ತರುತ್ತವೆ. ಅಲ್ಲಿ ಆಗಿರುವ.ಗಾಯವನ್ನು ಮಾಯಿಸುತ್ತವೆ. ತಪ್ಪದೆ, ಅವು ಆಧ್ಯಾತ್ಮಿಕ ತೃಷೆಯ ಚಿಲುಮೆಗಳನ್ನು ಚಿಮ್ಮಿಸುತ್ತವೆ, ಪ್ರೇಮವನ್ನು ಬೆಳೆಸಿಕೊಳ್ಳಲು ನೆರವಾಗುತ್ತವೆ.

ಅವರು ಶಿಕ್ಷಕನಾಗಿ ಪಾತ್ರ ನಿರ್ವಹಿಸಲು ಯಾವ ಸಂದರ್ಭವೂ ಅವರಿಗೆ ಚಿಕ್ಕದಲ್ಲ ಅಥವಾ ಅತಿ ದೊಡ್ಡದಲ್ಲ. ಮದುವೆ ಮಾಡಿಕೊಂಡ ನೂತನ ದಂಪತಿಗಳಿಗೆ ಬರೆಯುತ್ತಾ ಅವರು ಹೇಳುತ್ತಾರೆ "ನೀವು ಈಗ ಒಂದುಗೂಡುತ್ತಿರುವ ಹುಡುಗ ಮತ್ತು ಹುಡುಗಿ, ಮಾತ್ರವಲ್ಲ, ನೀವು ಶಿವ- ಶಕ್ತಿ, ನಾನಿರುವ ಹಾಗೆಯೇ ಒಂದೇ ದೇಹದ ಬಲ ಮತ್ತು ಎಡಭಾಗಗಳು. ನಿಮಗೆ ಎಂದೆಂದೂ ಆನಂದ ಮತ್ತು ಸಂತೃಪ್ತಿಯಿರಲಿ; ಆನಂದೋನ್ಮಾದದ ತರಂಗಗಳ ಮೇಲೆ ನೀವು ಒಂದಾಗಿ ತೇಲಿರಿ; ಸ್ಥೈರ್ಯ ಮತ್ತು ಆತ್ಮವಿಶ್ವಾಸಗಳೆಂಬ ಹಗ್ಗ ಕಟ್ಟಿದ ಶ್ರದ್ಧೆಯೆಂಬ ಪುಷ್ಪಾಲಂಕೃತ ಉಯ್ಯಾಲೆಯಲ್ಲಿ ಕುಳಿತು ತೂಗಿಕೊಳ್ಳಿರಿ. ಇಂದು ನೀವು ಏರುತ್ತಿರುವ ಈ ದೋಣಿಯು ಸಂತೋಷ ಆತ್ಮೀಯತೆ, ಉಲ್ಲಾಸ, ಆರೋಗ್ಯ, ಪುಷ್ಟಿಗಳಿಂದ ತುಂಬಿ ನಿಮ್ಮನ್ನು ಭಗವಂತನ ಪಾದಕಮಲಗಳ ಬಳಿಗೆ ಸುರಕ್ಷಿತವಾಗಿಯೂ ಸರಾಗವಾಗಿಯೂ ಒಯ್ಯಲಿ. ಶರಣಾಗತಿ ಮತ್ತು ಸೇವೆ ಎಂಬ ಹುಟ್ಟುಗಳನ್ನು ಹಾಕುತ್ತಾ ನೀವಿಬ್ಬರೂ ಮುಂದೆ ಮುಂದೆ ಸಾಗಿರಿ. ನಿಮ್ಮ ಬಾಳ ದೋಣಿಯ ಹಾಯಿಪಟವು ಕೃಪೆಯ ತಂಗಾಳಿಯಿಂದ ತುಂಬಿಕೊಳ್ಳಲಿ."

ಒಬ್ಬ ಭಕ್ತನಿಗೆ ಅರವತ್ತನೆಯ ಹುಟ್ಟಿದ ಹಬ್ಬದ ದಿನದಂದು ಪತ್ರದಲ್ಲಿ ಬಾಬಾ ಬರೆಯುತ್ತಾರೆ: "ಎಚ್ಚರಗೊಳ್ಳು! ನಿನ್ನ ಪ್ರೀತಿಯ ಮಾಯಿಯಾಗಿ ನಿನ್ನ ಹೃದಯದಲ್ಲಿ ವಾಸಮಾಡುತ್ತಿರುವ ಸತ್ಯಸಾಯಿ ನಿನ್ನ ಮೇಲೆ ಆನಂದದ ಮಳೆ ಸುರಿಸುತ್ತಿದ್ದಾರೆ. ನಿನಗೆ ಸುದೀರ್ಘ ಜೀವನ ಪೂರ್ಣ ಆರೋಗ್ಯ, ಮನಶ್ಶಾಂತಿ, ಭಗವತ್ ಭಕ್ತಿ, ಪ್ರಾಪಂಚಿಕ ವಸ್ತುಗಳ ಬಗೆಗೆ ವಿರಕ್ತಿ, ನಿನ್ನದೇ ಸತ್ಯದ ಅನ್ವೇಷಣೆಯಲ್ಲಿ ಯಶಸ್ಸು ದೊರಕಲಿ ಎಂದು ಆಶೀರ್ವದಿಸುತ್ತಿದ್ದಾರೆ. ನೀನು ಸುತ್ತಮುತ್ತ ಎಲ್ಲ ಕಡೆಯೂ ಆನಂದವನ್ನು ಪಸರಿಸುವಂತಾಗಲಿ; ಭಗವಂತನ ಅಸಂಖ್ಯ ಲೀಲೆಗಳನ್ನು ಧ್ಯಾನಿಸುತ್ತಾ ತೃಪ್ತಿ ಪಡೆಯುವ ಸಾಕ್ಷಿಯ ಪಾತ್ರವನ್ನು ನೀನು ನಿರ್ವಹಿಸುವಂತಾಗಲಿ; ಯಾವಾಗಲೂ ನೀನು ಸಜ್ಜನರ ಸಂಗದಲ್ಲಿ ಇರುವಂತಾಗಲಿ, ನಿನ್ನ ಸಮಯವನ್ನು ಭಗವದ್ವೈಭವವನ್ನು ಮೆಲುಕು ಹಾಕುತ್ತಾ ಕಳೆಯುವಂತಾಗಲಿ. ಇದೋ ಬೊಗಸೆ ಹಿಡಿ, ನಾನು ನೀಡುತ್ತಿರುವ ಅಮೃತವನ್ನು, ಪ್ರೇಮಾಮೃತವನ್ನು ತುಂಬಿಕೊ. ಬೇರೆ ಯಾವ ಅಮೃತವೂ ಇದಕ್ಕಿಂತ ಸಿಹಿಯಾಗಿರಲಾರದು, ಪುಷ್ಟಿಕರವಾಗಿರಲಾರದು."

## ಸಾಯಿ ನಿನ್ನನ್ನು ರಕ್ಷಿಸುತ್ತಾರೆ

ಇನ್ನೇನು ಭಗವಂತನ ಮಡಿಲಿಗೆ ಸೇರಲು ಸಿದ್ಧವಾಗುತ್ತಿದ್ದ ತೊಂಬತ್ತು ವರ್ಷ ಹಿರಿಯ ಭಕ್ತೆಯೊಬ್ಬಳಿಗೆ ಅವರು ಬರೆದರು: "ನರಸಮ್ಮ ನನ್ನ ಆಶೀರ್ವಾದಗಳನ್ನು ಹಿಡಿ. ಸಾಯಿ ನಿನ್ನ ಹೃದಯದಲ್ಲಿದ್ದಾರೆ; ಅವರೆಂದಿಗೂ ಅಲ್ಲಿಂದ ಕದಲುವುದಿಲ್ಲ. ಪ್ರತಿ ಉಸಿರಿಗೂ 'ಸಾಯಿ' ಅನ್ನು; ಪ್ರತಿ ಕ್ಷಣವನ್ನೂ ಆ ನಾಮವನ್ನು ಜಪಿಸುತ್ತಾ ಕಳೆ. ಸಾಯಿ ನಿನ್ನ ಬಳಿಯೇ ನಿಂತಿರುವಂತೆ ಚಿತ್ರಿಸಿಕೊಳ್ಳಲು ನಿನ್ನ ಆಲೋಚನೆಯನ್ನು ಕೇಂದ್ರೀಕರಿಸು. ಸಾಯಿ ನಿನ್ನನ್ನು ರಕ್ಷಿಸುತ್ತಾರೆ. ನೀನು ಸಾಯಿಯಲ್ಲಿ ಲೀನವಾಗುವೆ. ನೀನು ನಿರಂತರವಾಗಿ ಸಾಯಿಯಲ್ಲಿ ಸೇರಿಕೊಂಡು ಬಿಡುವೆ." ಈ ಧನ್ಯ ಮಹಿಳೆಯ

ಮುಖದ ಮೇಲೆ ಮಿದುವಾದ ಶಾಂತಿ ಹರಡಿಕೊಂಡಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಸಾವಿಗೆ ಕೆಲವೇ ಕ್ಷಣಗಳ ಮೊದಲು ಪವಾಡಸದೃಶವಾಗಿ ಸಾಯಿ ಆಕೆಗೆ ಭರವಸೆ ಕೊಟ್ಟಿದ್ದ ಹಾಗೆ ದರ್ಶನ ಪ್ರಸಾದಗಳೆರಡನ್ನೂ ನೀಡಿದರು.

ಅವರ ಪತ್ರಗಳು ಉಲ್ಲಾಸವನ್ನು ಚಿಮ್ಮಿಸುತ್ತವೆ, ಹೃದಯವನ್ನು ಬೆಚ್ಚಗಾಗಿಸುತ್ತವೆ, ನೋವನ್ನು ಮಾಯಿಸುತ್ತವೆ. ಒಬ್ಬ ಭಕ್ತನು ತನ್ನ ತಾಯಿಗೆ ವಿಪರೀತ ಕಾಯಿಲೆಯಾದುದರಿಂದ ತಾನು ಆಕೆಯನ್ನು ಬಿಟ್ಟು ದಸರಾ ಉತ್ಸವದ ಸಮಯದಲ್ಲಿ ಪ್ರಶಾಂತಿ ನಿಲಯಕ್ಕೆ ಬರಲು ಸಾಧ್ಯವಾಗಲಿಲ್ಲ ಎಂದು ಬರೆದರು. ಕೆಲವೇ ತಿಂಗಳುಗಳ ಹಿಂದೆ ಪ್ರಶಾಂತಿ ನಿಲಯಕ್ಕೆ ಕೆಲವು ನೂರು ಮೈಲಿಗಳ ದೂರದ ಒಂದು ನಗರಕ್ಕೆ ನ್ಯಾಯಾಧೀಶರನ್ನಾಗಿ ಸರಕಾರವು ಅವರನ್ನು ನೇಮಕ ಮಾಡಿದ್ದಿತು. ಆದರೆ ಅದು ಸಾಲದು ತನ್ನನ್ನು ಪ್ರಶಾಂತಿ ನಿಲಯಕ್ಕೆ ಇನ್ನೂ ಸಮೀಪವಾಗಿರುವ ಕಡೆಗೆ ವರ್ಗ ಮಾಡಬೇಕು ಎಂದು ಅವರು ಬಾಬಾ ಅವರಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಆದರೆ ಅದಕ್ಕೆ ಬದಲಾಗಿ ಅವರನ್ನು ಬಂಗಾಳಕೊಲ್ಲಿಯ ಕರಾವಳಿಗೆ ಒರಿಸ್ಸಾ ಗಡಿಯ ಸ್ಥಳಕ್ಕೆ ವರ್ಗಾಯಿಸಲಾಯಿತು. ಬಾಬಾ ಅವರಿಗೆ ಬರೆದರು: "ನಿನ್ನ ಪತ್ರ ಬಂದಿದೆ. ನಿನ್ನ ಪ್ರಣಾಮಗಳನ್ನು ಸ್ವೀಕರಿಸಿದ್ದೇನೆ. ನೀನು ನನಗೆ ತಿಳಿಸಿರುವ ನಿನ್ನ ಕಷ್ಟದ ಸಂಗತಿಯೆಲ್ಲಾ ನನಗೆ ತಿಳಿದಿದೆ. ನೀನು ನಿಜವಾಗಿ ಯಾರನ್ನೂ ಪ್ರೀತಿಸುವೆಯೋ ಪೂಜಿಸುವೆಯೋ ಅವನನ್ನು ಅಗಲಿ ಪಡುವ ವಿರಹವೇದನೆಯೇ ಅತ್ಯುತ್ತಮ ಸಾಧನೆ. ಆ ಸಾಧನೆ ಬೇಗ ಬೇಗ ಹೆಚ್ಚಲಿ. ಹೆಚ್ಚು ಹೆಚ್ಚು ತೀವ್ರತೆಯಿಂದ ಹಂಬಲಿಸುತ್ತಾ ಹೋಗು. ನಿನ್ನ ಹೃದಯದಲ್ಲಿ ಸಾಯಿ ನೆಲೆಗೊಳ್ಳುವಂತೆ ಮಾಡಲು ಇದೇ ಅತ್ಯುತ್ತಮವಾದ ದಾರಿ. ನೀನು ಸಾಯಿಯೊಂದಿಗಿರುವಾಗ ಮಾತ್ರವೇ ಆನಂದವಾಗಿರುತ್ತೀಯೆ ಎಂದು ನಾನು ಬಲ್ಲೆ. ಒಂದು ವಿಚಾರ ನೆನಪಿನಲ್ಲಿಡು, ನಿನ್ನ ಆನಂದವೇ ನನ್ನ ದೈನಂದಿನ ಆಹಾರ. ನನ್ನ ಅಕ್ಕರೆಯ ಮಗುವೆ, ಹತ್ತಿರ ಬರುತ್ತಿರುವ ದಸರಾ ಉತ್ಸವದ ಸಮಯದಲ್ಲಿ ಸಾಯಿಯನ್ನು ಸೇವಿಸಲು ಅವಕಾಶವಾಗುತ್ತಿಲ್ಲವೆಂದು ಏಕೆ ಕೊರಗುತ್ತೀಯೆ? ನಿನ್ನ ತಾಯಿಯ ಅನಾರೋಗ್ಯ ನಿನ್ನನ್ನು ನನ್ನ ಬಳಿಗೆ ಬಾರದಂತೆ ತಡೆದಿದೆ ಎಂದು ವಿಷಾದ ಪಡುತ್ತೀಯೆ? ನಿನ್ನ ತಾಯಿಗೆ ಮಾಡುವ ಸೇವೆ ನನಗೆ ಸಲ್ಲುವ ಸೇವೆಯಲ್ಲವೆ? ಆಯಿ, ತಾಯಿ, ಮಾಯಿ ಎಂದು ಕರೆಯುವ ಮಾತೆ ಸಾಯಿ ಅಲ್ಲದೆ ಬೇರಾರು? ಆಕೆಯ ಸೇವೆ ಮಾಡು, ಆ ಸೇವೆಯ ಮೂಲಕ ಆಕೆಯನ್ನು ಪೂಜಿಸು. ಅನುಮಾನವೇಕೆ? ಸಂದೇಹವೇಕೆ? ವಿಷಾದವೇಕೆ? ಕಣ್ಣುಗಳನ್ನು ರೆಪ್ಪೆ ಹೇಗೋ ಹಾಗೆ ಸದಾ ಅತಿ ಸಮೀಪದಲ್ಲಿದ್ದು ಅತ್ಯಂತ ಜಾಗರೂಕತೆಯಿಂದ ಸಾಯಿ ನಿನ್ನನ್ನು ರಕ್ಷಿಸುತ್ತಿದ್ದಾರೆ. ನೀನೆಲ್ಲಿದ್ದೀಯೋ ಅಲ್ಲೇ ಅವರು ಇದ್ದಾರೆ, ನಿನ್ನ ನಿತ್ಯದ ಪೂಜೆಯನ್ನು ಕೈಗೊಳ್ಳುತ್ತಾ, ನೀನಿಟ್ಟ ನೈವೇದ್ಯ ಸ್ವೀಕರಿಸುತ್ತಾ, ಅನುಗ್ರಹದ ಆನಂದವನ್ನು ನಿನಗೆ ಯಥೇಚ್ಛವಾಗಿ ನೀಡುತ್ತಾ. ಸಾಯಿ ಎಂದಿಗೂ ನಿನ್ನನ್ನು ಮರೆಯುವುದಿಲ್ಲ ಅಥವಾ ಕೈ ಬಿಡುವುದಿಲ್ಲ. ಎಂದೂ ನಿನ್ನ ಹೃದಯದಿಂದಾಚೆ ಹೋಗುವುದಿಲ್ಲ. ನನ್ನ ಆಶೀರ್ವಾದಗಳನ್ನು ನಿನ್ನ ತಾಯಿಗೆ ತಿಳಿಸು. ನನ್ನ ಪರವಾಗಿ ಆಕೆಗೆ ಹೇಳು:

ಅವರು ಬೇರೆ ಎಲ್ಲ ಆಲೋಚನೆಗಳನ್ನು ತೊರೆದು ಆತ್ಮನ ಮೇಲೆ, ರಾಮನಾಗಿ ಭಾವಿಸ ಮನಸ್ಸನ್ನು ಕೇಂದ್ರೀಕರಿಸಲಿ. ಅದೇ ಆಕೆಗೆ ಅತ್ಯಂತ ಬಲವಾದ ಅವಲಂಬನೆ, ಅತ್ಯಂತ ವಿಶ್ವಾಸಾರ್ಹ ಆಶ್ರಯ. ಅದು ಕಣ್ಣಿಗೆ ಕಾಣಿಸದ ಅಲುಗಾಡದ ಭದ್ರ ಆಧಾರ; ಮಿಕ್ಕವೆಲ್ಲ ಅಲ್ಪಕಾಲಿಕವಾದ ಮೇಲು ರಚನೆಗಳು, ಮರೀಚಿಕೆಗಳು, ಗಾಳಿ ಗೋಪುರಗಳು. ಆಕೆಗೆ ಹೇಳು, ಸದಾ ಭಗವನ್ನಾಮವು ನಾಲಿಗೆಯ ಮೇಲಿರಲಿ; ಹೃದಯದಲ್ಲಿ ತೂಗುತ್ತಿರುವ ಉಯ್ಯಾಲೆಯಲ್ಲಿ ಕುಳಿತ ಭಗವಂತನ ರೂಪ ಸದಾ ಮನಸ್ಸಿನ ಎದುರಿಗಿರಲಿ. ಪ್ರಜ್ಞೆಯೊಳಗೆ ಆನಂದ ತರಂಗಗಳ ಮೇಲೆ ವಿಹರಿಸುತ್ತಿರುವ ಭಗವಂತನನ್ನು ಅವಳು ಚಿತ್ರಿಸಿಕೊಳ್ಳಲಿ. ಅದು ಪ್ರತಿದಿನವೂ ನಾನು ಬೋಧಿಸುತ್ತಿರುವ ನಿಜವಾದ ಸಾಧನೆಯೇ ಆಗಿದೆ.

ನಿನ್ನ ಗೃಹಲಕ್ಷ್ಮಿಗೆ ನನ್ನ ಆಶೀರ್ವಾದಗಳನ್ನು ತಿಳಿಸು. ಬೇಗನೆ ನೀನು ಸನ್ನಿಧಿಗೆ ಬಂದು, ಈಗ ಹಂಬಲಿಸುತ್ತಿರುವ ಆನಂದವನ್ನು ಪಡೆಯುವೆ.

## ಸಾಯಿ - ನಿನ್ನ ಹೃದಯವಾಸಿ

ಅಪಘಾತವೊಂದರಲ್ಲಿ ಪತಿಯನ್ನು ಕಳೆದುಕೊಂಡ ಹಿರಿಯ ಮಹಿಳೆಯೊಬ್ಬಳಿಗೆ ಅವರು ಬರೆದರು: "ಮದುವೆಯು ಇಬ್ಬರು ವ್ಯಕ್ತಿಗಳನ್ನು ಪತಿ- ಪತ್ನಿ ಎಂದು ಗಂಟು ಹಾಕುತ್ತದೆ. ಅದಕ್ಕೆ ಕೆಲವೇ ನಿಮಿಷಗಳ ಹಿಂದೆ ಅವರು ಪರಸ್ಪರ ಏನಾಗಿದ್ದರು? ಮದುವೆ ಆಗಿರದಿದ್ದರೆ ಇಬ್ಬರಲ್ಲಿ ಒಬ್ಬರಿಗೆ ಏನು ಸಂಭವಿಸಿದ್ದರೂ ಇನ್ನೊಬ್ಬರು ವ್ಯಥೆ ಪಡುತ್ತಿರಲಿಲ್ಲ. ಗರ್ಭಧಾರಣೆಗೆ ಮೊದಲು ಮಗನಾಗಲಿ ಸೋದರನಾಗಲಿ ಎಲ್ಲಿದ್ದನು? ಬದುಕು ಎನ್ನುವುದು ಹಿಂದೆ ಏನಿತ್ತೋ ಮುಂದೆ ಏನಾಗುವುದೋ ಅವೆರಡರ ನಡುವಣ ಮಧ್ಯಾಂತರ ಅಷ್ಟೆ. ಈ ಮಧ್ಯಾಂತರದಲ್ಲಿ ತಾನು ತಿದ್ದಲಾಗದ್ದು, ಸರಿಪಡಿಸಲಾಗದ್ದು ಏನಾದರೂ ಸಂಭವಿಸಿದರೆ ಅದಕ್ಕಾಗಿ ವ್ಯಕ್ತಿ ಗೋಳಾಡಬಾರದು. ಭಗವಂತನನ್ನು ಅರಸಬೇಕು, ಅವನಿಗೆ ಶರಣಾಗಬೇಕು. ನಿನ್ನ ಪತಿಯು ತಾನು ಕಂಡುಕೊಂಡ ಸತ್ಯದ ಬೆಳಕಿನಲ್ಲಿ ಒಳ್ಳೆಯ ಜೀವನ ನಡೆಸಿದನು. ಅವನು ಯಾರಿಗೂ ಕೇಡೆಣಿಸಲಿಲ್ಲ. ನೋಯುವವರಿಗೆ ನಿರಕ್ಷರರಿಗೆ ಅವನು ಪ್ರೀತಿ ತೋರಿಸಿದನು, ಸೇವೆ ಸಲ್ಲಿಸಿದನು. ಅನೇಕ ಕುಟುಂಬಗಳನ್ನು ವಿಪತ್ತಿನಿಂದ, ಅಪಮಾನದಿಂದ ದಡಹಾಯಿಸಿದನು. ಅನೇಕ ತರುಣರು ಕಾಲೇಜು ವ್ಯಾಸಂಗ ಮುಗಿಸಲು ನೆರವಾದನು; ನಿಯತವಾಗಿ ಅವನು ನೀಡಿದ ಕಾಣಿಕೆಯಿಂದಾಗಿ ಅನೇಕ ರೋಗಿಗಳು ಚಿಕಿತ್ಸೆ ಪಡೆದು ಉಳಿದುಕೊಂಡರು. ಅವನು ಸದಾ ಹಸನ್ಮುಖಿಯಾಗಿರುತ್ತಿದ್ದನು, ಹೋದಲ್ಲೆಲ್ಲ ಸಂತಸವನ್ನು ಹರಡುತ್ತಿದ್ದನು. ಕೊನೆಗೆ ಅವನು ತನಗೆ ತುಂಬಾ ತಡೆಗಳನ್ನು ಒಡ್ಡಿದ್ದ ಈ ದೇಹವನ್ನು ಕಳಚಬೇಕು ಎಂದು ದೇವರು ಸಂಕಲ್ಪಿಸಿದನು. ಆ ದಿನ ಅವನು ಮದರಾಸಿಗೆ ಹೋಗದೆ ಇರುತ್ತಿದ್ದರೆ ಏನಾಗುತ್ತಿತ್ತು ಎಂದು ಈಗ ಲೆಕ್ಕ ಹಾಕುವುದರಿಂದ ಏನು ಪ್ರಯೋಜನ?"

"ಈಗ ನಿನ್ನ ಕರ್ತವ್ಯ ಅವನು ಗಳಿಸಿದ ಹಿರಿಮೆಯನ್ನು ಉಳಿಸುವುದು, ಅವನು ತನ್ನೆದುರು ಇರಿಸಿಕೊಂಡಿದ್ದ ಆದರ್ಶಗಳನ್ನು ಅನುಸರಿಸುವುದು. ನಿನ್ನ ಪತಿ ಇಲ್ಲಿ ನನ್ನ ಬಳಿ ಇದ್ದಾನೆ. ಬದುಕಿದ್ದಾಗ ಆಸೆ ಪಡುತ್ತಿದ್ದಂತೆ ಅವನು ಎಂದಿಗೂ ನನ್ನಲ್ಲೇ ಇರುತ್ತಾನೆ. ತಮ್ಮಿಂದ ಅವನು ಆಗಲಿ ಹೋಗುವುದಕ್ಕೆ ಸ್ವಾಮಿ ಎಂದೂ ಅವಕಾಶ ಕೊಡುವುದಿಲ್ಲ. ಎಲ್ಲಾ ಬಗೆಯ ಬಂಧನಗಳಿಂದಲೂ, ಸೀಮಿತಗಳಿಂದಲೂ ಅವನಿಂದು ಮುಕ್ತನಾಗಿದ್ದಾನೆ."

"ವಿಧಿಯು ನಿನ್ನನ್ನು ಅವನ ಕಡೆಗೆ ಸೆಳೆದದ್ದು, ಅಂತಹ ಸುಂದರ ವ್ಯಕ್ತಿಯ ಪ್ರೀತಿ ಪೂರ್ವಕ ಒಡನಾಟ ಅನೇಕ ವರ್ಷಗಳ ಕಾಲ ದೊರೆತದ್ದು ನಿನ್ನ ಅದೃಷ್ಟವೇ ಸರಿ. ಅವನ ಆಲೋಚನೆಗಳು ಪರಿಶುದ್ಧವಾಗಿದ್ದುವು. ಅವನಲ್ಲಿ ಮಾತ್ಸರ್ಯ, ದ್ವೇಷ, ಲೋಭಗಳ ಕಳಂಕ ಇರಲಿಲ್ಲ. ಆದ್ದರಿಂದ ಅವನ ಸ್ಥಾನ ಎಂದೆಂದಿಗೂ ನನ್ನಲ್ಲಿದೆ. ನಿನ್ನ ಮೇಲೆ ಪ್ರೇಮದ ತಂಪಾದ ಮಳೆಗರೆಯಲೆಂದೇ ಈ ಪತ್ರವನ್ನು ಬರೆಯುತ್ತಿದ್ದೇನೆ. ಈಗ ನಿನ್ನ ಒಳಗೆ ಭುಗಿಲೆದ್ದು ಸುಡುತ್ತಿರುವ ದುಃಖದ ಬೆಂಕಿಯ ನಾಲಗೆಗಳನ್ನು ಈ ಮಳೆಯು ತಣ್ಣಗಾಗಿಸುತ್ತದೆ. ನಿನ್ನ ಪತಿಯು ತನ್ನ ಆಧ್ಯಾತಿಕ ಸಾಧನೆಯ ಫಲವಾಗಿ ಪ್ರಶಾಂತಿ ನಿಲಯದಲ್ಲಿ ಸಾಯಿ ಸನ್ನಿಧಿಯಲ್ಲಿದ್ದಾನೆ" ಗೀತೆಯು ಭಗವಂತನನ್ನು ಸಕಲ ಜೀವಿಗಳ ಗೆಳೆಯ (ಸರ್ವ ಭೂತ ಸುಹೃದ್) ಎಂದು ಬಣ್ಣಿಸುತ್ತದೆ. ಈ ಪತ್ರಗಳು ಅವರು ಯಾವುದೇ ತಂದೆಗಿಂತ ಹೆಚ್ಚು ಭರವಸೆ ತುಂಬುತ್ತಾರೆ, ಯಾವುದೇ ತಾಯಿಗಿಂತ ಹೆಚ್ಚು ವಾತ್ಸಲ್ಯಮಯಿ ಆಗಿದ್ದಾರೆ. ಯಾವುದೇ ಬಂಧುವಿಗಿಂತ ಹೆಚ್ಚು ಮಟ್ಟಿಗೆ ನೆರವಾಗುವವರೂ ಯಾವನೇ ಅಧಿಕಾರಿಗಿಂತ ಹೆಚ್ಚು ನ್ಯಾಯಪರರೂ ಆಗಿದ್ದಾರೆ ಎಂಬುದನ್ನು ತೋರಿಸಿಕೊಡುತ್ತವೆ. ಭಗವಂತನಿಗಾಗಿ ಮೀಸಲಾದ ಜೀವಿಗಳಿಗೆ ಬಾಬಾ ನೀಡುವ ಅನುಗ್ರಹ ಶಾಶ್ವತ ಆನಂದದಾಯಕವಾದದ್ದು.

## ನನಗೊಂದು ಪತ್ರ

ಈಗ ಇಪ್ಪತ್ತೆರಡು ವರ್ಷಗಳ ಹಿಂದೆ ಬಾಬಾ ನನಗೆ ಬರೆದ ಒಂದು ಪತ್ರವನ್ನು ನೀವು ಓದಲು ಇಡುತ್ತಿದ್ದೇನೆ, ಅದಕ್ಕಾಗಿ ಮನ್ನಿಸಬೇಕು. ಅದು ಅವರ ಸರ್ವವ್ಯಾಪಿತ್ವ, ಸರ್ವಜ್ಞತ್ವಗಳನ್ನೂ ಮೇರೆಯರಿಯದ ಅವರ ಪ್ರೇಮವನ್ನೂ ನಿರ್ದಶಿಸುತ್ತದೆ. ವಾಸ್ತವವಾಗಿ, ಈ ಜಗತ್ತಿನ ಜನರನ್ನು ಪರಿವರ್ತನೆಯ ಮೂಸೆಯೊಳಕ್ಕೆ ಆಕರ್ಷಿಸಲು ಈ ಅವತಾರದಲ್ಲಿ ತಾವು ತೋರಿಸಬಯಸಿದ ಗುಣಗಳನ್ನು ಆಗಷ್ಟೇ ನಾನು ಗಂಗಾ ತೀರದ ಪವಿತ್ರ ಕ್ಷೇತ್ರಗಳಿಗೆ ಕಷ್ಟಪಟ್ಟು ಯಾತ್ರೆ ಮಾಡಿ ಮುಗಿಸಿ ಬೆಂಗಳೂರಿಗೆ ಹಿಂದಿರುಗಿ ಬಂದಿದ್ದೆ. ಹಾಗೆಯೇ ಬುದ್ಧಗಯೆ, ದಕ್ಷಿಣೇಶ್ವರ, ಕಾಮಾರಪುಕುರ ಮತ್ತು ಪುರಿಗಳಿಗೂ ಹೋಗಿದ್ದೆ. ಈ ತೀರ್ಥಯಾತ್ರೆಗೆ ನನ್ನ ತಾಯಿಯನ್ನೂ ಪತ್ನಿಯನ್ನೂ ಕರೆದುಕೊಂಡೇ ಹೋಗಬೇಕೆಂದು ಬಾಬಾ ಅವರೇ ಅಪ್ಪಣೆ ಮಾಡಿದ್ದರು. ನಾವು ಹೊರಟ ದಿನ ಆಶೀರ್ವಾದ ಮಾಡಿ, ಪ್ರಯಾಣದುದ್ದಕ್ಕೂ ತಾವೇ ನಮ್ಮ ಜೊತೆಗಿರುವುದಾಗಿ ಹೇಳಿದ್ದರು. ಮೂರು ರೈಲ್ವೇ ಟಿಕೆಟ್ಟುಗಳಲ್ಲಿ ನಾಲ್ಕು ಜನ ಪ್ರಯಾಣ

ಮಾಡುತ್ತೇವೆ ಎಂದಿದ್ದರು. ಭ್ರಾಂತಿಯ ಪ್ರಳಯ ಪ್ರವಾಹದಲ್ಲಿ ತೇಲಿಕೊಂಡು ಹೋಗುವ ಪ್ರತಿಯೊಂದು ತೇಲು ಬುಟ್ಟಿಯಲ್ಲೂ ಗುಪ್ತವಾಗಿ ಅಡಗಿಕೊಂಡಿರುವ ಬಿಟ್ಟಿ ಪ್ರಯಾಣಿಕ ಬಾಬಾ. ಯಾತ್ರೆ ಹಾದಿ ಹಿಡಿದ ಪ್ರತಿಯೊಬ್ಬರ ಎಡೆಬಿಡದ ಸಂಗಾತಿ.

ನನಗೆ ವಿಧಿಸಿದ್ದ ಕರ್ತವ್ಯವನ್ನು ಮಾಡಿ ಮುಗಿಸಿದ ಮೇಲೆ ಅವರಿಗೆ ನಾನೊಂದು ಪತ್ರ ಬರೆದೆ. ಆಗ ಅವರು ಕೊಡೈಕೆನಾಲಿನಲ್ಲಿ ತಂಗಿದ್ದರು. ನಮ್ಮ ಎಲ್ಲರ ಕೃತಜ್ಞತೆಗಳನ್ನು ತಿಳಿಸಿ, ಹೃಷಿಕೇಶ, ವಾರಣಾಸಿ ಮತ್ತು ಗಯೆಗಳಲ್ಲಿ ನಮ್ಮ ಮೂವರಿಗೂ ಅವರ ಸ್ಪಷ್ಟದರ್ಶನವಾಯಿತು ಎಂದು ನಾನು ಬರೆದಿದ್ದೆ. ಅದಕ್ಕೆ ಬಂದ ಉತ್ತರದಲ್ಲಿ ಬಾಬಾ ಬರೆದಿದ್ದರು. "ನಿನ್ನ ಪತ್ರ ಸಕಾಲಕ್ಕೆ ಕೊಡೈಕೆನಾಲಿಗೆ ಬಂದು ತಲುಪಿತು. ಆದರೆ ಅಂದೇ ಅಲ್ಲಿಂದ ಹೊರಟು ನಾವು ಮದರಾಸಿಗೆ ಬಂದುಬಿಟ್ಟಿದ್ದರಿಂದ ತಕ್ಷಣವೆ ನಿನಗೆ ಉತ್ತರ ಕಳಿಸಲು ಸಾಧ್ಯವಾಗಲಿಲ್ಲ. ಮದರಾಸಿಗೆ 25ನೇ ತಾರೀಖು ಸುಮಾರು ಮಧ್ಯರಾತ್ರಿ ವೇಳೆಗೆ ತಲುಪಿದೆ (ಪತ್ರದಲ್ಲಿ 26 ಎಂದು ತಾರೀಕನ್ನು ನಮೂದಿಸಿದ್ದಾರೆ) ಪವಿತ್ರ ಕ್ಷೇತ್ರಗಳನ್ನು ನಿನ್ನ ಮಾತೃದೇವಿಯೊಂದಿಗೆ ಸಂದರ್ಶಿಸಿ ಆನಂದವನ್ನು ತುಂಬಿಕೊಂಡು ಹಿಂದಿರುಗಿದ್ದೀಯೆ, ಇದರಿಂದ ನನಗೆ ತುಂಬಾ ಸಂತೋಷವಾಗಿದೆ. ಸ್ವಾಮಿಯು ಸದಾ ನಿನ್ನೊಂದಿಗೇ ಇರುವಾಗ ವಿಳಂಬವಾಗಲಿ, ನಿರಾಶೆಯಾಗಲಿ, ಅಪಾಯವಾಗಲಿ ನಿನ್ನ ದಾರಿಗೆ ಅಡ್ಡಲಾಗುವುದು ಹೇಗೆ ಸಾಧ್ಯ? ನನ್ನ ನಾಮವು ನನ್ನ ರೂಪದಿಂದ ಬೇರೆಯಲ್ಲ. ನಾಮವು ಉಚ್ಚರಿಸಿದೊಡನೆ ಅಥವಾ ಕಿವಿಗೆ ಬಿದ್ದೊಡನೆ ರೂಪವನ್ನು ಮನಸ್ಸಿಗೆ ತರುತ್ತದೆ. ರೂಪವು ಕಂಡೊಡನೆಯೇ ಆ ಕ್ಷಣವೇ ನಾಮವು ಅರಿವಿಗೆ ಬರುವುದು. ಆದ್ದರಿಂದ ನಾಮವು ಸದಾ ನಿನ್ನ ನಾಲಗೆಯ ಮೇಲೆ ನಲಿಯುತ್ತಿರುವಲ್ಲಿ ರೂಪವು ನಿನ್ನ ಮುಂದೆ, ನಿನ್ನ ಪಕ್ಕದಲ್ಲಿ ಇರಲೇಬೇಕಾಗುತ್ತದೆ. ಇದನ್ನು ನನ್ನ ಪರ ಎಂದು ವಿಶೇಷವಾಗಿ ಪತ್ರದಲ್ಲಿ ಪ್ರಸ್ತಾಪಿಸುವ ಅಗತ್ಯವೆಲ್ಲಿದೆ? ಯಾವಾಗ ಮತ್ತು ಎಲ್ಲಿ ನನ್ನ ನಾಮವನ್ನು ಶ್ರದ್ಧೆಯಿಂದ ಸ್ಮರಿಸಲಾಗುವುದೋ ಭಕ್ತಿಯಿಂದ ಹಾಡಲಾಗುವುದೋ ಅಲ್ಲಿ ನಾನು ರೂಪವನ್ನು ಅಭಿವ್ಯಕ್ತಪಡಿಸಲೇಬೇಕು.

"ಆ ದರ್ಶನಗಳು ಸ್ವಾಮಿಯ ಕೃಪಾ ಪ್ರಸಾದಗಳು ಎಂದು ನೀನು ಹೇಳಬಹುದು. ಅಲ್ಲ ನಾನು ಯಾವಾಗಲೂ ಹೇಳುವುದು 'ಸಾಧನೆ ಮೊದಲು, ಸಂಕಲ್ಪ ಆಮೇಲೆ' ಎಂದು. ಅದೇ ಸರಿಯಾದ ಕ್ರಮ. ಭಕ್ತನ ಆಧ್ಯಾತ್ಮಿಕ ಹಂಬಲದ ಆಳ ಎಷ್ಟಿದೆಯೆಂದು ಪರೀಕ್ಷಿಸಿ ನೋಡಿದ ನಂತರವೇ ನನ್ನ ಸಂಕಲ್ಪ ಅಥವಾ ಇಚ್ಛೆಯು ಆನಂದವನ್ನು ನೀಡುತ್ತದೆ. ಸಾಧನೆ ಅತ್ಯಗತ್ಯವಾದ ಪೂರ್ವಾಗತ್ಯ. ನೀನು ಪ್ರಾಧ್ಯಾಪಕನಾಗಿದ್ದೆಯಾದ್ದರಿಂದ ಇದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲೆ. ನಿನ್ನ ವಿದ್ಯಾರ್ಥಿಗಳು ಬರೆದ ಉತ್ತರ ಪತ್ರಿಕೆಗಳನ್ನು ನೀನು ಮೌಲ್ಯ ಮಾಪನ ಮಾಡಿರುತ್ತೀಯೆ. ಅವರು ಏನು ಬರೆದಿದ್ದಾರೆ ಎಂಬುದನ್ನು ಜಾಗರೂಕತೆಯಿಂದ ಪರೀಕ್ಷೆ ಮಾಡಿ ನೋಡಿದ ನಂತರವೇ ಅವರಿಗೆ ಅಂಕಗಳನ್ನು ನೀಡುತ್ತೀಯೆ ಅಲ್ಲವೆ? ಹಾಗೆಯೇ ನಾನು ಕೂಡ, ನೀನು ಹಾಕಿ ಕೊಂಡ ಸಾಧನೆಯ ಪ್ರಾಮಾಣಿಕತೆಯನ್ನೂ ಸ್ಥಿರತೆಯನ್ನೂ ಮೊದಲು ಅಳತೆ ಮಾಡುತ್ತೇನೆ, ತೂಗಿ ನೋಡುತ್ತೇನೆ. ಆಮೇಲೆ ಅದಕ್ಕೆ ತಕ್ಕಂತೆ ನನ್ನ ಸಂಕಲ್ಪವನ್ನು ರೂಪಿಸುತ್ತೇನೆ. ಅನೇಕರಿಗೆ ತಾವು ಅನುಭವಿಸುತ್ತಿರುವ ಸಂಕಟವನ್ನು ಸಾಧನೆಯಿಂದ ಕಳೆದುಕೊಳ್ಳಬಹುದು ಎಂಬ ವಿಚಾರ ಗೊತ್ತಿಲ್ಲ."

"ಕೊಡೈಕೆನಾಲಿನಲ್ಲಿ ಸಂಜೆಯ ಭಜನೆಗೆ ಸಾವಿರಾರು ಜನ ಸೇರುತ್ತಿದ್ದರು. ಅವರು ಜೀವನದಲ್ಲೇ ಮೊತ್ತ ಮೊದಲ ಸಾರಿಗೆ ದರ್ಶನ ಪಡೆಯುತ್ತಿದ್ದರು. ಅವರು ದರ್ಶನ ಪಡೆಯಲು ಅವರಿಗಿದ್ದ ಹಕ್ಕೆ ನನ್ನನ್ನು ಈ ಗಿರಿಧಾಮಕ್ಕೆ ಕರೆತಂದದ್ದು. ಏಕೆಂದರೆ, ನಿನಗೇ ಗೊತ್ತಿರುವಂತೆ ಇಲ್ಲಿಗೆ ಬರಬೇಕೆಂದು ಮೊದಲು ನಾನು ಯೋಚಿಸಿರಲಿಲ್ಲ. ಎಲ್ಲ ಇದ್ದಕ್ಕಿದ್ದಂತೆ ನಡೆಯಿತು."

"ಒಂದು ರಾತ್ರಿ ನಿನ್ನ ಮಗಳು ತನ್ನ ಪತಿಯ ಆರೋಗ್ಯದ ಬಗೆಗೆ ತುಂಬಾ ಕಳವಳ ಪಟ್ಟಳು. ಅವನ ಅನಾರೋಗ್ಯ ಹೊಸ ತಿರುವು ಪಡೆದು ತೀರಾ ಹದಗೆಟ್ಟಿತ್ತು. ಅವನ ಸ್ಥಿತಿಯನ್ನು ವರ್ಣಿಸಿ ಅವಳು ನನಗೆ ಪತ್ರ ಬರೆದಾಗ ನಾನು ಅಲ್ಲೇ ಇದ್ದೆ. ಮರುದಿನ ಬೆಳಿಗ್ಗೆ ಪುಟ್ಟಪರ್ತಿಯ ವಿಳಾಸಕ್ಕೆ ಅವಳು ಪತ್ರವನ್ನು ಅಂಚೆಯಲ್ಲಿ ಕಳಿಸಿದಳು. ಅದಿನ್ನೂ ತಲುಪಿಲ್ಲ. ಆದರೆ ಬರೆಯುತ್ತಿದ್ದಾಗಲೇ ವಿಷಯ ನನಗೆ ವೇದ್ಯವಾಗಿತ್ತು. ಸ್ವಾಮಿಯ ಕೃಪೆ ಧಾರಾಳವಾಗಿ ದೊರಕುತ್ತಿರುವಾಗ ಭಯವೇತಕ್ಕೆ?"

## ಪ್ರೀತಿಯ ಮಗು!

ಆರ್ಥಿಕ ಪರಿಸ್ಥಿತಿ ತೀರಾ ಹದಗೆಟ್ಟು, ದೇಶದಿಂದಲೇ ಓಡಿ ಮಲೇಶಿಯಕ್ಕೆ ಹೋಗಿ ಬಿಡಬೇಕೆಂದು ಬಯಸಿದ ಒಬ್ಬ ಭಕ್ತನಿಗೆ ಅವರು ಬರೆದ ಪತ್ರದಿಂದ ಉದ್ಧರಿಸಬಯಸುತ್ತೇನೆ. ಮೊದಲು ಓಡಿ ಹೋಗಬೇಕೆಂದಿದ್ದವನು ಆಮೇಲೆ ತನ್ನ ಸ್ಟೀಮರ್ ಟಿಕೆಟ್ಟುಗಳನ್ನೂ ಇತರ ಪ್ರಯಾಣ ದಾಖಲೆಗಳನ್ನೂ ಯಾರೋ ಕದ್ದು ಬಿಟ್ಟುದರಿಂದ ಮದರಾಸು ಬಂದರಿನಲ್ಲಿ ಬೇರೆ ದಿಕ್ಕುಗಾಣದೆ ಅವನು ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸಿದನು. ಈ ಪತ್ರವನ್ನು ಬರೆದಾಗ ಬಾಬಾ ಅವರಿಗೆ ಇಪ್ಪತ್ತಮೂರು ವರ್ಷ ವಯಸ್ಸು. "ಪಟ್ಟಾಭಿ, ನನ್ನ ಪ್ರೀತಿಯ ಭಕ್ತನೆ, ಇಲ್ಲಿ ನೋಡು, ಸ್ವಾಮಿ ನಿನಗೆ ಬರೆಯುತ್ತಿದ್ದಾರೆ; ನಿನ್ನನ್ನು ಆಶೀರ್ವದಿಸುತ್ತಿದ್ದಾರೆ. ಮಗು, ಎಂಥ ಹುಚ್ಚು ನಿನಗೆ? ಅದೆಂಥ ಪತ್ರವನ್ನು ಬರೆದಿಟ್ಟು ಮನೆ ಬಿಟ್ಟು ಬಂದಿದ್ದೀಯೆ? ಅವಸರ ಪಡುವುದು ಅವಿವೇಕ. ಪರಿಸ್ಥಿತಿಯನ್ನು ಕುರಿತು ಸ್ವಲ್ಪ ಶಾಂತವಾಗಿ ಆಲೋಚನೆ ಮಾಡು. ನಿಧಾನವಾದ ಪರಿಶೀಲನೆ ಯಾವಾಗಲೂ ಸತ್ಯಸಂಗತಿಯನ್ನು ತೆರೆದು ತೋರಿಸುತ್ತದೆ, ಮತ್ತು ಅದು ಬಹಳ ಪ್ರಯೋಜನಕಾರಿಯಾಗುತ್ತದೆ. ನಿನ್ನದಕ್ಕಿಂತಲೂ ಅತ್ಯಂತ ಹೀನಾಯವಾದ ಪರಿಸ್ಥಿತಿಯಲ್ಲಿರುವ ಜಗತ್ತಿನ ಕೋಟ್ಯಾಂತರ ಜನರನ್ನು ಕುರಿತು ಯೋಚನೆ ಮಾಡು. ನೋಡು, ನಿನಗೆ ರಕ್ಷಿಸುವುದಕ್ಕೆ, ದಾರಿ ತೋರಿಸುವುದಕ್ಕೆ ನಾನಿದ್ದೇನೆ. ಅವರಲ್ಲಿ ಎಷ್ಟು ಮಂದಿಗೆ ಈ ಅದೃಷ್ಟವಿದೆ! ಸ್ವಲ್ಪ ವಿಚಾರ ಮಾಡು. ಬಡತನ ಸಾಲಗಳಿಗೆ ತುತ್ತಾಗಿರುವವನು ನೀನೊಬ್ಬನೇ ಏನು? ಈಗ ನೀನು ಕೈಗೊಳ್ಳಬೇಕೆಂದಿರುವ ಕ್ರಮದಿಂದ ಖಂಡಿತವಾಗಿಯೂ ನಿನಗೆ ಶಾಂತಿ ದೊರಕುವುದಿಲ್ಲ. ಅದು ಸರಿಯಾದ ಕ್ರಮವಲ್ಲ. ಹೊಣೆಗಾರಿಕೆಯಿಂದ ತಪ್ಪಿಸಿಕೊಂಡು ಓಡುವುದು ಪೌರುಷವಲ್ಲ. ನನ್ನ ಮಾತು ಕೇಳು! ನಿನ್ನ ಮನೆಗೆ ಹಿಂದಿರುಗು. ಧೈರ್ಯವಾಗಿ ಈ ಜಗತ್ತನ್ನು ಎದುರಿಸು. ಧೈರ್ಯವೊಂದೇ ನಿನಗೆ ಬಿಡುಗಡೆ ಕೊಡುವಂಥದು. ಎಲ್ಲ ಅಡ್ಡಿಗಳನ್ನೂ ನೀನು ದಾಟುವೆ. ತಪ್ಪಿಸಿಕೊಂಡು ಹೋಗುವ ಮೂರ್ಖ ವಿಚಾರವನ್ನು ಕೈಬಿಡು." ಪಟ್ಟಾಭಿ ಹಿಂದಕ್ಕೆ ಬಂದರು, ಅವರಲ್ಲಿ ಆತ್ಮವಿಶ್ವಾಸ ತುಂಬಿತು, ಬದುಕಿನಲ್ಲಿ ಯಶಸ್ಸು ದೊರಕಿತು.

ವ್ಯಕ್ತಿಗಳ ವಿಚಾರದಲ್ಲಿ ಬಾಬಾ ಅವರು ಇಷ್ಟೊಂದು ವಾತ್ಸಲ್ಯಪೂರ್ಣರಾಗಿದ್ದರೂ, ಯಾರು ಇತರರಿಗೆ ಮಾದರಿಯಾಗಿ ಬದುಕಬೇಕೆಂದು ಬಯಸುವರೋ ಅವರಲ್ಲಿ ಎಳ್ಳಷ್ಟಾದರೂ ಅಶಿಸ್ತು

ದುರ್ನಡತೆ ಕಂಡು ಬಂದಿತೆಂದರೆ ಅದನ್ನು ಕ್ಷಮಿಸುವುದಿಲ್ಲ ಅಥವಾ ಹಾಗೆಯೇ ಬಿಟ್ಟು ಬಿಡುವುದಿಲ್ಲ. ಒಂದು ರಾಜ್ಯದ ಶ್ರೀ ಸತ್ಯಸಾಯಿ ಸೇವಾ ಸಮಿತಿಯ ರಾಜ್ಯಾಧ್ಯಕ್ಷರಿಗೆ ಅವರು ಬರೆದರು: "ಸಮಿತಿಗಳನ್ನು ಕುರಿತು ನಾನು ಬರೆಯುವುದರಿಂದ ಯಾವ ಪ್ರಯೋಜನವೂ ಇಲ್ಲ. ಈ ಜಗತ್ತಿನ ಆಕರ್ಷಣೆಗಳು, ಸೆಳೆತಗಳ ಮೇಲೆ ವಿಜಯ ಸಾಧಿಸಿ ಮುಂದಿನ ಜಗತ್ತನ್ನು ಸಾಧಿಸಿಕೊಳ್ಳಬೇಕು ಎಂದು ನಾನು ಹೇಳುತ್ತಲೇ ಬಂದಿದ್ದೇನೆ; ಆದರೆ ಸಮಿತಿಯ ಸದಸ್ಯರು ಮುಂದಿನ ಜನ್ಮಗಳ ಹಾಗೂ ಮುಂದಿನ ಜಗತ್ತಿನ ವಿಚಾರವನ್ನೇ ಮಾಡುತ್ತಿಲ್ಲ. ಅವರಿಗೆ ಈ ಜನ್ಮ, ಈ ಜಗತ್ತು ಅಷ್ಟೇ ಆಗಿದೆ. ಇದೊಂದೇ ಅವರಿಗೆ ಗುರಿ, ಏಕೈಕ ಅಳತೆಗೋಲು. ಅಂತಹ ಜನರಿಗೆ ಜ್ಞಾನದ ಬೆಳಕು ರಾತ್ರಿಯ ಹೊತ್ತು ಮಿಂಚುಹುಳು ಬೀರುವ ಬೆಳಕಿನಷ್ಟೇ ಮಸುಕಾಗಿರುತ್ತದೆ. ನಕ್ಷತ್ರಗಳು ಆಕಾಶದಲ್ಲಿ ಮಿನುಗುತ್ತಾ ಚಂದ್ರನ ಪ್ರಕಾಶಕ್ಕೆ ಹೋಲಿಸಿದರೆ ಅತಿ ಸಣ್ಣ ಚುಕ್ಕೆಗಳಾಗಿ ಕಾಣಿಸಿದರೂ ಅವು ನಿಜವಾಗಿ ಅತ್ಯಂತ ಉಜ್ವಲವಾಗಿರುತ್ತವೆ. ಅವು ಒಂದೊಂದೂ ನೂರಾರು ಸೂರ್ಯರನ್ನು ಒಟ್ಟಿಗೆ ಕಟ್ಟಿ ಕೊಟ್ಟಷ್ಟು ಉಜ್ವಲ. ಅಜ್ಞಾನಿಗಳಾದ ನೋಡುಗರಿಗೆ ಅವು ಕೇವಲ ಒಂದು ಕಿಡಿಯ ಹಾಗೆ, ಚಂದ್ರನು ಅಗಾಧವಾದ ಬೆಳಕಿನ ಮೂಲದ ಹಾಗೆ. ಇಂತಹ ಜನರು ಭವಿಷ್ಯತ್ತು ಬಹಳ ದೂರದಲ್ಲಿರುವುದರಿಂದ ಅಮುಖ್ಯವೆಂದೂ, ಇಲ್ಲೇ ಈಗಲೇ ಇರುವುದರಿಂದ ವರ್ತಮಾನವು ಅತಿ ಮಹತ್ವದ್ದೆಂದೂ ಭಾವಿಸುತ್ತಾರೆ. ಅವರು ಚಂದ್ರನನ್ನು ಬೆರಗಾಗಿ ನೋಡುತ್ತಾ, ನಕ್ಷತ್ರಗಳನ್ನು ಗಮನಿಸುವುದೇ ಇಲ್ಲ. ಇಂದು ನಾಗರಿಕತೆಯು ಆಟಂ ಬಗ್ಗೆ ವಿಚಾರ ಮಾಡುತ್ತಿದೆ, ಆತ್ಮದ ಬಗೆಗಲ್ಲ."

## ಇದನ್ನು ಗಟ್ಟಿಯಾಗಿ ಓದಿ

ದೀರ್ಘಕಾಲ ಪ್ರಶಾಂತಿ ನಿಲಯದಿಂದ ಹೊರಗಿರುವ ಸಂದರ್ಭದಲ್ಲಿ ಬಾಬಾ ಅಲ್ಲಿನ ನಿವಾಸಿಗಳಿಗೆ ಗಟ್ಟಿಯಾಗಿ ಓದಿ ಹೇಳಬೇಕೆಂದು ಆಗಾಗ ಪತ್ರಗಳನ್ನು ಬರೆಯುತ್ತಾರೆ. ಸಾಮಾನ್ಯವಾಗಿ ಅವು ತಾವು ನಿವಾಸಿಗಳಿಗೆ ಹಾಕಿಕೊಟ್ಟ ನಿಯಮ ನಿಬಂಧನೆಗಳನ್ನು ತಪ್ಪದೆ ಗೌರವಿಸಬೇಕಾದ ಅಗತ್ಯವನ್ನು ಚುರುಕು ಮಾತಿನಲ್ಲಿ ನೆನಪು ಮಾಡಿಕೊಡುವ ಪತ್ರಗಳು. "ಮಂದಿರದಲ್ಲಿರುವ ಎಲ್ಲರಿಗೂ ಆಶೀರ್ವಾದಗಳು!", ಅವರು ಬರೆಯುತ್ತಾರೆ, "ಅವರವರಿಗೆ ವಿಧಿಸಿದ ಕರ್ತವ್ಯಗಳನ್ನೂ ಹೊಣೆಗಾರಿಕೆಗಳನ್ನೂ ತಪ್ಪದೆ ಆಚರಿಸಬೇಕೆಂದು ಅವರಿಗೆ ಹೇಳು. ದೈನಂದಿನ ಕಾರ್ಯಕ್ರಮವಾದ ಪೂಜೆ, ಧ್ಯಾನ, ಭಜನೆ, ಸಂಕೀರ್ತನೆ ಮತ್ತು ಅಧ್ಯಯನ ಇವುಗಳನ್ನು ಸಮಯಕ್ಕೆ ಸರಿಯಾಗಿ ಪೂರ್ಣ ಶ್ರದ್ಧಾ ಭಕ್ತಿಯಿಂದ ನಡೆಸಲು ಹೇಳು. ಜನರು ಪರಸ್ಪರ ಪ್ರೀತಿಯಿಂದ, ಗೌರವದಿಂದ ನಡೆದುಕೊಳ್ಳಬೇಕು. ಹೊಟ್ಟೆಕಿಚ್ಚು, ಮತ್ಸರ, ಲೋಭ, ಗರ್ವ, ಕ್ರೋಧ ಮೊದಲಾದವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳದೆ ಸಾಧನೆ ಮಾಡಿದರೆ ಏನು ಪ್ರಯೋಜನ? ನೀವು ಎಷ್ಟೇ ಕಾಲ ಆಶ್ರಮದಲ್ಲಿ ಇದ್ದರೂ ಈ ದುರ್ಗುಣಗಳು ನೀವು ಗಳಿಸುವ ಯಾವುದೇ ಸದ್ಗುಣವನ್ನು ಹಾಳು ಮಾಡಿಬಿಡುತ್ತವೆ. ಮಳೆ ಬಿದ್ದುದರ ಗುರುತು ನೆಲವು ಒದ್ದೆಯಾಗುವುದರಲ್ಲಿದೆ, ಹಾಗೆಯೇ ಸಾಧನೆಯ ಗುರುತು ಇಂದ್ರಿಯಗಳನ್ನು ನಿಗ್ರಹಿಸುವುದರಲ್ಲಿದೆ. ಎಲ್ಲ ಬಗೆಯ ಅನಗತ್ಯ, ಅಸಂಗತ, ಅವಿವೇಕದ ಮಾತುಕತೆಗಳನ್ನೂ ಕಾರ್ಯ ಚಟುವಟಿಕೆಗಳನ್ನೂ ನಿಲ್ಲಿಸಿ; ಆತ್ಮ ಪರೀಕ್ಷಣ, ಆತ್ಮ ಶೋಧನ ಕಾರ್ಯಗಳಲ್ಲಿ ತೊಡಗಿ, ಸಾಧನೆಯ ಮೂಲಕವಾಗಿ ಒಳಗಣ್ಣನ್ನು ಬೆಳೆಸಿಕೊಳ್ಳಿ. ಹಿಂದಿನ ಅನೇಕ

ಜನ್ಮಗಳಲ್ಲಿ ಮಾಡಿದ ಸತ್ಕಾರ್ಯಗಳ ಫಲವಾಗಿ ಈಗ ದೊರೆತಿರುವ ಈ ಸದವಕಾಶದ ಪೂರ್ಣ ಪ್ರಯೋಜನ ಪಡೆದುಕೊಳ್ಳಿ, ನಿಜ, ಸ್ವಾಮಿಯ ಅನುಗ್ರಹ ಮತ್ತು ಪ್ರೇಮ ಸದಾ ನಿಮ್ಮ ಮೇಲಿರುತ್ತದೆ. ಆದರೆ ಅದನ್ನು ಹೆಚ್ಚು ಹೆಚ್ಚಾಗಿ ಗಳಿಸಿಕೊಳ್ಳುವ ಸಲುವಾಗಿ ಪ್ರತಿದಿನವೂ ಸಾಧನೆ ಮಾಡಬೇಕು, ಹೆಚ್ಚು ಹೆಚ್ಚು ಉತ್ಸಾಹದಿಂದ ಮಾಡಬೇಕು. ಪುಟ್ಟಪರ್ತಿ ಮತ್ತು ಪ್ರಶಾಂತಿ ನಿಲಯಗಳಲ್ಲಿನ ನಿವಾಸಿಗಳು ಮಾನವ ಜನಾಂಗಕ್ಕೆ ದಾರಿ ಹಾಕಿಕೊಡಬೇಕು. ಆದ್ದರಿಂದ ಅವರು ಧಾರ್ಮಿಕವಾದ, ವಿನಯಪೂರ್ಣವಾದ, ಶಿಸ್ತು ಬದ್ಧವಾದ, ಸಂಯಮಯುತ ಜೀವನವನ್ನು ನಡೆಸಬೇಕು."

## ಪ್ರಿಯ ಬಾಲಕರೆ

ಈಗ ಸತ್ಯಸಾಯಿ ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗಾಗಿ ಭಗವಾನರು ಬರೆದ ಕೆಲವು ಪತ್ರಗಳನ್ನು ನೋಡಬಹುದು. ಈ ಮಕ್ಕಳು ಬಾಬಾ ಅವರ ಅತಿ ಸಮೀಪ ಸಂಪರ್ಕ ಪಡೆದಿದ್ದವರು. ಭ್ರಮಾತ್ಮಕ ವೈವಿಧ್ಯದ ಕೆಳಗೆ ಆಧಾರ ಭೂತವಾಗಿರುವ ಏಕತ್ವವನ್ನು ಕುರಿತು ಬಾಬಾ ಆತ್ಮೀಯವಾಗಿ ಅನೇಕ ಸಾರಿ ಮಾತನಾಡಿರುವುದನ್ನು ಕೇಳುವ ಸುಯೋಗ ಪಡೆದವರು. ವ್ಯಕ್ತಿ ಮತ್ತು ವಿಶ್ವ, ಆತ್ಮ-ಪರಮಾತ್ಮಗಳ ವಿಚಾರವಾಗಿ ಬಾಬಾ ಅವರ ಬೋಧನೆಯ ತಿರುಳು ಏನಿದೆ, ಅದನ್ನು ಈ ಪತ್ರಗಳು ತೆರೆದು ತೋರಿಸುತ್ತವೆ.

1974ರ ಜನ್ಮಾಷ್ಟಮಿಯಂದು ಅವರು ಬೃಂದಾವನದಲ್ಲಿನ ಕಾಲೇಜು ವಿದ್ಯಾರ್ಥಿಗಳಿಗಾಗಿ ಈ ಪತ್ರವನ್ನು ಕಳಿಸಿದರು ( ಈ ಪತ್ರಗಳನ್ನು ಬಾಬಾ ಅವರೇ ಸ್ವಹಸ್ತದಿಂದ ಇಂಗ್ಲೀಷಿನಲ್ಲಿ ಬರೆಯುತ್ತಾರೆ ಎನ್ನುವುದು ಹೊಸಬರಿಗೆ ಸುದ್ದಿಯಾದರೂ ಅವರ ಭಕ್ತರಿಗೆ ಆಶ್ಚರ್ಯದ ಸಂಗತಿಯಲ್ಲ). "ಬನ್ನಿ, ನೀವೆಲ್ಲರೂ ಬನ್ನಿ, ನಿಮ್ಮನ್ನು ನನ್ನಲ್ಲಿ ನೋಡಿ, ಏಕೆಂದರೆ ನಿಮ್ಮ ಒಬ್ಬೊಬ್ಬರಲ್ಲೂ ನನ್ನನ್ನು ನಾನು ನೋಡುತ್ತಿದ್ದೇನೆ. ನೀವೇ ನನ್ನ ಪ್ರಾಣ, ನನ್ನ ಉಸಿರು, ನನ್ನ ಆತ್ಮ, ನೀವೆಲ್ಲರೂ ನನ್ನ ರೂಪಗಳೇ. ನಿಮ್ಮನ್ನು ಪ್ರೀತಿಸುವಾಗ ನಾನು ನನ್ನನ್ನೇ ಪ್ರೀತಿಸುತ್ತೇನೆ; ನೀವು ನಿಮ್ಮನ್ನು ಪ್ರೀತಿಸಿದಾಗ ನಿಜವಾಗಿ ನನ್ನನ್ನು ಪ್ರೀತಿಸುವಿರಿ. ನನ್ನನ್ನು ನಾನು ಪ್ರೀತಿಸಿಕೊಳ್ಳುವ ಸಲುವಾಗಿಯೇ ನನ್ನನ್ನು ಬೇರ್ಪಡಿಸಿಕೊಂಡಿದ್ದೇನೆ. ನನ್ನ ಪ್ರೀತಿಯ ಮಕ್ಕಳೆ, ನೀವು ನಾನೇ ಆಗಿದ್ದೀರಿ." ಈ ವಿಶ್ವವನ್ನು ತಮ್ಮಿಂದಲೇ ಸೃಷ್ಟಿಸಿದರು ಎಂದು ಬಾಬಾ ಘೋಷಿಸಿರುವುದಕ್ಕೆ ಇದು ಇನ್ನೊಂದು ಬೆಂಬಲಕೊಡುವ ಪುರಾವೆ. ಒಂದು ಶಬ್ದದಿಂದ ಈ ಎಲ್ಲ ವೈವಿಧ್ಯವೂ ಆದರು (ಏಕೋಽ ಹಂ ಬಹುಸ್ಯಾಂ).

ತಾವೇ ಎಲ್ಲರ ಆಂತರಿಕ ಪ್ರೇರಕ ಶಕ್ತಿ ಎಂದು ಬಾಬಾ ಸೂಚಿಸಿರುವ ಇನ್ನೊಂದು ಪತ್ರವನ್ನು ಉದ್ಧರಿಬಯಸುತ್ತೇನೆ. "ನನ್ನ ಹುಡುಗರೆ, ಹಕ್ಕಿ ನಿಮ್ಮ ಬಳಿ ಇದೆ, ಅದರ ರೆಕ್ಕೆಗಳು ನನ್ನ ಬಳಿ ಇವೆ; ಹೆಜ್ಜೆ ನಿಮ್ಮಲ್ಲಿ, ದಾರಿ ನನ್ನಲ್ಲಿ; ಕಣ್ಣು ನಿಮ್ಮಲ್ಲಿ, ರೂಪ ನನ್ನಲ್ಲಿ; ವಸ್ತು ನಿಮ್ಮಲ್ಲಿ, ಕನಸು ನನ್ನಲ್ಲಿ; ಜಗತ್ತು ನಿಮ್ಮಲ್ಲಿ, ಸ್ವರ್ಗ ನನ್ನಲ್ಲಿ- ನಾವು ಪರಸ್ಪರ ಬೆಸೆದುಕೊಂಡಿರುವುದು ಹಾಗೆ, ಸ್ವತಂತ್ರರಾಗಿರುವುದು ಹಾಗೆ, ಹಾಗೆಯೇ ನಾವು ಪ್ರಾರಂಭ ಮಾಡುತ್ತೇವೆ, ಹಾಗೆಯೇ ಮುಗಿಸುತ್ತೇವೆ. ನಾನು ನಿಮ್ಮಲ್ಲಿ ಮತ್ತು ನೀವು ನನ್ನಲ್ಲಿ "ಮೇಲು ನೋಟಕ್ಕೆ ಇದು ನಾಟುನುಡಿಯ ಚಮತ್ಕಾರದ ಹಾಗೆ ತೋರಬಹುದು. ಆದರೆ ಅದರ ತಳದಲ್ಲಿ ಸತ್ಯದ ಭಂಡಾರವೇ ಹುದುಗಿದೆ. "ನಾನು

ತಂದೆಯಲ್ಲಿದ್ದೇನೆ, ಮತ್ತು ತಂದೆಯು ನನ್ನಲ್ಲಿದ್ದಾನೆ" (ಜಾನ್ 14:11) ಮೂಲತಃ ಮನುಷ್ಯನು ಒಂದು ಅಖಂಡ ವಸ್ತುವಿನ ತುಣುಕು ಅಂಶ, ವಸ್ತುವನ್ನು ಅನ್ವೇಷಿಸುವ ಕಲ್ಪನೆ. ಭಗವಂತನೊಬ್ಬನೇ ಸೊನ್ನೆಯ ಪಕ್ಕದಲ್ಲಿ ಪೂರ್ಣಾಂಕವಾಗಿ ನಿಂತು ಅದಕ್ಕೆ ಬೆಲೆಕೊಡುವ ಶಕ್ತಿ.

ಮೌಂಟ್ ವಿಲ್ಸನ್‌ನಿಂದ ಗುಸ್ತಾಫ್ ಸ್ಟ್ರಾಂಬರ್ಗ್ ಬರೆಯುತ್ತಾನೆ. "ಜೀವಿಯ ವಿಕಾಸವು ಒಂದು ನಿರ್ದಿಷ್ಟ ಕಾರ್ಯವನ್ನು ಮುಂದೆ ಸಾಧಿಸುವುದಕ್ಕೋಸ್ಕರವಾಗಿ ಒಂದು ಯಂತ್ರವನ್ನು ನಿರ್ಮಾಣ ಮಾಡುವ ಹಾಗೆಯೇ. ಮೊದಲು ಒಂದು ನೀಲನಕ್ಷೆ ಹಾಕಿಕೊಳ್ಳಬೇಕು. ಇದನ್ನು ಬುದ್ಧಿವಂತನಾದವನು ಮಾತ್ರ ಮಾಡಲು ಸಾಧ್ಯ. ಗತಕಾಲದ ಅನುಭವಗಳ ಮೇಲೆ ಗಮನಕೊಡುವುದು ಮಾತ್ರವಲ್ಲದೆ ಅವನು ಆ ಯಂತ್ರವನ್ನು ಯಾವ ಉದ್ದೇಶದಿಂದ ನಿರ್ಮಿಸಲಾಗುತ್ತಿದೆ ಎಂಬುದನ್ನು ಚೆನ್ನಾಗಿ ಅರಿತವನಾಗಿರಬೇಕು. ನಿಸರ್ಗಕ್ಕೆ ಮುಂದಾಲೋಚನೆಯಿದೆ, ಬುದ್ಧಿವಂತಿಕೆಯಿದೆ. ಅತ್ಯಂತ ಸುವ್ಯವಸ್ಥಿತ ಕಾರ್ಯ ಚಟುವಟಿಕೆಗೆ ಅದು ಸಮರ್ಥವಾಗಿದೆ. ರೂಪರಹಿತ ಪ್ರಕೃತಿಗೆ ಅಂತಹ ಲಕ್ಷಣಗಳಿರುವುದು ಸಾಧ್ಯವಿಲ್ಲವಾದ್ದರಿಂದ ನಾವು ರೂಪ ಸಹಿತ ಭಗವಂತನನ್ನು ಕಲ್ಪಿಸಿಕೊಂಡಿದ್ದೇವೆ." ಮೇಲೆ ಸೂಚಿಸಿದ ಬಾಬಾ ಅವರ ಪತ್ರವು ಅಂತಹ ಭಗವತ್ ಶಕ್ತಿಯನ್ನು ಸ್ಮರಣೆಗೆ ತರುತ್ತದೆ.

## ನಾನು ಮತ್ತು ಆತ್ಮ

ನಮ್ಮಲ್ಲಿನ ಒಬ್ಬೊಬ್ಬರ ಸತ್ಯವನ್ನು ತೆರೆದು ತೋರಿಸುವ ಇನ್ನೊಂದು ಪತ್ರವನ್ನು ಜನ್ಮಾಷ್ಟಮಿ ದಿನದಂದು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಬಾಬಾ ಬರೆದರು:

ಪ್ರೀತಿಯ ಹುಡುಗರೆ,

ಸ್ವಾರ್ಥಿಗಳೂ, ಪ್ರೇಮವನ್ನು, ಕಾಣದವರೂ, ಪ್ರೇಮಿಸದವರೂ ಆದ ಜನರೇ ತುಂಬಿರುವ ಇಂದಿನ ಜಗತ್ತಿನಲ್ಲಿ 'ಸ್ವ- ಪ್ರೇಮ' ಎಂದು ಕರೆಯುವ ಒಂದು ಬಗೆಯ ನಾಸ್ತಿಕತೆ ಹೆಚ್ಚಿದೆ. ಎಷ್ಟರಮಟ್ಟಿಗೆ ಅದು ಹರಡಿದೆಯೆಂದರೆ ಹೆಚ್ಚು ಕಡಿಮೆ ಅದು ವಿಶ್ವವ್ಯಾಪಿಯಾದ ಧರ್ಮವಾಗಿ ಬಿಡಬಹುದು.

ಆತ್ಮ ಎನ್ನುವುದೇನು? ಅದು 'ನಾನಲ್ಲ' ಎಂದು ಹೇಳುವ ಆತ್ಮ. ಏಕೆಂದರೆ ಅದು 'ನಾನು' ಎಂದು ಹೇಳಿದರೆ ಆಗ ಅದು ಮಿಥ್ಯಾ ಆತ್ಮವಾಗುತ್ತದೆ. ನಿಜವಾದ ಆತ್ಮವು ನಿಸ್ವಾರ್ಥವಾದದ್ದು; ತನ್ನ ಬಗೆಗಾಗಲಿ, ತನಗೋಸ್ಕರವಾಗಲಿ ಯಾವುದೇ ಆಲೋಚನೆಯಿಲ್ಲದ್ದು. ಈಗ ಅದು ತನ್ನನ್ನು ಮರೆತುಕೊಂಡಿದೆ ಏಕೆಂದರೆ ಅದು ಇತರರಲ್ಲಿ ಮಾತ್ರವೇ ತನ್ನನ್ನು ದರ್ಶಿಸಬಲ್ಲುದು. ಅದು ನಿಸ್ವಾರ್ಥವಾಗಿ ಪ್ರೀತಿಸುವ ಆತ್ಮ, ಏಕೆಂದರೆ ನಿಸ್ವಾರ್ಥ ಜ್ಞಾನವೇ ಸತ್ಯವಾಗಿದೆ. ಅದು ಶಾಂತವಾಗಿರುವ ಆತ್ಮ, ಏಕೆಂದರೆ ನಿಶ್ಶಬ್ದದಲ್ಲಿ ಎಲ್ಲಾ ಬಗೆಯ ಪ್ರಾಪಂಚಿಕತೆಗಳಿಂದ ವಿಮುಖತೆಯಿದೆ. ಅದು ಶಬ್ದ ರಹಿತ ಧ್ಯಾನದಲ್ಲಿರುವ ಆತ್ಮ, ಏಕೆಂದರೆ ನಿಶ್ಶಬ್ದ ಧ್ಯಾನವೆನ್ನುವುದು ದಿವ್ಯತೆಯೊಂದಿಗೆ ಸಂಪರ್ಕದ ಮೂಲಕ ಮನಸ್ಸು ವಿಜಯಗಳಿಸುವುದೇ ಆಗಿದೆ. ಅದು ನಿರ್ಣಯಿಸುವುದಿಲ್ಲ, ಮೌಲ್ಯ ಮಾಪನ ಮಾಡುತ್ತದೆ. ಅದು ಹೋಲಿಸುವುದಿಲ್ಲ, ಆಶ್ರಯ ಕೋರುವುದಿಲ್ಲ ಅಥವಾ ಕೊನೆಗೆ ತನ್ನನ್ನು ತಾನು ನೋಡುವುದೂ ಇಲ್ಲ. ಅದು ತನ್ನನ್ನು ಸಂಪೂರ್ಣವಾಗಿ ಹೀರಿಕೊಂಡಿರುವ ಆತ್ಮ, ಆದರೂ ವಿಚಿತ್ರವಾದ

ಮತ್ತು ಅನುಭಾವಿಕವಾದ ರೀತಿಯಲ್ಲಿ ಅದು ತನಗೆ ತಾನೇ ಅಧಿಕವಾಗಿದೆ, ಹೆಚ್ಚು ಸಮಗ್ರವಾಗಿದೆ, ಪೂರ್ಣವಾಗಿದೆ, ಹಿಂದೆಂದೂ ಇದ್ದುದಕ್ಕಿಂತ ಹೆಚ್ಚು ಸತ್ಯವಾಗಿದೆ. ಅದೇ ನಿಜವಾದ ಆತ್ಮ.

ಪ್ರೇಮವೇ ದೇವರು, ಮತ್ತು ನಿಸ್ವಾರ್ಥತೆಯೇ ಪ್ರೇಮ. ನಿಸ್ವಾರ್ಥತೆಯೆಂದರೆ ಅಹಂಕಾರ ಮತ್ತು ಪ್ರತ್ಯೇಕತಾ ಭಾವನೆಯನ್ನು ತೊಡೆದುಹಾಕುವುದೇ ಆಗಿದೆ. 'ನಾನು' ಎಂಬ ನಕಲಿ ವಸ್ತುವಿನ ಪ್ರತ್ಯೇಕತಾ ಭಾವನೆಯೊಂದಿಗೆ ತಪ್ಪಾಗಿ ಒಂದುಗೂಡುವುದನ್ನು ತೊರೆಯಬೇಕು, ಸ್ವಾರ್ಥವು ಪ್ರತ್ಯೇಕತೆಗೆ ದಾರಿ; ಪ್ರತ್ಯೇಕತೆ ಪೂರ್ಣದ ಪವಿತ್ರದ, ಭಗವಂತನ ನಿರಾಕರಣೆ.

ಭಗವಂತನನ್ನು ನಿರಾಕರಿಸುವುದನ್ನು ನಾಸ್ತಿಕತೆ ಎಂದು ಕರೆಯಲಾಗುತ್ತದೆ. ಈಗ ಅರ್ಥ ಮಾಡಿಕೊಳ್ಳುವಂತೆ ಈ ಧರ್ಮವನ್ನೋ ಆ ಧರ್ಮವನ್ನೋ ದೇವರ ಇದೋ ಅದೋ ಕಲ್ಪನೆಯನ್ನೋ ನಿರಾಕರಿಸುವುದು ನಾಸ್ತಿಕತೆಯಲ್ಲ. ಅದು ಭಗವಂತನ ಸ್ವರೂಪವೇ ಆದ ಪ್ರೇಮದ ಬದುಕಿನ ನಿರಾಕರಣೆ, ಅಹಂಕಾರದ ಬದುಕಿನ ಸಮರ್ಥನೆ.

'ಸ್ವಾರ್ಥ ತ್ಯಾಗ' ಎಂಬ ಭಗವನ್ಮುಖವಾದ ಪ್ರಕ್ರಿಯೆ, ಮೂಲತಃ ಪ್ರೇಮವೇ ಆಗಿದೆ. ಏಕೆಂದರೆ ಪ್ರೇಮವೇ ದೇವರು. ಪ್ರೇಮವೊಂದೇ ಅವನ ಕಡೆಗೆ ನಮ್ಮನ್ನು ಒಯ್ಯಬಲ್ಲುದು. ಅತ್ಯಂತ ದೈವಿಕವಾದ ಕಾರ್ಯವು ಪ್ರೇಮದ್ದಾದುರಿಂದ ಅತ್ಯಂತ ದೈವರಹಿತ ಕಾರ್ಯವು ದ್ವೇಷದ್ದು.

ಪ್ರತ್ಯೇಕತೆಯೇ ಆದ ದ್ವೇಷವು ಸ್ವಾರ್ಥವಿರುವಲ್ಲಿ ಮಾತ್ರ ಉದಯಿಸುತ್ತದೆ. ಹೀಗೆ ಅತ್ಯಂತ ದೈವ ದೂರವಾದ, ಪ್ರೇಮರಹಿತವಾದ, ನಾಸ್ತಿಕವಾದ, ಸ್ವಾರ್ಥಪೂರಿತ ಕ್ರಿಯೆಯು ಸಂಭವಿಸುತ್ತದೆ.

ಭಗವನ್ಮುಖವಾಗಬೇಕಾದರೆ ಪ್ರೇಮವು ಸಂಪೂರ್ಣವಾಗಿ ಸ್ವಾರ್ಥರಹಿತವಾಗಿರತಕ್ಕದ್ದು, ದೈವಿಕವಾಗಿರತಕ್ಕದು. ಅದರ ಧೋರಣೆ 'ಪ್ರೀತಿ ಪಾತ್ರನು ಮೊದಲು' ಎಂಬುದು; ಅದರ ಕಾರ್ಯವಿಧಾನ 'ನನ್ನದಕ್ಕಿಂತ ಮೊದಲು ನಿನ್ನ ಸಂತೋಷ! ಸಂತೋಷಕ್ಕೆ ದಾರಿ ವ್ಯಕ್ತಿಯು ತನ್ನನ್ನು ಮರೆತು ಭಗವಂತನನ್ನು, ಸಾಯಿಕೃಷ್ಣನನ್ನು ಸ್ಮರಿಸುತ್ತಿರುವುದು.

*ಆಶೀರ್ವಾದಗಳೊಡನೆ ಪ್ರೀತಿಯಿಂದ*

ಶ್ರೀ ಸತ್ಯಸಾಯಿ

## ಅವರ ಎರಡು ಕಣ್ಣುಗಳು

ಅಮೇರಿಕದಲ್ಲಿ ವಾಸಮಾಡುತ್ತಿರುವ ಓರ್ವ ಭಾರತೀಯ ದಂಪತಿಗಳನ್ನು ಕುರಿತು ಅದ್ಭುತ ಘಟನೆಯೊಂದಿದೆ. ಗಂಡ ಡಾ. ವೈ. ಎಸ್. ತಾತಾಚಾರಿ ಒಬ್ಬ ನಿಷ್ಠಾವಂತ ಬಯೋಫಿಸಿಸಿಸ್ಟ್. ಕೆಲವು ವರ್ಷ ಮಾಸಾಚುಸೆಟ್ಸ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ, ಆ ಮೇಲೆ ಸ್ಟಾನ್‌ಫರ್ಡ್ ವಿಶ್ವವಿದ್ಯಾಲಯ ಹಾಗೂ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯಗಳಲ್ಲಿ ಕೆಲಸ ಮಾಡಿದರು. ಸುಮಾರು 1960ರಲ್ಲಿ ಅವರಿಗೆ ರ್‍ಹುಮೆಟಾಯ್ಡ್ ಆರ್ಥ್ರೈಟಿಸ್ ಆಗಿದೆ ಎಂದು ವೈದ್ಯರು ಅನುಮಾನ ಪಟ್ಟರು. ಸ್ಟಾನ್‌ಫರ್ಡಿನಲ್ಲಿ ಡಜನ್‌ಗಟ್ಟಲೆ ಎಕ್ಸ್‌ರೆಗಳು, ಮಿದುಳು ಸ್ಕ್ಯಾನಿಂಗ್ ರೇಡಿಯೋ ಆಕ್ಟಿವ್ ಮರ್ಕ್ಯುರಿಯೊಂದಿಗೆ ಸ್ಕ್ಯಾನಿಂಗ್, ಒಂದು ಶಸ್ತ್ರಚಿಕಿತ್ಸೆ, ಲೆಕ್ಕವಿಲ್ಲದಷ್ಟು ರಾಸಾಯನಿಕ ಪರೀಕ್ಷೆಗಳು,

ತಲೆಯ ಮೇಲೆ ಆಗಿದ್ದ ಬೋರೆಗಳ ಬಯಾಪ್ಸಿ (ತಲೆ ಬರುಡೆಯ ಮೇಲೆ ಬೇಕಾದಷ್ಟು ಬೋರೆಗಳಾಗಿದ್ದುವು) ಇವೆಲ್ಲವುಗಳ ನಂತರ ತಜ್ಞರು "ಅತ್ಯಂತ ಹಾನಿಕಾರವಾದ, ದ್ವಿಗುಣಗೊಳ್ಳುತ್ತಾ ಹೋಗುತ್ತಿರುವ ಕ್ಯಾನ್ಸರ್ ಗಡ್ಡೆಗಳು ತಲೆಯಲ್ಲಿ, ಕುತ್ತಿಗೆಯಲ್ಲಿ, ಪಕ್ಕೆಲುಬುಗಳಲ್ಲಿ ಮತ್ತು ಪೃಷ್ಠದಲ್ಲಿ ಆಗಿವೆ. ಹಾಗೂ, ಕ್ಯಾನ್ಸರಿನಲ್ಲಿ ಎವಿಂಗ್ಸ್ ಮತ್ತು ರೇಟಿಯಾಯಿಲುಂ ಸೆಲ್‌ಸಾರ್ಕೋಮಾ ಲಕ್ಷಣಗಳೆರಡೂ ಇವೆ" ಎಂದು ಅಭಿಪ್ರಾಯಪಟ್ಟರು. ಅದು ವೈದ್ಯಕೀಯ ಪರಿಭಾಷೆಯನ್ನು ಮಸುಕುಹಾಕಿದ ಮರಣಶಾಸನವಾಗಿತ್ತು. ನನಗೆ ಬರೆದ ಒಂದು ಪತ್ರದಲ್ಲಿ ತಾತಾಚಾರಿ ಇದಿಷ್ಟನ್ನು ಹೇಳಿ ಬರೆದರು. "ಹೀಗೆ ಪೆಟ್ಟಿನ ಮೇಲೆ ಪೆಟ್ಟು ಕೊಟ್ಟು ಸರ್ಜನರು, 'ಸ್ವಾಮಿ ಪವಾಡಗಳು ಸಂಭವಿಸುವುದುಂಟು. ನಿಮ್ಮ ವಿಷಯದಲ್ಲಿ ಅಂಥದೊಂದು ಪವಾಡ ಜರುಗಲಿ ಎಂದು ಆಶಿಸುತ್ತೇನೆ' ಎಂದು ಹೇಳಿ ಬಿಟ್ಟರು". ಇದು 1962ರಲ್ಲಿ ದಂಪತಿಗಳು ಭಾರತಕ್ಕೆ ಹಿಂದಿರುಗಿದರು, ಬಂಧು ಬಾಂಧವರ ನಡುವೆ ಇರುತ್ತಾ, ನೋವುಹಾರಕ ಚಿಕಿತ್ಸೆ ಮಾಡಿಕೊಳ್ಳುತ್ತಾ ದಿನಗಳೆದರು.

1964 ಜನವರಿಯಲ್ಲಿ ಮದರಾಸಿನ ವೈದ್ಯರು ತಾತಾಚಾರಿಯ ಪೃಷ್ಠದ ಮೂಳೆಗಳಲ್ಲಿ ವಿಪರೀತ ಹಾನಿಯುಂಟಾಗಿರುವುದನ್ನು ಗುರುತಿಸಿದರು. ಕ್ಯಾನ್ಸರ್ ಪಿತ್ಥಜನಕಾಂಗವನ್ನು ವ್ಯಾಪಿಸಿದೆ ಎಂದು ಘೋಷಿಸಿದರು. ಮುಂದೇನಾಯಿತೆಂಬುದನ್ನು ತಾತಾಚಾರಿಯೇ ಹೇಳಿ ಮುಗಿಸಲಿ: "1965ರಲ್ಲಿ ಒಬ್ಬ ಮಿತ್ರನು ಆಡಿದ ಮಾತಿನಿಂದ ಪ್ರೇರಿತನಾಗಿ ಭಗವಾನ್ ಶ್ರೀ ಸತ್ಯಸಾಯಿಬಾಬಾ ಅವರ ಕೃಪೆಯನ್ನು ಅರಸಿ ಹೋದೆ. ಅವರು ನನ್ನನ್ನು ಆಶೀರ್ವದಿಸಿ, ಮತ್ತೆ ಸ್ಟಾನ್‌ಫರ್ಡಿಗೆ ಹಿಂದಿರುಗಬೇಕೆಂದು ಸೂಚಿಸಿದರು. ಅಪೇಕ್ಷೆಯಾದರೆ ಎಂಡೋಕ್ಸಾನ್ ಮುಂದುವರಿಸುತ್ತಿರು ಎಂದರು. 1970ರಲ್ಲಿ ಮತ್ತೆ ಅವರ ದರ್ಶನ ಮಾಡಲು ಹೋದಾಗ, ಎಲ್ಲ ಔಷಧಿಗಳನ್ನೂ ಪಥ್ಯಗಳನ್ನೂ ನಿಲ್ಲಿಸಿಬಿಡು ಎಂದು ಆದೇಶಿಸಿದರು. ಕಾಯಿಲೆ ವಾಸಿಯಾಗಿದೆ ಎಂದೂ ಮತ್ತೆ ಮರುಕಳಿಸುವುದಿಲ್ಲವೆಂದೂ ಭರವಸೆ ನೀಡಿದರು. "ತಾತಾಚಾರಿ ಈಗ ಮತ್ತೆ ಅಮೇರಿಕದಲ್ಲಿ ತಮ್ಮ ಅಧ್ಯಾಪನ, ಸಂಶೋಧನ ಕಾರ್ಯಕ್ರಮಗಳಲ್ಲಿ ಸ್ವಲ್ಪವೂ ಕುಂದದ ಉತ್ಸಾಹದಿಂದ ಮುಂದುವರಿಯುತ್ತಿದ್ದಾರೆ. ನಡೆದ 'ಪವಾಡ'ಕ್ಕೆ ಅವರು ಕೃತಜ್ಞರಾಗಿದ್ದಾರೆ. ಎಲ್ಲ ಬಗೆಯ ವೈದ್ಯಕೀಯ ಭವಿಷ್ಯಗಳನ್ನು ಸುಳ್ಳು ಮಾಡಿದ ಈ ಅದ್ಭುತ ಪವಾಡ ಹೇಗೆ ನಡೆಯಿತು ಎಂದು ಕೇಳಿದಾಗ ಬಾಬಾ ಉತ್ತರಕೊಟ್ಟಿದ್ದು ಹೀಗೆ: "ನಾನು ಮಾಡಿದ್ದೆಲ್ಲ ಆತನಲ್ಲಿ ಆತ್ಮವಿಶ್ವಾಸ ಬೆಳೆಸಿ ತನ್ನನ್ನು ತಾನು ವಾಸಿಮಾಡಿಕೊಳ್ಳುವ ಇಚ್ಛಾಶಕ್ತಿಯನ್ನು ತುಂಬುವ ಕೆಲಸ. ನನ್ನ ಎಲ್ಲೆಯರಿಯದ ಪ್ರೇಮ, ಅದರ ಸಮಸಮನಾಗಿ ಭಕ್ತ ನಂಬಿಕೆಯ ತೀವ್ರತೆ ಇವು ಅಂತಿಮವಾಗಿ ಅಪೇಕ್ಷಿತ ಫಲ ನೀಡಿವೆ."

ಸುಮಾರು ಮೂರು ವರ್ಷಗಳ ಕೆಳಗೆ ಬಾಬಾ ಆ ದಂಪತಿಗಳಿಗೆ ಬರೆದರು : "ನನ್ನ ಪ್ರೀತಿಯ ಮಕ್ಕಳೆ, ನಿಮ್ಮ ದೇಹಗಳು ಬಹುದೂರ ದೂರದಲ್ಲಿದ್ದರೂ ನಿಮ್ಮ ಆಲೋಚನೆಗಳು ಸಾಯಿಯಲ್ಲಿವೆ ಎಂದು ನಾನು ಬಲ್ಲೆ. ಆ ಅರಿವು, ಮತ್ತು ಪ್ರೇಮ ಇಷ್ಟೇ ಸಾಕು ನನ್ನನ್ನು ನಿಮ್ಮ ಹತ್ತಿರದಲ್ಲಿ ಇರಿಸಲು ಆಲೋಚನೆಗಳಿಗೆ ಗೋಡೆಗಳಿಲ್ಲ, ಗಡಿಗಳಿಲ್ಲ, ಸಾಗರಗಳನ್ನು ದಾಟಿ ಕೂಡ ಅವು ನನ್ನನ್ನು ತಲುಪಬಹುದು. ನಾನಿಲ್ಲದೆ ಯಾರೊಬ್ಬರೂ ಇಲ್ಲ; ನಾನು ಪ್ರತಿಯೊಬ್ಬರೊಂದಿಗೆ, ಪ್ರತಿಯೊಬ್ಬರಲ್ಲಿ ಕೂಡ ಇದ್ದೇನೆ.

"ದೇಹ ಮಾತ್ರ ಹತ್ತಿರ ಇದ್ದು ಆಲೋಚನೆ ದೂರವಾದಾಗ ಪರಿಸ್ಥಿತಿಯು ಕಮಲದ ಸುತ್ತ ಕುಪ್ಪಳಿಸುವ ಕಪ್ಪೆಗಳಂತಾಗುತ್ತದೆ. ಆದರೆ ತಾವರೆಯು ಕೊಡಲು ಸಿದ್ಧವಾಗಿರುವ ಮಧುವಿನ ವಿಷಯ ದುಂಬಿಗಳಿಗೆ ಮಾತ್ರ ಗೊತ್ತು. ಅದರ ಸವಿಯನ್ನು ಹೀರಲು ಅವು ಸದಾ ತವಕಿಸುತ್ತಿರುತ್ತವೆ, ಅದರ ಬಳಿಗೆ ಧಾವಿಸುತ್ತಿರುತ್ತವೆ. ಬಂಗಾರೂ, ನಿಮ್ಮ ಮೇಲೆ ಸ್ವಾಮಿಯ ಅಪಾರ ಅನುಗ್ರಹವಿದೆ. ನಾಮವೆಲ್ಲಿದೆಯೋ ಅಲ್ಲಿ ರೂಪವೂ ಇದೆ.

"ಪೂರ್ಣ ಶ್ರದ್ಧೆಯಿಂದ, ಪೂರ್ಣ ಆರೋಗ್ಯದಿಂದ ನಿಮಗೆ ವಹಿಸಿರುವ ಕರ್ತವ್ಯಗಳನ್ನು ನಿರ್ವಹಿಸುತ್ತಾ ಹೋಗಿರಿ. ಸಾಯಿ ಸದಾ ನಿಮ್ಮ ಬಳಿ ಇದ್ದಾರೆ. ನಿಮ್ಮ ಜೀವನ ರಥದ ಸಾರಥಿ ಅವರು. ಸಂತೋಷಗಳು ಮತ್ತು ದುಃಖಗಳ ಮೂಟೆಗಳನ್ನು ಅಡಕಿದ ಜೀವನದ ಹಡಗು, ಆತ್ಮ ಸಾಕ್ಷಾತ್ಕಾರವೆಂಬ ಬಂದರಿಗೆ ಸುಕ್ಷೇಮವಾಗಿ ಬಂದು ಸೇರಬೇಕಾದರೆ ಪವಿತ್ರವಾದ ಮಾನಸಿಕ ಶಕ್ತಿಯ ಇಂಧನಬೇಕು; ಭಗವನ್ನಾಮದ ಜಪವೇ ಪಿಸ್ಟನ್ನುಗಳ ಡಗ್-ಡಗ್-ಡಗ್; ಪ್ರೇಮವೇ ಹಡಗಿನ ಚುಕ್ಕಾಣಿ; ಶ್ರದ್ಧೆಯೇ ಅದರ ಲಂಗರು. ಪೂರ್ಣ ವಿಶ್ವಾಸದಿಂದ ಪಯಣವನ್ನು ಮುಂದುವರಿಸಿ. ಸಾಯಿ ನಿಮ್ಮನ್ನು ಯಾವುದೇ ಹಾನಿಯಾಗದಂತೆ, ದುಃಖವೊದಗದಂತೆ ರಕ್ಷಿಸುತ್ತಿದ್ದಾರೆ. ನೀವಿಬ್ಬರೂ ಅವರ ಎರಡು ಕಣ್ಣುಗಳಿದ್ದ ಹಾಗೆ. ನಿರಂತರವಾಗಿ ಸ್ವಾಮಿ ನಿಮ್ಮ ಮೇಲೆ ಕೃಪೆಯನ್ನು ವರ್ಷಿಸುತ್ತಿದ್ದಾರೆ. ಒಳಗಿನಿಂದ ಪ್ರೇರಣೆ ನೀಡುತ್ತಾರೆ, ಸೂಕ್ತ ಸಮಯದಲ್ಲಿ ತಿದ್ದುತ್ತಾರೆ. ನಿಮ್ಮ ಭಾಗದ ಕರ್ತವ್ಯ ಇಷ್ಟೇ: ನಿಮಗೆ ವಹಿಸಿರುವ ಕೆಲಸದಲ್ಲಿ ಪೂರ್ತಿ ಶ್ರದ್ಧೆಯಿಂದ ಮುಳುಗಿರಿ, ತನ್ಮಯರಾಗಿರಿ. ನೆನಪಿಡಿ ಅದು ಸ್ವಾಮಿಯ ಕೆಲಸ. ಅದು ನನ್ನ ಕೆಲಸವೆಂಬ ಪೂರ್ಣ ನಂಬಿಕೆಯಿಂದ ನೆರವೇರಿಸಿದಾಗ, ಆರೋಗ್ಯ ಆನಂದ ತಾವೇತಾವಾಗಿ ದೊರೆಕೊಳ್ಳುತ್ತವೆ."

ಆರ್. ಲಾಲ್ ಎಂಬ ಭಕ್ತನು ಮುಂಬಯಿಯಿಂದ ತನಗೆ ತೀವ್ರವಾದ ಹೃದಯಾಘಾತವಾಗಿದೆ ಎಂದು ಪತ್ರ ಬರೆದಾಗ ಬಾಬಾ ಅವರಿಗೆ ಬರೆದರು: "ಅದಕ್ಕೂ ನಿನ್ನ ಹೃದಯಕ್ಕೂ ಯಾವ ಸಂಬಂಧವೂ ಇಲ್ಲ. ಸಣ್ಣ ಏರುಪೇರನ್ನು ಉತ್ಪ್ರೇಕ್ಷೆ ಮಾಡಬೇಡ. ನಿನ್ನ ಹೃದಯದಲ್ಲಿ ಶಿವ- ಶಕ್ತಿ ಇದ್ದಾರೆ; ಹೃದಯಕ್ಕೆ ಯಾವುದೇ ಬೇನೆ, ಹಾನಿ ಒದಗಲು ಅವರು ಆಸ್ಪದ ಕೊಡುವುದಿಲ್ಲ. ಸಂತೋಷವಾಗಿರು. ಇಂದು ತಾಯಿ ಸಾಯಿ ತನ್ನ ಪ್ರೇಮವನ್ನು ನಿನ್ನ ಮೇಲೆ ಎರೆಯುತ್ತಿದ್ದಾಳೆ. ಅದು ನಿನಗೆ ಆರೋಗ್ಯ ಆನಂದ, ಶಾಂತಿ, ಸ್ಥೈರ್ಯ ಮತ್ತು ತೃಪ್ತಿಗಳನ್ನು ನೀಡುತ್ತದೆ."

ದುಃಖಿತೆಯಾಗಿದ್ದ ಓರ್ವ ಹಿಂದೂ ಮಹಿಳೆಗೆ ಅವರು ಸಮಾಧಾನ ಹೇಳಿದ ರೀತಿ ಇದು: "ತಾಯಿ, ನಿನ್ನ ಪತಿಯು ಭಗವಂತನಲ್ಲಿ ಲೀನವಾದ ಸಂಗತಿ ದಿಢೀರನೆ ನಿನಗೆ ಬಂದಿತು. ಅವನ ಸಾವಿಗೆ ಕಾರಣವಾದ ಅಪಘಾತದ ಸುದ್ದಿ ನಿನಗೆ ಆಘಾತವುಂಟು ಮಾಡಿರುವುದು ತೀರಾ ಸಹಜ. ನೀನೀಗ ಅಪಾರವಾದ ಒಂಟಿತನ, ಏಕಾಕಿತನವನ್ನು ಅನುಭವಿಸುತ್ತಿರುವೆ. ಭಾರತಮಾತೆಯ ಹೆಣ್ಣು ಮಕ್ಕಳು ತಮ್ಮ ಗಂಡಂದಿರನ್ನು ಸರ್ವಸ್ವವೆಂದು ಭಾವಿಸುತ್ತಾರೆ. ಅವರ ಆರೋಗ್ಯ, ಗೌರವ ಮನಶ್ಶಾಂತಿಗಳ ಬಗೆಗೆ ಅವರಿಗೆ ವಿಪರೀತ ಕಾಳಜಿ. ಆದರೂ ಒಂದು ವಿಷಯವನ್ನು ಮರೆಯುವಂತಿಲ್ಲ: ಈ ದೇಹವು ವಿವಿಧ ಭೂತದ್ರವ್ಯಗಳಿಂದಾಗಿದೆ. ಎಷ್ಟೇ ಎಚ್ಚರಿಕೆಯಿಂದ ಕಾಪಾಡಿಕೊಂಡಿದ್ದರೂ, ನನ್ನದೆಂದು ಹೇಳಿಕೊಂಡಿದ್ದರೂ ಒಂದು ದಿನ ಅದು ನಶಿಸಿ ಮತ್ತೆ ಮೂಲದ್ರವ್ಯಗಳಿಗೆ ಸೇರಿ

ಬಿಡಬೇಕಾಗುತ್ತದೆ. ಅದೊಂದು ಬಹು ದುರ್ಬಲವಾದ ರಚನೆ, ಬಹು ಸುಲಭವಾಗಿ ಅದು ನಿಷ್ಕ್ರಿಯವಾಗುವಂತೆ ಮಾಡಬಹುದು. ಎಲ್ಲೋ ಒಂದು ಜಾರಿಕೆ, ಒಂದು ಮುಗ್ಗರಿಸುವಿಕೆ, ಒಂದು ಪೆಟ್ಟು, ಒಂದು ಸೀನು, ಸ್ವಲ್ಪ ಅಜಾಗರೂಕತೆ, ಅತಿವೇಗದ ಒಂದು ಕ್ಷಣ ಅದನ್ನು ಊನಗೊಳಿಸಲು ಅಥವಾ ನಾಶಪಡಿಸಲು ಸಾಕಾಗುತ್ತದೆ. ಇವೆಲ್ಲವನ್ನೂ ಬಹು ಜಾಗರೂಕತೆಯಿಂದ ನಿವಾರಿಸಿಕೊಂಡು ಒಬ್ಬ ವ್ಯಕ್ತಿಯು ತನ್ನ ಜೀವನವನ್ನು ಇನ್ನಷ್ಟು ದೀರ್ಘಕಾಲ ಎಳೆಯಬಹುದೇ ಹೊರತು ಸಾವನ್ನು ಅವನು ನಿವಾರಿಸಲು ಸಾಧ್ಯವೇ ಇಲ್ಲ. ಅವತಾರ ಪುರುಷರೂ ಕೂಡ ಎಂದೋ ಒಂದು ದಿನ ಸಾವನ್ನು ನಿರ್ಧರಿಸಿಕೊಂಡೇ ಹುಟ್ಟುತ್ತಾರೆ. ಹುಟ್ಟಿದ ಮೇಲೆ ಸಾವು ಅದನ್ನು ಹಿಂಬಾಲಿಸಬೇಕು. ಅನಿವಾರ್ಯವೂ, ಹುಟ್ಟಿನ ತಪ್ಪಿಸಿಕೊಳ್ಳಲಾಗದ ಪರಿಣಾಮವೂ ಆದ ಸಾವನ್ನು ಕುರಿತು ಶೋಕಿಸುವುದು ವಿವೇಕವಲ್ಲ."

ಈಗ ಸುಮಾರು ಹತ್ತು ವರ್ಷಗಳ ಹಿಂದೆ ಗುಜರಾತಿನ ಒಬ್ಬ ಭಕ್ತನಿಗೆ ಅವರು ಒಂದು ಪತ್ರ ಬರೆದರು: "ಶತ ಶತಮಾನಗಳಿಂದ ಭಾರತೀಯ ಸಂಸ್ಕೃತಿಯಲ್ಲಿ ಮೊಳಗುತ್ತಿರುವ ಎರಡು ಮಹತ್ವದ ಸಂದೇಶಗಳು ಇವು: 'ತಾಯಿಯನ್ನು ದೇವರೆಂದು ಗೌರವಿಸು ತಂದೆಯನ್ನು ದೈವವೆಂದು ಗೌರವಿಸು'. ಇವು ಪವಿತ್ರ ಆದೇಶಗಳು. ತಂದೆ ತಾಯಂದಿರನ್ನು ಅಲಕ್ಷಿಸಿ, ಅವಿಧೇಯತೆಯಿಂದ ಅವರನ್ನು ನೋಯಿಸಿದರೆ ನನ್ನನ್ನೂ ಬಹುಬೇಗ ಅಲಕ್ಷಿಸುತ್ತೀರಿ, ನನಗೂ ಅವಿದೇಯರಾಗುತ್ತೀರಿ. ಇದು ಖಚಿತವಾಗಿ ನನಗೆ ಗೊತ್ತು. ನಿಮ್ಮ ಮಗ ನಿಮ್ಮ ಅಸ್ತಿತ್ವವನ್ನೇ ಗಣನೆಗೆ ತೆಗೆದುಕೊಳ್ಳದೆ ಅಲಕ್ಷಿಸಿದರೆ ಅವನು ನನ್ನನ್ನು ಪೂಜಿಸುತ್ತಿರುವುದಾಗಿ ಹೇಗೆ ತಾನೆ ಹೇಳಿಕೊಳ್ಳಬಲ್ಲನು? ಅದು ಶುದ್ಧ ಸುಳ್ಳು.

"ಭಗವಂತನು ಬಾಹ್ಯ ವೈಭವವನ್ನು ಅಪೇಕ್ಷಿಸುವುದಿಲ್ಲ; ಅಂತರಂಗ ಶುದ್ಧಿ ಇದೆಯೇ ಇಲ್ಲವೆ ಎಂದು ಪರೀಕ್ಷಿಸುತ್ತಾನೆ ಅಷ್ಟೆ. ಹೀನಾಯವಾಗಿ ಬದುಕಿದ ಬದುಕು ಜೀವವಿಲ್ಲದೆ ದೇಹವಿದ್ದ ಹಾಗೆ. ಸಂಸ್ಕೃತದಲ್ಲಿ ದೇಹ ಎಂಬ ಪದಕ್ಕೆ ಬೆಂಕಿಯಿಂದ ಸುಡುವಂಥದು ಎಂದರ್ಥ. ಅಂತರಂಗ ಶುದ್ಧಿಯನ್ನೊಳ್ಳದೆ ಬಾಳಬಯಸುವ ವ್ಯಕ್ತಿಯ ದೇಹವು ಆ ದಹನದ ಕ್ರಿಯೆಯಾಗಿ ಮಾತ್ರ ಬಾಳುವಂಥದಾಗುತ್ತದೆ. ಪದದ ಅರ್ಥವನ್ನು ಸ್ಥಿರಪಡಿಸುತ್ತದೆ. ಬೇರೆ ಯಾವ ಉದ್ದೇಶವನ್ನೂ ಪೂರೈಸುವುದಿಲ್ಲವಾದ್ದರಿಂದ ಭಗವಂತನ ಕೃಪೆಗೆ ಅದು ಪಾತ್ರವಾಗಲಾರದು.

ಶಿಕ್ಷಣದ ಮೌಲ್ಯವನ್ನು ಅಳೆಯಬೇಕಾದರೆ ಅದು ವಿದ್ಯಾರ್ಥಿಗಳಲ್ಲಿ ಬೆಳೆಸುವ ಸದ್ಗುಣಗಳ ಮೂಲಕ. ಏಕೆಂದರೆ ಸದ್ಗುಣದಿಂದ ಶಾಂತಿ ಮತ್ತು ಆನಂದ ದೊರಕುತ್ತದೆ. ಸದ್ಗುಣವಿಲ್ಲದ ಮನುಷ್ಯ ಬದುಕಿದ್ದೂ ಸತ್ತ ಹಾಗೆ, ಅಥವಾ ಅದಕ್ಕಿಂತಲೂ ಕೀಳು. ಶಿಕ್ಷಣವು ವ್ಯಕ್ತಿಗೆ ಹರಿತವಾದ ವಿವೇಚನ ಶಕ್ತಿಯನ್ನು ನೀಡುತ್ತದೆ. ಆದರೆ ನಿನ್ನ ಮಗನಿಗೆ ಅದೊಂದು ಕೊಳಕಾದ ಹೀನವಾದ ಗಳಿಕೆ. ಸತ್ಯ, ಧರ್ಮ, ಶಾಂತಿ ಮತ್ತು ಪ್ರೇಮಗಳು ಮುಖ್ಯವಾದ ಮೌಲ್ಯಗಳು. ನಾನು ಬೋಧಿಸುವುದು ಸತ್ಯವನ್ನು; ನನ್ನ ನಡವಳಿಕೆ ಧರ್ಮ; ಶಾಂತಿ ನನ್ನ ವ್ಯಕ್ತಿತ್ವದ ಕುರುಹು; ಪ್ರೇಮ ನನ್ನ ಸ್ವಭಾವವೇ ಆಗಿದೆ."

# ಮನಸ್ಸು ಮಾತ್ರ ಮಾರ್ಗ

ವಿದ್ಯಾರ್ಥಿನಿಲಯದ ಹುಡುಗರಿಗೆ ಕಳಿಸಿದ ಇನ್ನೆರಡು ಸಂದೇಶಗಳು ಅವು:

1. "ಮನಸ್ಸಿದ್ದಲ್ಲಿ ಮಾರ್ಗವಿದೆ ಅನ್ನುವ ಮಾತು ಸತ್ಯವಾದದ್ದು. ಮೊದಲು ಇಚ್ಛೆ ನಿಮ್ಮದೇ ಆಗಿದೆ. ಭಗವಂತನ ಸಮ್ಮತಿಯಿಂದ ಅದು ಪುಷ್ಟಿಗೊಳ್ಳುತ್ತದೆ. ಆದರೆ ಎಲ್ಲಿಯವರೆಗೆ ನೀವು ಅದನ್ನು ಭಗವದಿಚ್ಛೆಯಾಗಿ ಪರಿವರ್ತನೆಗೊಳಿಸುವುದಿಲ್ಲವೋ ಅಲ್ಲಿಯವರೆಗೆ ನೀನು ಕೈಬಿಡಲು ಅಪೇಕ್ಷೆಯಿಲ್ಲದ ಆಟವಾಡುತ್ತಿರುವಂತೆ ಅನ್ನಿಸುತ್ತದೆ. ಇಷ್ಟಪಟ್ಟಿದ್ದೇ ಆದರೆ ಯಾವಾಗ ಬೇಕಾದರೂ ನೀವು ಆಟವನ್ನು ಬದಲಾಯಿಸಬಹುದು. ನೀವು ದುರ್ಬಲರಲ್ಲ, ಅಸಹಾಯಕರಲ್ಲ. ಎಲ್ಲ ಶಕ್ತಿ ಮತ್ತು ಪುಷ್ಟಿ ನಿಮ್ಮೊಳಗೇ ಇದೆ. ಏಕಾಗ್ರತೆಯಿಂದ ಇಚ್ಛಿಸಿದ ಕೂಡಲೇ ಭಗವದ್ದರ್ಶನ ನಿಮಗೆ ದೊರಕುತ್ತದೆ. ನೀವು ಹಾಗೆ ಮಾಡುವುದಿಲ್ಲ ಅಷ್ಟೆ.

"ಸಾಯಿ ನಿಮ್ಮನ್ನು ಛೇಡಿಸುತ್ತಿಲ್ಲ; ಗಂಭೀರವಾಗಿ ಹೇಳುತ್ತಿದ್ದಾರೆ. ಅನುಭವದ ಆಳದಿಂದ ಸಂಗ್ರಹಿಸಿದ ಸತ್ಯಕ್ಕೆ ಅಭಿವ್ಯಕ್ತಿ ನೀಡುತ್ತಿದ್ದಾರೆ. 'ಎಲ್ಲಾ ಸಂದರ್ಭಗಳಲ್ಲಿ ಪರಮಾತ್ಮನ ಇಚ್ಛೆಯಲ್ಲಿ ವಿಶ್ವಾಸ ಮತ್ತು ಅದಕ್ಕೆ ಶರಣಾಗತಿ' ಎನ್ನುವುದೇ 'ಸತ್ಯದ ದರ್ಶನ', ಅಥವಾ 'ಸೃಷ್ಟಿಯ ನಿತ್ಯ ಸತ್ಯದ ಸಾಕ್ಷಾತ್ಕಾರ'ವಾಗಿರುತ್ತದೆ. 'ದೈವೇಚ್ಛೆಯಿದ್ದರೆ' ಎನ್ನುವ ಮಾತಿನ ಅರ್ಥ 'ನಿಮ್ಮದೇ ಸರ್ವಸಮರ್ಥ ಇಚ್ಛೆಯನ್ನು ಸ್ಥಿರೀಕರಿಸಿಕೊಂಡರೆ' ಎಂದು. ಆದ್ದರಿಂದ ನಿಜವಾದ ಪರಿಹಾರವಿರುವುದು ಒಳಗೆ ಸುಪ್ತವಾಗಿರುವ ನಿಮ್ಮ ಆತ್ಮ ಶಕ್ತಿಯನ್ನೂ ವೈಭವವನ್ನೂ ಜಾಗ್ರತಗೊಳಿಸುವುದು. ಮಕ್ಕಳೆ ಮೊದಲು ನೀವು ಅದನ್ನು ಮಾಡಿ. ನೀವೇ ಆ ನಿತ್ಯ ಸತ್ಯರು, ಪರಿವರ್ತನ ರಹಿತ ಸತ್ಯರೂಪರು. ನಿಮಗೆ ಯಶಸ್ಸು ದೊರಕಲಿ. ಆಶೀರ್ವಾದಗಳೊಡನೆ - ಬಾಬಾ"

2. "ಮಕ್ಕಳೆ, ಭಗವತ್ ಸಾಕ್ಷಾತ್ಕಾರದ ಮೂಲಕ ಮಾತ್ರವೇ ನಾವು ಜಗತ್ತಿನಲ್ಲಿ ನಿಜವಾಗಿ ಶಾಂತಿಯನ್ನು ಸ್ಥಾಪಿಸುವುದಕ್ಕೆ ಸಾಧ್ಯವಾಗುತ್ತದೆ. ಭೌತಿಕಸ್ತರದಲ್ಲಿ ಶಾಂತಿ ಸಾಮರಸ್ಯಗಳನ್ನು ಮೂಡಿಸುವುದಕ್ಕಾಗಿ ಹಿರಿಯ ನಾಯಕರು ಗಣನೀಯ ಪ್ರಯತ್ನ ಮಾಡುತ್ತಿದ್ದಾರೆನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಅವರ ಪ್ರಯತ್ನ ಯಶಸ್ವಿಯಾಗುವ ಲಕ್ಷಣ ಸಾಯಿಗೆ ಕಾಣಿಸುತ್ತಿಲ್ಲ.

"ನನಗೆ ಉಳಿದಿರುವ ಒಂದೇ ಒಂದು ಮಾರ್ಗವೆಂದರೆ, ನಮ್ಮ ಮನಸ್ಸನ್ನು ಒಳಕ್ಕೆ ತಿರುಗಿಸಿ, ನಿಜವಾದ ಮತ್ತು ನಿತ್ಯವಾದ ಆಧಾರ ಯಾವುದಿದೆಯೋ ಅದನ್ನು, ಅತಿ ಶ್ರೇಷ್ಠ ಶಾಂತಿ ಮೂಲವನ್ನು ಕಂಡುಕೊಳ್ಳುವುದು. ಆದರಿಂದ ಮಾತ್ರವೇ ನಾವು ಜಗತ್ತಿಗೆ ಆನಂದವನ್ನೂ, ಶಾಂತಿಯನ್ನೂ ದೊರಕಿಸಬಹುದು. ಆ ಆಧಾರವೇ ಭಗವಂತ. ಅವನು ನಮ್ಮ ಒಬ್ಬೊಬ್ಬರ ಹೃದಯನಿವಾಸಿಯೂ ಆಗಿದ್ದಾನೆ. ಅವನೇ ವಿಶ್ವಚೈತನ್ಯ.

"ನೀವು ಒಬ್ಬೊಬ್ಬರೂ ದೈವ ಸ್ವರೂಪರು. ನೀವೇ ಸತ್-ಚಿತ್- ಆನಂದವಾಗಿದ್ದೀರಿ. ಆದರೆ ಸತ್ಯವನ್ನು ನೀವು ಮರೆತು ಬಿಟ್ಟಿದ್ದೀರಿ. ಈಗ ಅದನ್ನು ಅರಿತುಕೊಳ್ಳಿ. ಮನಸ್ಸು ಕರಗಿ ನೀವು ಸತ್ಯವೇ ಆಗಿ ನಿಲ್ಲುವವರೆಗೆ ಧ್ಯಾನದಲ್ಲಿ ಲೀನವಾಗಿರಿ; ಮತ್ತೆ ಸಾಯಿ ಸವಿಯುತ್ತಿರುವಂತೆ ಆ ಶಾಶ್ವತ ಆನಂದವನ್ನು ಸವಿಯಿರಿ. ಆಶೀರ್ವಾದಗಳೊಡನೆ -ಬಾಬಾ."

# ಪತ್ರಗಳ ಮೂಲಕ ಬೋಧಿಸುವವರು

ಪಂಡಿತ ವೀರಭದ್ರಶರ್ಮ ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸರು. ವೇದ ಶಾಸ್ತ್ರಗಳನ್ನು ಕುರಿತು ಅವರು ಅದ್ಭುತವಾಗಿ ಮಾತನಾಡುವವರು. ಸ್ಪಷ್ಟವೂ, ಸರಳವೂ ಪ್ರಾಮಾಣಿಕವಾದ ನಿರರ್ಗಳ ತೆಲುಗು ಮಾತುಗಾರಿಕೆಯಿಂದ ಅವರು ಭಾರೀ ಸಭೆಯನ್ನು ಗಂಟೆಗಟ್ಟಲೆ ಮೂಕ ವಿಸ್ಮಿತರಾಗಿ ಕುಳಿತುಕೊಳ್ಳುವಂತೆ ಮಾಡಬಲ್ಲರು. ಜನಪ್ರಿಯವಾದ 'ಬುರ್ರಕಥಾ' ಸಂಗೀತ ಕಚೇರಿಗಳನ್ನೂ ನಡೆಸುವರು. ಅವರು ಸಂಸ್ಕೃತದಲ್ಲಿ ಸಾಯಿಗೀತಾ ಎಂಬ ಕೃತಿಯನ್ನು ರಚಿಸಿದ್ದಾರೆ. ಭಗವಾನರು ಬದರೀನಾಥಕ್ಕೆ ಹೋಗಿ ಆ ದಿವ್ಯಕ್ಷೇತ್ರವನ್ನು ಪಾವನಗೊಳಿಸಲು ನಿರ್ಧರಿಸಿದಾಗ ಆ ತಂಡದಲ್ಲಿ ವೀರಭದ್ರಶರ್ಮರೂ ಆಯ್ಕೆಯಾಗಿದ್ದರು.

ಈ ವೈಶಿಷ್ಟ್ಯಗಳಿದ್ದರೂ ಅವರ ಕಡುಬಡತನದ ಎಷ್ಟು ದಾರುಣವಾಗಿತ್ತೆಂದರೆ ಒಂದು ದಿನ ಶರ್ಮರು ಬಾಬಾ ಅವರನ್ನು 'ತಮ್ಮನ್ನು ಅಲಕ್ಷಿಸಿ ಮೇಲಿಂದ ಮೇಲೆ ಕಷ್ಟಗಳನ್ನು ಹೇರುತ್ತಿರುವುದಕ್ಕಾಗಿ' ನಿಂದಿಸಿದರು. ಅವರು ಹೀಗೆ ನಿಂದಿಸಿ ದೈವ ದ್ರೋಹ ಮಾಡುವುದು ಅವರ ಪತ್ನಿಗೆ ಹಿಡಿಸಲಿಲ್ಲ. ಪರಿಸ್ಥಿತಿಯನ್ನು ವಿವರಿಸಿ ಬಾಬಾ ಅವರಿಗೆ ತಾವು ಪತ್ರ ಬರೆಯುವುದಾಗಿ ಹೇಳಿದರು. ಅವರ ಅನುಗ್ರಹದಿಂದ ವಾತಾವರಣವು ಖಂಡಿತವಾಗಿ ತಿಳಿಯಾಗುತ್ತದೆ ಎಂಬ ಭರವಸೆ ಆಕೆಗೆ. ಆದರೆ ಶರ್ಮ ಖಡಾಖಂಡಿತವಾಗಿ ಹೇಳಿಬಿಟ್ಟರು. "ಬಾಬಾ ಅವರಿಗೆ ನಾನಾಗಲಿ ನೀನಾಗಲಿ ಯಾವ ಪ್ರಾರ್ಥನೆಯನ್ನೂ ಸಲ್ಲಿಸಕೂಡದು. ನಿಷ್ಕರುಣೆಯಿಂದ ಅವರು ನಮ್ಮ ವಿಶ್ವಾಸವನ್ನು ವಂಚಿಸಿದ್ದಾರೆ". ಇದು ನಡೆದದ್ದು 1962 ಜನವರಿ 20 ನೆಯ ತಾರೀಕು, ಪ್ರಶಾಂತಿನಿಲಯದಿಂದ ಎಂಟುನೂರು ಮೈಲು ದೂರದ ಕಾಕಿನಾಡದಲ್ಲಿ. ಭಗವಾನರಿಗೆ ಅವರ ಮನಸ್ಥಿತಿಯೂ , ಹಟವೂ ಗೊತ್ತಿದ್ದುದೇ. ಆದ್ದರಿಂದ ಅವರೇ ವೀರಭದ್ರಶರ್ಮರಿಗೆ ಒಂದು ಪತ್ರ ಬರೆದರು. ಅದು ಅವರಿಗೆ ಜನವರಿ 23ನೆಯ ತಾರೀಕು ತಲುಪಿತು. ಶರ್ಮ ಅದರ ವಿವರಗಳನ್ನು ನನಗೆ ತಿಳಿಸಿದರು. ಆ ಪತ್ರ ಭಗವದ್ಗೀತೆಯ ಒಂದು ಕಿರುರೂಪ. ತಪ್ಪು ಕಲ್ಪನೆ ಮಾಡಿಕೊಂಡು ಅವರ ತೆಕ್ಕೆಯಿಂದ ದೂರ ಹೋದವರ ಬಗೆಗೆ ಅವರು ತೋರಿಸುವ ಪ್ರೇಮ, ಹತಾಶರಾದವರಿಗೆ ಅವರ ಒಳಗೇ ಸುಪ್ತವಾಗಿರುವ ಶಕ್ತಿ ಸಾಮರ್ಥ್ಯಗಳನ್ನು ತೋರಿಸಿಕೊಟ್ಟು ಧೈರ್ಯ ತುಂಬುವ ರೀತಿ, ಅಜ್ಞಾನದ ಸಂಕೋಲೆಗಳನ್ನು ಕಳಚಿಕೊಂಡು ಬಂಧ ಮುಕ್ತರಾಗಲು ಅವರ ಹಾಕಿಕೊಡುವ ಮಾರ್ಗಗಳು - ಇವೆಲ್ಲ ಈ ಪತ್ರದಲ್ಲಿ ಅಡಕವಾಗಿವೆ. ಪತ್ರ ಹೀಗಿದೆ: "ಪ್ರೀತಿಯ ಮಗು ವೀರಭದ್ರಂ! ನೀನು ಭದ್ರಂ (ಸುರಕ್ಷಿತ, ಸಂತೋಷ, ವಿಶ್ವಾಸ ತುಂಬಿದವನು) ಅಲ್ಲವೆ? ಇದೆಂಥ ಮಾದರಿಯ ಭದ್ರಂ ಎಂದು ನೀನು ಕೇಳಬಹುದು. ಪ್ರಶ್ನೆ ಸಹಜವೇ ಆಗಿದೆ.

"ಬದುಕು ಯಾವುದೇ ಅಡ್ಡಿ ತಡೆಗಳಿಲ್ಲದೆ ಸ್ವಚ್ಛವಾಗಿ ಸರಾಗವಾಗಿ ಹರಿಯುತ್ತಿರುವಾಗ ಅದು ತನ್ನಿಂದಾಗಿಯೇ ಎಂದು ಭಾವಿಸಿ ದೇವರನ್ನು ಮರೆಯುವುದು; ಆ ಹರಿವಿಗೆ ತಡೆಗಳುಂಟಾದಾಗ ಪ್ರತಿ ತಿರುವಿನಲ್ಲೂ ಕಷ್ಟಗಳೆದುರಾದಾಗ ಗೋಳಾಡುತ್ತಾ, ಎದೆಗುಂದುವುದು- ಇವು ಮನುಷ್ಯನಲ್ಲಿರುವ ಮೂಲಭೂತವಾದ ಬೌದ್ಧಿಕ ದೌರ್ಬಲ್ಯವಲ್ಲವೆ? ನೀನೂ ಮನುಷ್ಯನೇ ಭದ್ರಂ, ಆದ್ದರಿಂದ ಹತಾಶೆಯಿಂದ ಕುಸಿಯುವುದು, ಪ್ರತಿ ಹೆಜ್ಜೆಗೂ ಕಷ್ಟಗಳು ಮೇಲೆರಗಿ ಬಂದಾಗ ನಿರಾಶನಾಗುವುದು ಇದರಲ್ಲಿ ಆಶ್ಚರ್ಯವೇನೂ ಇಲ್ಲ.

"ಮಾನವ ಜೀವನವು ಮೂಲ ಭೂತವಾಗಿ ಅಮೃತತ್ವದ ಅಭಿವ್ಯಕ್ತಿಯಾದರೂ, ಆನಂದದ ಅಖಂಡ ಪ್ರವಾಹವಾದರೂ, ಅವನು ಆತ್ಮದ ಅರಿವನ್ನು ಪಡೆಯದೆ ದೂರ ಉಳಿಯುತ್ತಾನೆ. ಮನಸ್ಸಿನ ಚಂಚಲತೆಗಳ ದಾಸನಾಗಿ, ಅಹಂಕಾರಕ್ಕೆ ಗುಲಾಮನಾಗುತ್ತಾನೆ. ಭ್ರಮೆಯ ಸಾಗರದ ಎತ್ತರದ ಅಲೆಗಳ ಮೇಲೆ ತೇಲುತ್ತಾ ಮುಳುಗುತ್ತಾ, ಏಳುತ್ತಾ ಬೀಳುತ್ತಾ ಕಾತರತೆ- ಶಾಂತಿಗಳ ನಡುವೆ, ದುಃಖ- ಆನಂದ- ಸಂಕಟ- ಸಂತೋಷಗಳ ನಡುವೆ ಹೊಯ್ದಾಡುತ್ತಾನೆ. ಜಗತ್ತಿನ ಮಿಥ್ಯೆಯೂ, ಅವನ ಬಯಕೆಗಳ ಅವಾಸ್ತವತೆಯೂ ಅವನನ್ನು ಪೀಡಿಸುತ್ತವೆ.

"ನೀನೇಕೆ ಈ ಮಿಥ್ಯಾ ಚಿತ್ರದಿಂದ ಗೊಂದಲಕ್ಕೊಳಗಾಗಿರುವೆ? ಇದರಿಂದ ನೀನು ನಿನ್ನ ಆತ್ಮಕ್ಕೂ ವಂಚನೆ ಮಾಡಿಕೊಳ್ಳುತ್ತಿರುವೆ ಎಂಬುದನ್ನು ನೆನಪಿನಲ್ಲಿಡು. ನಿನ್ನ ತಲೆಯಲ್ಲಿ ವೇದಗಳು, ಶಾಸ್ತ್ರಗಳು, ಪುರಾಣ , ಇತಿಹಾಸಗಳು, ಉಪನಿಷತ್ತುಗಳು ಎಲ್ಲವನ್ನೂ ತುಂಬಿಕೊಂಡಿದ್ದೆಯೇ ಆದು ದಡ ಕೋಣದಂತೆ ವರ್ತಿಸುತ್ತಿದ್ದೀಯೆ. ನಿನ್ನ ನೆರವಿಗೆ ಬರುವ ಯಾವ ಸಂಪನ್ಮೂಲವೂ ಇಲ್ಲವೆಂದು ನಿನ್ನ ವಿಧಿಯನ್ನು ಹಳಿಯುತ್ತಾ ಗೋಳಿಡುತ್ತಿದ್ದೀಯೆ. ಇದು ನೀನು ಸಂಗ್ರಹಿಸಿಕೊಂಡಿರುವ ವಿದ್ಯೆಗೆ ತಕ್ಕುದಲ್ಲ. ನೀನು ಆ ವಿದ್ಯೆಯಿಂದ ಬಲವನ್ನೂ, ಧೈರ್ಯವನ್ನೂ ಸೆಳೆದುಕೊಳ್ಳಬೇಕು, ಪವಿತ್ರ ಭಾವನೆಗಳು ನಿನ್ನ ಎದೆ ತುಂಬಿ ಬರಬೇಕು.

"ಇದೊಂದು ಕಷ್ಟವು- ಹಣವಿಲ್ಲದ್ದು- ದೌರ್ಬಲ್ಯ ಮತ್ತು ಭೀತಿಯ ರೂಪದಲ್ಲಿ ನೀನು ಮುಳುಗುವಂತೆ ಮಾಡಬೇಕೆ? ಮಾನವನ ಸಮಸ್ತ ಕಷ್ಟ ಸಂಕಟಗಳಿಗೂ ಕಾತರ ಕಳವಳಗಳಿಗೂ ಧನ್ವಂತರಿಯಾದ ಭಗವನ್ನಾಮ ನಿನ್ನ ಬಳಿ ಇದೆ. ನಾಲಗೆಯ ಮೇಲೆ ಆ ನಾಮವು ಸಂತೋಷವಾಗಿ ನಲಿಯಲು ಬಿಡದೆ, ಅದಕ್ಕೆ ಬದಲು ನೀನು ನಷ್ಟ, ದುಃಖ, ಸಂಕಟ ಎಂದು ತಿಳಿದುಕೊಂಡಿರುವುದಕ್ಕಾಗಿ ಗೋಳಾಡುತ್ತಿರುವೆಯಲ್ಲ ಏಕೆ?

"ವೈದಿಕ ಜ್ಞಾನದ ಶಾಖೋಪಶಾಖೆಗಳ ಭಂಡಾರವಾಗಿದ್ದೀಯೆ ನೀನು. ಆದರೆ ಅವುಗಳ ಮೌಲ್ಯವನ್ನು ನೀನು ಅರಿತಿಲ್ಲ, ಅಥವಾ ಅವು ಕೊಡಬಹುದಾದ ಆನಂದಾನುಭವ ಪಡೆಯಲು ಪ್ರಯತ್ನಿಸಿಲ್ಲ. ಅದು ನಿನ್ನ ಜೀವನದ ಅತಿ ಪ್ರಧಾನವಾದ ಗುರಿಯಾಗಬೇಕಾಗಿತ್ತು. ಅದಕ್ಕೆ ಬದಲು ಈ ಜ್ಞಾನವನ್ನು ಗಳಿಸಿದ್ದೇನೆ ಎಂದು ತೃಪ್ತಿಪಡುವಷ್ಟರಿಂದಲೇ ನೀನು ದಿನಗಳನ್ನು ಕಳೆಯುತ್ತಿರುವೆ ಬದುಕು ನಿರರ್ಗಳ ಮಾತುಗಾರಿಕೆ ಅಷ್ಟೇ ಎನ್ನುವ ಹಾಗೆ ವರ್ತಿಸುತ್ತಿದ್ದೀಯೆ. ಇದರ ಫಲ ಕಾತರಗಳು, ಕಷ್ಟಗಳು ನಿನ್ನನ್ನು ಬಂದು ಮುತ್ತುತ್ತಿವೆ ಎಂಬ ಆಧಾರರಹಿತ ನಂಬಿಕೆ.

"ನಿಜವಾಗಿ ಹೇಳಬೇಕಂದರೆ ವಸ್ತು ನಿಷ್ಠ ಜಗತ್ತಿನ ಈ ಚಿತ್ರವೆಲ್ಲವೂ ಚಲಿಸುವ ಮೋಡಗಳು ಬಾಹ್ಯ ಪ್ರಕೃತಿಯ ಲಕ್ಷಣಗಳು. ಆತ್ಮವು ನಿನಗೆ ನೀಡಬಹುದಾದ ಆನಂದಕ್ಕೆ ಎಳ್ಳಷ್ಟೂ ಚ್ಯುತಿಯಿಲ್ಲ; ಅದಕ್ಕೆ ಯಾವ ತಡೆಯೂ ಇಲ್ಲ. ಈ ಸತ್ಯದಲ್ಲಿ ದೃಢವಾದ ನಂಬುಗೆಯಿಡು. ಬಂಗಾರೂ, ಆತ್ಮವನ್ನು ಕುರಿತ ಅಖಂಡ ಜ್ಞಾನವು ನೀಡುವ ಆನಂದ ಎಂಥದೆಂಬುದನ್ನೂ ಆದರಿಂದ ದೊರಕುವ ಶಾಂತಿ, ಸ್ವಾತಂತ್ರ್ಯಗಳನ್ನೂ ನೀನು ತಿಳಿಯೆಯಾ? ಇದನ್ನು ತಿಳಿದುಕೊಂಡಿದ್ದರೆ, ಈ ಜಗತ್ತಿನ ಸನ್ನಿವೇಶಗಳಿಗೆ, ಪರಿಸ್ಥಿತಿಗಳಿಗೆ ಹೇಗೆ ತೊಡರಿಕೊಳ್ಳುವೆ? ಹೇಗೆ ಅವುಗಳಿಂದ ಹಾನಿಗೊಳಗಾಗುವೆ?

"ಇತರರಿಗೆ ಬೋಧಿಸುವುದು ಸುಲಭ; ಬೋಧಿಸಿದ್ದರಲ್ಲಿ ಒಂದು ಸಣ್ಣ ಅಂಶವನ್ನಾದರೂ ಆಚರಣೆಯಲ್ಲಿ ತಂದು ಅದರಿಂದ ದೊರಕುವ ಆನಂದವನ್ನು ಸವಿಯುವುದು ಅತ್ಯಂತ ಕಷ್ಟ. "ಸ್ವಾಮಿಗೆ ಎಲ್ಲವೂ ತಿಳಿದಿದೆ; ಈ ಜಗತ್ತು ಯುಗ ಯುಗಾಂತರಗಳಿಂದ ಭಗವಂತನನ್ನು ಯಾವ ಯಾವ ನಾನಾ ರೂಪಗಳಿಂದ ಪೂಜಿಸುತ್ತಾ ಬಂದಿದೆಯೋ ಅವೆಲ್ಲಗಳ ಏಕೀಕೃತ ಮೂರ್ತರೂಪವೇ ಸ್ವಾಮಿ" ಎಂದು ನೀನು ದಪ್ಪಗಂಟಲಿನಿಂದ ಘೋಷಿಸುತ್ತಲೇ ಬಂದಿದ್ದೀಯೆ. ಆದರೆ ಸಮಸ್ಯೆಗಳು ನಿನ್ನನ್ನು ಕಾಡಿದಾಗ ನಿನ್ನ ಜೀವನದಲ್ಲೇ ಈ ಸತ್ಯಗಳನ್ನು ಸ್ಥಿರೀಕರಿಸಲು ಮರೆತು ಬಿಡುವೆಯಲ್ಲ.

ನನಗೆ ಗೊತ್ತಿಲ್ಲವೆ? ನಿನ್ನ ತಂದೆಯ ನೆರವು ಕೇಳಬೇಕೆಂದು ಮೈಯೆಲ್ಲ ಹಿಡಿಯಷ್ಟಾಗಿ ಹೊರಟಾಗ, ನಿನ್ನ ಪತ್ನಿ 'ನಮ್ಮ ಕಷ್ಟಗಳನ್ನು ವಿವರಿಸಿ ಸ್ವಾಮಿಗೆ ಬರೆಯೋಣ' ಎಂದು ಸಲಹೆ ಕೊಟ್ಟಳು. ಈಗ ನಾನು ಕೇಳುತ್ತೇನೆ, ಉತ್ತರ ಕೊಡು. 'ಇದನ್ನು ನಾನು ಒಪ್ಪುವುದಿಲ್ಲ. ನೀನು ಬರೆಯಕೂಡದು' ಎಂದು ಏಕೆ ಹೇಳಿದೆ? ಅದಕ್ಕೆ ನಾನು ಕಾರಣ ಹೇಳಲೆ? ಇನ್ನೂ ಬೇಕಾದಷ್ಟು ವಿವರಗಳನ್ನು ಆಕೆ ನನಗೆ ತಿಳಿಸಿಬಿಡಬಹುದು ಎಂದು ನಿನಗೆ ಆಂತಕವುಂಟಾಯಿತು. ನನಗೆ ತಿಳಿಯದೆ? ಅವಳು ಬರೆದೇ ನನಗೆ ಗೊತ್ತಾಗಬೇಕೆ? ಅಯ್ಯೋ ದಡ್ಡ ಬಂಗಾರೂ!

ನೀನು ರಾಮಚಂದ್ರಪುರಂಗೆ ಗೀತೆಯನ್ನು ಕುರಿತು ಒಂದು ಸರಣಿ ಉಪನ್ಯಾಸ ಕೊಡಲು ಹೋಗಿದ್ದೆ, ಬೇಸರದಿಂದ ಬರಿಗೈಯಲ್ಲಿ ಹಿಂದಕ್ಕೆ ಬಂದೆ. ನಿನ್ನ ಗೀತೋಪನ್ಯಾಸಗಳು ನಿರೀಕ್ಷಿತ ಪ್ರತಿಕ್ರಿಯೆ ಉಂಟು ಮಾಡಲಿಲ್ಲ. ಯಾಕೆ ಗೊತ್ತೆ? ಬಹುಕಾಲದಿಂದ ನಿನ್ನಲ್ಲಿ ಬೇರು ಬಿಟ್ಟಿರುವ 'ಬುರ್ರಕಥಾ' ಶೈಲಿಯು ಉಪನ್ಯಾಸಗಳ ತುಂಬಾ ತುಂಬಿಕೊಂಡು ಹಾಳು ಮಾಡಿತು. ಸುಲಭವಾಗಿ ಅದನ್ನು ಹೋಗಿಸಿಕೊಳ್ಳಲು ಸಾಧ್ಯವಿಲ್ಲ. ನಿಧಾನವಾಗಿ, ಸಹನೆಯಿಂದ, ಶ್ರಮದಿಂದ ಅದನ್ನು ಹೋಗಲಾಡಿಸಿಕೊ, ನಿನ್ನ ಗೀತೋಪನ್ಯಾಸಗಳನ್ನು ಜನರು ಮೆಚ್ಚಬೇಕೆಂದರೆ, ಕೆಲವು ಸುಧಾರಣೆಗಳನ್ನು ನೀನು ಮಾಡಿಕೊಳ್ಳಲೇಬೇಕು. ಅಷ್ಟು ಮಾಡದೆ ನಿನ್ನ ವಿದ್ವತ್ತು ವ್ಯರ್ಥ, ಅನುಭವ ಕೆಲಸಕ್ಕೆ ಬಾರದ ಹೊರೆ ಎಂದು ತೆಗಳುತ್ತಾ ಮಂಕು ಹಿಡಿದು ಹತಾಶನಾಗಿ ಏಕೆ ಕುಳಿತುಕೊಳ್ಳುವೆ?

ಈ ವಿಶ್ವವನ್ನೇ ಸಲಹುತ್ತಿರುವ ನನಗೆ ನಿನ್ನನ್ನೂ ನಿನ್ನ ಕುಟುಂಬವನ್ನೂ ಸಾಕುವುದು ಹೊರೆಯಲ್ಲ. ಹೀಗೆ ಸಾಲುಸಾಲಾಗಿ ಕಷ್ಟಗಳನ್ನು ಕೊಡುತ್ತಿರುವುದಾದರೂ ನಿನಗೆ ಕೆಲವು ಪಾಠಗಳನ್ನು ಕಲಿಸಿಕೊಡುವ ಸಲುವಾಗಿ. ಅಧ್ಯಯನವೇ ಸರ್ವಸ್ವವಲ್ಲ; ನೀನೇನು ಕಲಿತೆಯೋ ಅದನ್ನು ಆಚರಣೆಯಲ್ಲಿ ತೋರಿಸುವುದೀಗ ತುಂಬಾ ಮುಖ್ಯವಾದದ್ದು. ಶಿಕ್ಷಣವೆಂಬ ಪ್ರಕ್ರಿಯೆಯ ಈ ಆಯಾಮವನ್ನು ನಿನ್ನ ಗಮನಕ್ಕೆ ತರುವುದೇ ನನ್ನ ಉದ್ದೇಶ.

"ನಿನಗೆ ನಾನು ಇಷ್ಟು ಹೇಳ ಬಯಸುತ್ತೇನೆ. ಸಸಿಯನ್ನು ನೆಟ್ಟವನು ಅದಕ್ಕೆ ನೀರುಣಿಸದಿರಲಾರ; ನೀರೆರೆಯುವ ಮನಸ್ಸು ಅವನಿಗಿರದಿದ್ದರೆ ಸಸಿಯನ್ನು ನೆಡುತ್ತಲೇ ಇರಲಿಲ್ಲ. ಜೀವ ಮತ್ತು ಆತ್ಮದ ತತ್ವ, ವ್ಯಕ್ತಿ ಮತ್ತು ವಿಶ್ವ, ಮಾನವ ಮತ್ತು ದೈವ ಸಂಬಂಧಗಳ ತತ್ವ ಇದೇ. ಒಂದಾದ ಮೇಲೊಂದರಂತೆ ಮನೆ ಮನೆಯಲ್ಲಿ ಸ್ವಾಮಿಯ ನಾಮವು ನಲಿದಾಡುತ್ತಿದೆ, ಸ್ವಾಮಿಯ ರೂಪವು ಪೂಜೆಗೊಳ್ಳುತ್ತಿದೆ ಎಂದು ನೀನು ಬರೆದು ಪ್ರಕಟಿಸಿದ್ದೀಯೆ. ಈ ಸಣ್ಣದೊಂದು ದರ್ಶನದಿಂದಲೇ ನೀನು ಆನಂದ ತುಂದಿಲನಾದೆ. ಆದರೆ ಈಗ ತಿಳಿದುಕೊ. ಸಾಯಿನಾಮವು ಇಡೀ

ಜಗತ್ತನ್ನು ಆನಂದೋಲ್ಲಾಸಗಳಲ್ಲಿ ಮುಳುಗಿಸುತ್ತದೆ. ಅಷ್ಟೇ ಅಲ್ಲ ಜಗತ್ತಿನ ಅಂಗುಲಂಗುಲವನ್ನೂ ತುಂಬುತ್ತದೆ. ಜನರು ಆಗ 'ಸರ್ವವೂ ಸಾಯಿಮಯ, ಈ ಜಗತ್ತು ಬಾಬಾಮಯ' ಎಂದು ಹಾಡುತ್ತಾರೆ. ಸಂದೇಹವೇ ಇಲ್ಲದೆ ಈ ಪೂರ್ಣತೆಯ ಅನುಭವ ದೊರಕುತ್ತದೆ. ಧೈರ್ಯವಾಗಿರು; ಆನಂದವಾಗಿರು. ನಿನಗೆ ವಹಿಸಿರುವ ಕರ್ತವ್ಯವನ್ನು ಶ್ರದ್ಧೆಯಿಂದ ಮಾಡು. ಮಾನವನನ್ನು ದೈವತ್ವಕ್ಕೇರಿಸುವ ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ಹಂತದ ಮೂಲಕ ಸಾಕ್ಷಾತ್ಕಾರ ಪಡೆಯಲು ಶ್ರಮಿಸು.

"ಈ ದಾರಿಯಲ್ಲಿ ಪ್ರಗತಿಹೊಂದಲು ನೀನು ನಿರ್ಧಾರ ಮಾಡಿದಾಗ, ಪರ್ತಿಯ ಪ್ರಭುವು ತಾನಾಗಿ ಮುಂದೆ ಬಂದು ಕೈಹಿಡಿದು, ಮೇಲೆತ್ತಿ, ಮೋಕ್ಷ ನೀಡುತ್ತಾನೆ. ಆದ್ದರಿಂದ, ಬಂಗಾರೂ, ಮೊದಲು ನಿನ್ನೊಳಗಿರುವ ಪ್ರೇರಕ ಶಕ್ತಿಯನ್ನು ಅರಸು, ಸಾಧಿಸಿಕೊ. ನಿನ್ನನ್ನು ನಾನು ಎಂದಿಗೂ ಕೈಬಿಡುವುದಿಲ್ಲ. ಎಂದಿಗೂ ನಿನ್ನನ್ನು ಮರೆಯುವುದಿಲ್ಲ, ಖಂಡಿತ ಮರೆಯುವುದಿಲ್ಲ.

"ನೀನು ಶ್ರೀಮಂತರನ್ನು ದ್ವೇಷಿಸುತ್ತಿದ್ದೀಯೆ, ಈ ತಪ್ಪು ಅಭ್ಯಾಸ ಬಿಟ್ಟುಬಿಡು. ಶ್ರೀಮಂತರನ್ನಷ್ಟೇ ಅಲ್ಲ, ಯಾರನ್ನೂ ಯಾವ ರೀತಿಯಲ್ಲೂ ಅಗೌರವಿಸಬಾರದು. ಅವರು ಅಹಂಕಾರದಿಂದ ಉಬ್ಬಿದರೆ ಅದನ್ನು ಅವನು ಅನುಭವಿಸುತ್ತಾರೆ, ಆದರಿಂದ ನಿನಗೇನು? ನೆನಪಿಲ್ಲಿಡು, ಸಾಯಿ ಎಲ್ಲರಲ್ಲೂ ನಿವಾಸಿಯಾಗಿದ್ದಾರೆ. ಆದ್ದರಿಂದ ಯಾರನ್ನೇ ಅಗೌರವಿಸಿದರೂ ಅದು ಸಾಯಿಯನ್ನೇ ತಿರಸ್ಕರಿಸಿದ ಹಾಗೆ.

"ನಿನ್ನ ಪತ್ನಿಗೂ ಮಕ್ಕಳಿಗೂ ನನ್ನ ಆಶೀರ್ವಾದ ತಿಳಿಸು. ನಿನ್ನನ್ನು ಕುರಿತು ನನ್ನಲ್ಲಿರುವ ಸಹಾನುಭೂತಿ ಮತ್ತು ಪ್ರೇಮದಿಂದಾಗಿ ಇಷ್ಟು ದೀರ್ಘವಾದ ಈ ಪತ್ರವನ್ನು ಬರೆದಿದ್ದೇನೆ. ಯಾವಾಗಲೂ ಆನಂದವಾಗಿರು; ಆಚರಣೆ ಮತ್ತು ಅನುಭವ ಇವುಗಳಲ್ಲಿ ತೊಡಗಿದರು.

ನಿನ್ನ ಹೃದಯನಿವಾಸಿ, ಸಾಯಿ"

## ತಂತಿ ಸಂದೇಶಗಳು

ಒಂದು ಸಣ್ಣ ತಂತಿ ಸಂದೇಶದ ಮೂಲಕ ಭಗವಾನರು ಒಂದು ಅರ್ಥ ಪ್ರಪಂಚವನ್ನೇ ತೆರೆಯುತ್ತಾರೆ. ಕರುಣೆಯ ಸಾಗರವನ್ನೂ, ಜ್ಞಾನದ ಗೀತೆಯನ್ನೂ ತೆರೆದಿಡುತ್ತಾರೆ. ತಾವು ಮೃತ್ಯುವಿನಿಂದ ಮರಳಿ ಜಗತ್ತಿಗೆ ತಂದ ವಾಲ್ಟರ್ ಕೋವಾನ್ 'ಪುನರಾಗಮನ'ದ ಅನಂತರ ಹತ್ತೊಂಬತ್ತು ತಿಂಗಳಾದ ಮೇಲೆ ಕೊನೆಗೆ ನಿಧನ ಹೊಂದಿದಾಗ ಬಾಬಾ ಅವರು ಪ್ರಶಾಂತಿನಿಲಯದಿಂದ ಆತನ ಪತ್ನಿ ಎಲ್ಸೀ ಕೋವಾನ್‌ಗೆ ಕಳಿಸಿದ ತಂತಿಯಲ್ಲಿ ಹೇಳಿದರು: "ಸುಸ್ಥಿತಿಯಲ್ಲಿ ವಾಲ್ಟರ್ ಇಲ್ಲಿಗೆ ಬಂದು ತಲುಪಿದ್ದಾನೆ." ಈ ವಾಕ್ಯವನ್ನು ಕುರಿತು ಸ್ವಲ್ಪ ಪರಿಭಾವಿಸಿ. ಸಾಯುವುದಕ್ಕೆ ಕ್ಷಣ ಮುಂಚೆ, ಅನೇಕ ವರ್ಷಗಳ ಶ್ರದ್ಧಾನ್ವಿತ ಭಕ್ತಿಯ ಫಲವಾಗಿ, "ಬಾಬಾ! ಬಾಬಾ!" ಎಂದು ಉದ್ಗರಿಸಿದನು. ಸ್ವಲ್ಪಹೊತ್ತಿನ ನಂತರ ಬಾಬಾ ವಾಲ್ಟರ್‌ನ ಆತ್ಮವು ಸುರಕ್ಷಿತವಾಗಿ ಬಂದು ತಲುಪಿದೆ ಎಂದು ಘೋಷಿಸಿದರು. ಹಾಗೆಯೇ ಆಳಿಕೆಯ ನಾರಾಯಣಭಟ್ ಅವರು ಒಂದು ಮೋಟಾರು ಅಪಘಾತದಲ್ಲಿ ಮಡಿದಾಗ ಅವರ ತಾಯಿಗೆ ಬಾಬಾ ಒಂದು ಸಂದೇಶ ಕಳಿಸಿದರು: "ನಾರಾಯಣ ಭಟ್ ನನ್ನಲ್ಲಿ ಲೀನವಾಗಿದ್ದಾನೆ"

ಸಾಲಾಗಿ ಕುಳಿತ ಭಕ್ತರ ಮತ್ತು ಸಂದರ್ಶನಾರ್ಥಿಗಳ ನಡುವೆ ನಡೆದಾಡುತ್ತಾ ಸಾಯಿಬಾಬಾ ಅವರು ಪುಸ್ತಕ, ಚಿತ್ರ, ಭಾವಚಿತ್ರ ಮೊದಲಾದುವುಗಳ ಮೇಲೆ ಹಸ್ತಾಕ್ಷರ ನೀಡುತ್ತಾರೆ. ಅನೇಕ ವೇಳೆ ತಮ್ಮ ಹೆಸರನ್ನು ಮಾತ್ರ ಬರೆಯುವುದು ನಮಗೆ ಗೊತ್ತು; ಕೆಲವು ಸಾರಿ 'ಆಶೀರ್ವಾದಗಳು',, 'ಪ್ರೇಮ ಪೂರ್ವಕ ಆಶೀರ್ವಾದಗಳು' ಎಂದು ಬರೆಯಬಹುದು. ಒಂದು ಸಾರಿ ಯಾರೋ ಒಬ್ಬರು ಬಾಬಾ ಅವರ ಭಾವ ಚಿತ್ರವನ್ನು ಮುಂದೆ ಹಿಡಿದರು. ಅದರ ಹಿನ್ನೆಲೆ ದಟ್ಟ ಕಪ್ಪು ಬಣ್ಣದಲ್ಲಿತ್ತು. ಬಾಬಾ ಯಾರಿಂದಲೋ ಒಂದು ಪೆನ್ನು ಎರವಲು ಪಡೆದು ಅದರ ಮೇಲೆ ಬಿಳಿಯ ಅಕ್ಷರಗಳಲ್ಲಿ ಬರೆದರು! ಪೆನ್ನಿನಲ್ಲಿದ್ದ ನೀಲಿಗಪ್ಪು ಶಾಯಿಯು ಅವರ ಇಚ್ಛೆಗೆ ತಕ್ಕಂತೆ ಬಿಳುಪಾಗಿ ಪರಿವರ್ತಿತವಾಯಿತು! ಹೀಗೆ ಅವರ ಸಂದೇಶಗಳ ವಿಧಾನ, ಶೈಲಿ, ವಸ್ತು ಎಲ್ಲವೂ ಅನನ್ಯವಾದವು, ವಿಶಿಷ್ಟ ರೀತಿಯಲ್ಲಿ ಉನ್ನತಿಕರವಾದವು.

## ಶಬ್ದಗಳು ಅವರಿಚ್ಛೆ ಪೂರೈಸುತ್ತವೆ.

ಬಾಬಾ ಅವರ ಮಾತುಗಳು ಪ್ರತಿಯೊಂದು ಬಗೆಯ ಕಾಯಿಲೆಯನ್ನೂ ನೋವನ್ನೂ ಗುಣಪಡಿಸುವುದು ಮಾತ್ರವಲ್ಲ, ತಿದ್ದಲು ಸಾಧ್ಯವೇ ಇಲ್ಲವೆನಿಸಿದ ವ್ಯಕ್ತಿಗಳನ್ನೂ ಸತ್ಯದ ಕಡೆಗೆ ಪವಾಡ ಸದೃಶವಾಗಿ ಪರಿವರ್ತನೆ ಉಂಟು ಮಾಡುವ ಶಕ್ತಿಯನ್ನು ಪಡೆದಿವೆ.

ಮಧ್ಯಪ್ರದೇಶದ ಮೊರೆನಾ ಜಿಲ್ಲೆಯ ಗಣಿಗಾರಿಕೆ ಎಂಜಿನಿಯರ್ ಶ್ರೀ ಎಂ. ಕೆ. ಮಿಶ್ರಾ ಬರೆಯುತ್ತಾರೆ: "ಈ ರಾಜ್ಯದ ಕೆಲವು ಉತ್ತರದ ಜಿಲ್ಲೆಗಳಲ್ಲಿ - ಭೀಂಡ್, ಮೊರೆನಾ, ಗ್ವಾಲಿಯರ್, ಶಿವಪುರಿ, ದಾತಿಯೂ - ಮತ್ತು ನೆರೆಯ ರಾಜಾಸ್ಥಾನ ಮತ್ತು ಉತ್ತರ ಪ್ರದೇಶ ಜಿಲ್ಲೆಗಳಲ್ಲಿ ಸ್ವತಂತ್ರೋದಯ ಕಾಲದಿಂದಲೂ ಡಕಾಯಿತರ ಹಾವಳಿ ಇತ್ತು. ಮಧ್ಯ ಪ್ರದೇಶ, ರಾಜಾಸ್ಥಾನ ಮತ್ತು ಉತ್ತರ ಪ್ರದೇಶ ಸರಕಾರಗಳು ಅವರನ್ನು ಅಡಗಿಸಲು ಶಕ್ತಿ ಮೀರಿ ಹೆಣಗುತ್ತಿದ್ದುವು, ಆದರೆ ಫಲಪ್ರದವಾಗಿರಲಿಲ್ಲ. ವಾಸ್ತವವಾಗಿ ಈ ಜಿಲ್ಲೆಗಳ ಮೇಲೆ ಡಕಾಯಿತರು ಹತೋಟಿ ಸಾಧಿಸಿದ್ದರು. 1960 ರಲ್ಲಿ ಆಚಾರ್ಯ ವಿನೋಬಾ ಭಾವೆಯವರು ಈ ಜಿಲ್ಲೆಗಳಲ್ಲಿ ಪಾದಯಾತ್ರೆ ಮಾಡಿ ಡಕಾಯಿತರು ತಮ್ಮ ಈ ಅಪರಾಧೀ ಜೀವನವನ್ನು ತೊರೆಯುವಂತೆ ಒಲಿಸಲು ಶ್ರಮಿಸಿದರು. ಎಲ್ಲೋ ಕೆಲವರು ಸರಕಾರಕ್ಕೆ ಶರಣಾಗತರಾಗುವಂತೆ ಮಾಡಲು ಅವರು ಸಮರ್ಥರಾದರು. 1971 ಅಕ್ಟೋಬರಿನಲ್ಲಿ ಅತ್ಯಂತ ಮುಖ್ಯವಾದ ಒಂದು ತಂಡದ ನಾಯಕ ಮಧೋಸಿಂಗ್ ಎನ್ನುವವನು ಆಚಾರ್ಯ ವಿನೋಬಾ ಭಾವೆ ಅಪೂರ್ಣವಾಗಿ ನಿಲ್ಲಿಸಿದ ಕೆಲಸವನ್ನು ಮುಂದುವರಿಸಿ ಪೂರೈಸುವಂತೆ ಮನವೊಲಿಸಲು ಜಯಪ್ರಕಾಶ ನಾರಾಯಣರನ್ನು ಭೇಟಿ ಮಾಡಿದನು. ಸರ್ವೋದಯ ಕಾರ್ಯಕರ್ತರೊಂದಿಗೆ ಜೆಪಿ ಅನೇಕ ಡಕಾಯಿತ ತಂಡಗಳನ್ನು ಸಂಪರ್ಕಿಸಿದರು. ಅವರ ಪ್ರಯತ್ನಗಳೂ ಕೊನೆಗೆ ಫಲನೀಡಿ ಸುಮಾರು ನಾಲ್ಕು ನೂರು ಜನ ಡಕಾಯಿತರು ಶರಣಾಗತರಾಗಲು ಒಪ್ಪಿಕೊಂಡರು.

ಆ ಡಕಾಯಿತರನ್ನೂ ಸರ್ವೋದಯ ಕಾರ್ಯಕರ್ತರನ್ನೂ ಕಾಡುತ್ತಿದ್ದ ಒಂದು ಪ್ರಶ್ನೆ, ಅವರು ತಾವು ಅದುವರೆಗೆ ಮಾಡಿದ ಅಪರಾಧಗಳನ್ನು ಬಹಿರಂಗವಾಗಿ ಒಪ್ಪಿಕೊಳ್ಳಬೇಕೆ ಎಂಬುದು ಅವರ ವಿರುದ್ಧ ನ್ಯಾಯಾಲಯಗಳಲ್ಲಿ ಹೂಡಿದ ಮೊಕದ್ದಮೆಗಳನ್ನು ಎದುರಿಸಬೇಕೆಂದು ಕೆಲವರು ಕಾರ್ಯಕರ್ತರು ಡಕಾಯಿತರಿಗೆ ಸಲಹೆ ನೀಡಿದರು. ಅವರದೂ ಅದೇ ಅಪೇಕ್ಷೆಯಾಗಿತ್ತು.

1974 ಆಗಸ್ಟ್ 23ನೆಯ ತಾರೀಕು. ಶ್ರೀಮತಿ ಪ್ರಭಾವತಿ ಎನ್ನುವವರು ಗ್ವಾಲಿಯರಿನ ಶಾಂತಿ ಸಮಿತಿಯ ಕಾರ್ಯದರ್ಶಿ ಶ್ರೀ ಹೇಮದೇವಶರ್ಮ ಅವರನ್ನು ಸಂಪರ್ಕಿಸಿ, ಪ್ರೊಫೆಸರ್ ಕಸ್ತೂರಿ ಅವರು ಬರೆದ 'ಸತ್ಯಂ ಶಿವಂ ಸುಂದರಂ' ಎಂಬ ಕೃತಿಯ ಎರಡನೆಯ ಭಾಗದ ಹಿಂದೀ ಅನುವಾದದ ಒಂದು ಪ್ರತಿಯನ್ನು ತಂದು ಕೊಡಲು ಕೇಳಿದರು. ಹೇಮದೇವಶರ್ಮರ ನೆರೆಮನೆಯವಳು ಭಗವನ್ನಾರ ಭಕ್ತೆ, ಆದ್ದರಿಂದ ಆಕೆಯ ಬಳಿ ಇದ್ದ ಆ ಪುಸ್ತಕವನ್ನು ಶರ್ಮ ತಂದರು. ಅಂದು ಜೆ. ಪಿ. ಅವರು ಡಕಾಯಿತರನ್ನುದ್ದೇಶಿಸಿ ಮಾತನಾಡುತ್ತಾ ಆ ಪುಸ್ತಕದ ಆರನೆಯ ಅಧ್ಯಾಯದಲ್ಲಿ ನಿರೂಪಿಸಿದ ಕಲ್ಪಗಿರಿಯ ಕಥೆಯನ್ನು ಅವರಿಗೆ ಓದಿ ಹೇಳಿದರು. ಅತಿ ಕ್ರೂರವಾದ ಕೊಲೆಗಳನ್ನು ಮಾಡಿ, ಸನ್ಯಾಸಿಯಂತೆ ವೇಷ ಧರಿಸಿ ಅಡ್ಡಾಡುತ್ತಿದ್ದ ಅವನಿಗೆ ಬಾಬಾ ಪೋಲೀಸರ ಬಳಿಗೆ ಹೋಗಿ ಮಾಡಿದ್ದೆಲ್ಲವನ್ನೂ ಸಾರಿ ಹೇಳಿ ಅವರು ವಿಧಿಸುವ ಶಿಕ್ಷೆಯನ್ನು ಸಂತೋಷವಾಗಿ ಸ್ವೀಕರಿಸು ಎಂದು ಬುದ್ಧಿವಾದ ಹೇಳಿದರು. ಕಠೋರ ಹೃದಯಿಗಳಾದ ಡಕಾಯಿತರು ಅದನ್ನು ಆಲಿಸಿದರು. ಅದು ಅವರ ಹೃದಯವನ್ನು ಆಳವಾಗಿ ತಟ್ಟಿತು. ಅವರಿಗೆ ನಿಜವಾಗಿ ಬಿಡುಗಡೆ ಇರುವುದು ತಮ್ಮ ಮೇಲಿನ ಆರೋಪಗಳನ್ನು ಪ್ರತಿಭಟಿಸಿ ನ್ಯಾಯಾಲಯದಲ್ಲಿ ಕೇಸು ಗೆಲ್ಲುವುದರಲ್ಲಲ್ಲ, ಬದಲು ಪಶ್ಚಾತ್ತಾಪದಿಂದ ಅವುಗಳನ್ನು ವಿನಯವಾಗಿ ಒಪ್ಪಿಕೊಳ್ಳುವುದರಲ್ಲಿ ಎಂದು ಅವರಿಗೆ ಮನವರಿಕೆಯಾಯಿತು!"

# ಅವನ ಆಟದ ನಡೆಗಳು

## ಮಧ್ಯಂತರಗಳು

ಮರಣ ನಮ್ಮ ಜನ್ಮಸಿದ್ಧ ಹಕ್ಕು. ಎಲ್ಲರೂ ಒತ್ತಾಯಮಾಡಿ ಕೇಳುವ ಉಡುಗೊರೆ. ಅದು ಬಳಲಿದವನಿಗೆ ಆಯಾಸ ಪರಿಹಾರ, ಹಿಂಸೆಗೊಳಗಾದವನಿಗೆ ಆಶ್ರಯ, ದಾರಿ ತಪ್ಪಿ ಅಲೆಯುವವನಿಗೆ ಒಂದು ಪಾಠ, ಭೋಗಲಾಲಸನಿಗೆ ಒಂದು ಪೆಟ್ಟು, ಯಾತ್ರಿಕನಿಗೆ ಒಂದು ಮೈಲುಗಲ್ಲು, ಅಂಜುಕುಳಿಗೆ ಒಂದು ಶಿಕ್ಷೆ, ಶ್ರದ್ಧಾಳುವಿಗೆ ಸ್ವರ್ಗ.

ಬಾಬಾ ಅವರ ಅಕ್ಕನ ಗಂಡ ಕಿರಿಯ ವಯಸ್ಸಿನಲ್ಲೇ ತೀರಿಕೊಂಡರು. ಆಗ ಅವರಿಗೆ ಇಪ್ಪತ್ತೈದು ವರ್ಷ ಮಾತ್ರ. ಕಣ್ಣೀರು ಹಾಕಿದ್ದಕ್ಕೆ ಬಾಬಾ ನನ್ನನ್ನು ಖಂಡಿಸಿದರು. ಅವರು ಕೇಳಿದರು: "ಜನನವಾಗಲಿ, ಮರಣವಾಗಲಿ ಇರದೆ ಹೋಗಿದ್ದರೆ ನಾನು ಕಾಲ ಕಳೆಯುವುದಾದರೂ ಹೇಗೆ?" ಸಾವು ಕೂಡ ಅವರು ಆಡುವ ಆಟದಲ್ಲಿ ಒಂದು ನಡೆ; ದೈವೀಕ್ರೀಡೆಯಲ್ಲಿ ಒಂದು 'ನಿರ್ಗಮನ'. ಆಗ ಪಾತ್ರದಾರಿಯು ರಂಗಸ್ಥಳದಿಂದ ಬಿಟ್ಟು ಬರಲೇಬೇಕು. ದೇಹದ ಸಾಂತತೆ ಹಾಗೂ ಆತ್ಮದ ಅನಂತತೆಗಳನ್ನು ಸಂಯಮದಿಂದ ಒಪ್ಪಿಕೊಳ್ಳಲೇಬೇಕು. ಬಾಬಾ ವಿಭೂತಿಯನ್ನು ಸೃಷ್ಟಿಸಿ ನಮ್ಮ ಹಣೆಗಿಡುತ್ತಾರೆ. ಮರಣವನ್ನು ನಮಗೆ ನೆನಪು ಮಾಡಿಕೊಡುವುದೇ ಅದರ ಉದ್ದೇಶ. ದೇಹವು ಕೊನೆಗೆ ಒಂದು ಬೂದಿಯ ಗುಡ್ಡೆಯಾಗುತ್ತದೆ ಎಂಬುದು ನಮ್ಮ ಗಮನದಲ್ಲಿ ಇರಬೇಕು. ಅದು ಪ್ರಾಪಂಚಿಕ ವಸ್ತುಗಳ ಬಗೆಗೆ ವಿರಕ್ತಿಯನ್ನು ಬೆಳೆಸಿಕೊಂಡು, ಶಾಶ್ವತ ಮೌಲ್ಯಗಳ ಕಡೆಗೆ ಗಮನವನ್ನು ಕೇಂದ್ರೀಕರಿಸಲು ನೆರವಾಗುತ್ತದೆ.

ಅಸ್ತಿತ್ವದ ಯೋಜನೆಯಲ್ಲಿ ಮರಣಕ್ಕೆ ನ್ಯಾಯವಾದ ಸ್ಥಾನ ಯಾವುದಿದೆಯೋ ಅದನ್ನು, ಹೆಚ್ಚೂ ಅಲ್ಲದೆ ಕಡಿಮೆಯೂ ಅಲ್ಲದೆ, ನೀಡುವ ಸಲುವಾಗಿ ಬಾಬಾ ಬಂದಿದ್ದಾರೆ. ಮರಣದಾಚೆಯ ಲೋಕದಿಂದ ಅವರು ವಾಲ್ಟರ್ ಕೋವಾನ್‌ನನ್ನು ಮರಳಿ ಕರೆತಂದರು. ಏಕೆಂದರೆ ಅವರೇ ಹೇಳಿದಂತೆ, "ಅವನು ಮಾಡಬೇಕಾದ ಕೆಲಸವನ್ನು ಇನ್ನೂ ಪೂರ್ತಿ ಮಾಡಿಲ್ಲ." ಮರಣವೆಂಬುದನ್ನೇ ಅಳಿಸಿಬಿಡಬೇಕೆಂಬುದು ಬಾಬಾ ಅವರ ಇಚ್ಛೆಯಲ್ಲ. "ಜೀವಿಗಳು ಏಕೆ ಸಾಯುತ್ತಾರೆ?" ಎಂದು ನಾವು ಕೇಳುತ್ತೇವೆ. "ಅವರು ಹುಟ್ಟಿರುವುದರಿಂದಾಗಿ" ಎಂದು ಬಾಬಾ ಉತ್ತರ ಕೊಡುತ್ತಾರೆ. ಒಮ್ಮೆ ಜೋಡಣೆಗೊಂಡದ್ದು ಕಳಚಲೇಬೇಕು; ಉದಯಿಸಿದ್ದು ಅಸ್ತಮಿಸಲೇಬೇಕು. ಆದರೆ ಮಾನವನು ಪುನರ್ಜನ್ಮವನ್ನು ತಪ್ಪಿಸಿಕೊಳ್ಳಬಹುದು. ಬೇರುಗಳನ್ನೇ ಕಡಿದು ಹಾಕುವುದರಿಂದ, ಅಂದರೆ, ಒಳ್ಳೆಯದು ಕೆಟ್ಟದ್ದು ಎಲ್ಲ ಕರ್ಮಗಳ ಸಂಚಯವನ್ನು ನಾಶ ಮಾಡುವುದರಿಂದ. ಭಗವಂತ ಇಟ್ಟುಕೊಂಡಿರುವ ಪುಸ್ತಕದಲ್ಲಿ ನಮೂದಾಗಿರುವ ಲೆಕ್ಕವನ್ನು ಚುಕ್ತಿ ಮಾಡುವುದರಿಂದ. ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಚಟುವಟಿಕೆಗಳ ಫಲಗಳನ್ನು ತ್ಯಾಗ ಮಾಡುವುದರ ಮೂಲಕ ಅದನ್ನು ಸಾಧಿಸಬೇಕು. ನ್ಯಾಯವಾದ ಧರ್ಮಯುತವಾದ ಕರ್ತವ್ಯಗಳನ್ನು ನಿರ್ವಹಿಸುತ್ತಿರು, ಆ ಕರ್ಮಗಳ ಫಲಗಳ ಬಗೆಗೆ ಉದಾಸೀನನಾಗಿರು. ಭಗವಂತನು ನಿಮಗೆ ದೇಹ, ಮನಸ್ಸು ಮತ್ತು ಬುದ್ಧಿಯನ್ನು ನೀಡಿದನು;

ಅವನೇ ಆಸೆಯನ್ನೂ ನಟ್ಟು ಇಡೀ ಯೋಜನೆಯನ್ನು ರೂಪಿಸಿದನು. ಅವನ ಕೃಪೆಯ ಫಲ ಅವನಿಗೇ ಸೇರಲಿ. ಆಗ ನಿಮ್ಮ ಲೆಕ್ಕದಲ್ಲಿ ಕೂಡುವಿಕೆಯೂ ಇಲ್ಲ, ಕಳೆಯುವಿಕೆಯೂ ಇಲ್ಲ. ಲೆಕ್ಕ ಸರಿದೂಗಿಸಲು ನೀವು ಮತ್ತೆ ಹುಟ್ಟಿ ಬರಬೇಕಾಗಿಲ್ಲ. ಎಲ್ಲಿಯವರೆಗೆ ನಿಮ್ಮ ಕರ್ಮಗಳು ಪೂರ್ತಿ ನಿಸ್ವಾರ್ಥವಾಗುವುದಿಲ್ಲವೋ, ಕರ್ತವ್ಯ ಬದ್ಧವಾಗುವುದಿಲ್ಲವೋ ಅಲ್ಲಿಯವರೆಗೂ ಭೌತಿಕವಾದೊಂದು ದೇಹವನ್ನು ಧರಿಸಿರಲೆ ಬೇಕಾಗುತ್ತದೆ. ಸಾಂತದಿಂದ ಅನಂತದತ್ತ ಏರಬೇಕಾದರೆ ಅದು ಅತ್ಯಗತ್ಯವಾಗುತ್ತದೆ. ಬಾಬಾ ಅವರು ಪೂಲ್‌ಮನ್‌ಗೆ ಹೇಳಿದರು: "ನಿನ್ನ ಭೂತವು ನಿನ್ನನ್ನು ಹೇಗೆ ರೂಪಿಸಿದೆ ಎಂಬುದನ್ನು ನಾನು ಬಲ್ಲೆ; ನಿನ್ನ ಭವಿಷ್ಯತ್ತನ್ನು ನೀನೇ ಹೇಗೆ ರೂಪಿಸಿಕೊಳ್ಳುತ್ತಿದ್ದೀಯೆ ಎಂಬುದನ್ನು ನೋಡುತ್ತಿದ್ದೇನೆ. ನಿನಗೆ ಏಕೆ ದುಃಖ, ಯಾತನೆ, ಇನ್ನೂ ಎಷ್ಟು ಕಾಲ ನೀನು ಅದನ್ನು ಅನುಭವಿಸಬೇಕು, ಯಾವಾಗ ಆ ಯಾತನೆ ಕೊನೆಗೊಳ್ಳುತ್ತದೆ ಎಂಬುದೂ ನನಗೆ ಗೊತ್ತು."

108 ಮುತ್ತುಗಳ ಒಂದು ಜಪ ಮಾಲೆಯನ್ನು ಇಂದ್ರಾದೇವಿಗೆ ಕೊಡುತ್ತಾ ಬಾಬಾ "ಕಾಯಿಲೆಯಾಗಿರುವ ವ್ಯಕ್ತಿಯ ಮೈಮೇಲೆ ಇದನ್ನಿಟ್ಟು ರೋಗ ಪರಿಹಾರಕ್ಕಾಗಿ ಪ್ರಾರ್ಥನೆ ಸಲ್ಲಿಸಲು ಹೇಳು, ಅವನಿಗೆ ವಾಸಿಯಾಗುತ್ತದೆ" ಎಂದರು. "ಯಾವುದೇ ರೋಗವಾದರೂ ಸ್ವಾಮಿ?" ಇಂದ್ರಾದೇವಿ ಕೇಳಿದರು. "ಇಲ್ಲ. ಕರ್ಮದ ಋಣವನ್ನು ತೀರಿಸಲು ಬಂದಿರುವ ರೋಗ ಅಲ್ಲ." ಮದರಾಸಿನ ಶ್ರೀಮತಿ ವೆಂಕಟಮುನಿಗೆ ಬಾಬಾ ಒಂದು ಜಪಮಾಲೆ ಕೊಟ್ಟರು. ಆಕೆಯ ವಯಸ್ಸಾದ ಅತ್ತೆ ಮರಣ ಶಯ್ಯೆಯಲ್ಲಿದ್ದಾಗ, ಸುತ್ತ ಬಂದು ಬಾಂಧವರು ನೆರೆದಿದ್ದಾಗ, ಆಕೆ ಜಪಮಾಲೆಯನ್ನು ಅವರ ಎದೆಯ ಮೇಲಿಟ್ಟು, ಅವರು ಚೇತರಿಸಿಕೊಳ್ಳುವಂತಾಗಲಿ ಎಂದು ಪ್ರಾರ್ಥಿಸಿದರು. ಅದರಂತೆಯೇ ಅವರಿಗೆ ಪ್ರಜ್ಞೆ ಮರಳಿ ಬಂದಿತು. ಹಾಸಿಗೆಯಿಂದ ಎದ್ದು ಕುಳಿತರು. ಮನೆಯಲ್ಲಿ ಅಷ್ಟೊಂದು ಜನರು ಏಕೆ ನೆರೆದಿದ್ದಾರೆ ಎಂದು ಆಕೆಗೆ ಆಶ್ಚರ್ಯ. ಅವನ ಮಗನಿಗೆ ಬಾಲ್ಯದಿಂದಲೇ ಧನುರ್ವಾಯು ಪೀಡೆ. ಇನ್ನೇನು ಸತ್ತೇ ಹೋಗುತ್ತಾನೆ ಎಂಬ ಹಂತಕ್ಕೆ ಬಂದಿತ್ತು. ಶ್ರೀಮತಿ ವೆಂಕಟಮುನಿ ಜಪಮಾಲೆಯನ್ನು ತರಲು ಕೊಠಡಿಗೆ ಓಡಿದರು. ಆದರೆ ಆ ಮಾಲೆಯನ್ನು ಬೆರಳುಗಳಿಂದ ಹಿಡಿದುಕೊಳ್ಳಲು ಸಾಧ್ಯವಾಗಲಿಲ್ಲ. ಮತ್ತೆ ಮತ್ತೆ ಜಾರಿ ಬಿದ್ದುಹೋಗುತ್ತಿತ್ತು. ಬಹಳ ಕಷ್ಟಪಟ್ಟು ಕೊನೆಗೆ ಹಿಡಿದು ಕೊಂಡು ಮಗನ ಹತ್ತಿರಕ್ಕೆ ಓಡಿ ಬರುವ ವೇಳೆಗೆ ಕಾಲ ಮೀರಿಹೋಗಿತ್ತು. ಆತನ ಕಾಯಿಲೆ ಕರ್ಮದ ಋಣ ತೀರಿಸುವ ಒಂದು ವಿಧಾನವಾಗಿತ್ತು. ಅದು ಪೂರ್ತಿಯಾದೊಡನೆ ಆತನಿಗೆ ಬಿಡುಗಡೆ ದೊರಕಿತು. ಅನಂತರ ಬಾಬಾ ಆಕೆಗೆ ಹೇಳಿದರು, "ಆಕೆಯ ಮಗನು ಕರ್ಮದ ಬಾಕಿಯನು ತೀರಿಸುವ ಸಲುವಾಗಿಯೇ ಇಲ್ಲಿ ಇದ್ದನು. ಈಗ ಶಾಶ್ವತವಾದ ಆನಂದವನ್ನು ಗಳಿಸಿದ್ದಾನೆ. ಅವನ ಬಗೆಗೆ ನಿಜವಾದ ಪ್ರೀತಿ ಇದ್ದ ಪಕ್ಷದಲ್ಲಿ ಅವನಿಗೆ ಯಾವ ಸುಖವನ್ನೂ ನೀಡದ ದೇಹದಿಂದ ಬಿಡುಗಡೆ ಪಡೆದನಲ್ಲ, ಅದಕ್ಕಾಗಿ ಸಂತೋಷ ಪಡು."

## ತಂದೆ ಮತ್ತು ಮಗ

ದಕ್ಷಿಣ ಭಾರತದ ಸುಪ್ರಸಿದ್ಧ ಗಾಯಕ ಶ್ರೀ ಸೌಂದರರಾಜನ್ ಅವರ ಮಗಳಿಗೆ ಹೃದಯದ ಶಸ್ತ್ರ ಚಿಕಿತ್ಸೆಯಾಗಬೇಕೆಂದೂ ಅದು ಅಮೇರಿಕಾದಲ್ಲಿ ಮಾತ್ರವೇ ಸಾಧ್ಯವಾಗಬಹುದಾದ ಶಸ್ತ್ರ ಚಿಕಿತ್ಸೆಯೆಂದೂ ವೈದ್ಯರು ಹೇಳಿದಾಗ ಅವರು ತಲ್ಲಣಿಸಿ ಹೋದರು. ಆದರೆ ಬಾಬಾ ಆಶ್ಚರ್ಯಕರವಾದ

ರೀತಿಯಲ್ಲಿ ಅತ್ಯಲ್ಪ ಸಮಯದಲ್ಲಿ ಆಕೆಯನ್ನು ಗುಣ ಪಡಿಸಿದರು. ಒಂದು ರುದ್ರಾಕ್ಷಿಯನ್ನು ಸೃಷ್ಟಿಸಿಕೊಟ್ಟು ಪ್ರತಿದಿನವೂ ಅದಕ್ಕೆ ಅಭಿಷೇಕ ಮಾಡಿ ಆ ತೀರ್ಥವನ್ನು ಕುಡಿಯಬೇಕೆಂದು ಆದೇಶಿಸಿದರು. ಸೌಂದರರಾಜನ್ ಅವರ ಮಗನು ಉಗ್ರರೀತಿಯ ಕಾಮಾಲೆಯಿಂದ ನರಳುತ್ತಿದ್ದನು. ವೈದ್ಯರುಗಳೆಲ್ಲ ಆಸೆ ತೊರೆದ ಮೇಲೆ ಹುಡುಗನನ್ನು ಮನೆಗೆ ಕರೆತಂದು ಅವನ ಅಪೇಕ್ಷೆಯಂತೆ ಬಾಬಾ ಅವರ ಪಟದ ಎದುರಿಗೆ ಮಲಗಿಸಿದರು. ಸೌಂದರರಾಜನ್ ಪ್ರಶಾಂತಿ ನಿಲಯಕ್ಕೆ ಬಾಬಾ ಅವರಿಗೆ ಟೆಲಿಫೋನ್ ಮಾಡಿದರು. ಸಂಪರ್ಕವೇನೋ ಸಿಕ್ಕಿತು. ಆದರೆ ಸಂಪರ್ಕ ಎಷ್ಟು ಮಟ್ಟಿಗೆ ಗೊಂದಲಮಯವಾಗಿದ್ದಿತೆಂದರೆ ಸೌಂದರ ರಾಜನ್ ತಮ್ಮ ಪ್ರಾರ್ಥನೆಯನ್ನು ಬಾಬಾ ಅವರಿಗೆ ಮುಟ್ಟಿಸುವುದೇ ಸಾಧ್ಯವಾಗಲಿಲ್ಲ, ಭಗವಾನರ ದನಿ ಅವರಿಗೆ ಕೇಳಿಸಲೂ ಇಲ್ಲ. ಬಾಬಾ ಅವರ ನಾಮವನ್ನೇ ತುಟಿಗಳ ಮೇಲಿಟ್ಟುಕೊಂಡು ಹುಡುಗನು ಕೊನೆಯುಸಿರೆಳೆದನು. ಆಮೇಲೆ ಒಂದು ಸಾರಿ ಬಾಬಾ ಸೌಂದರರಾಜನ್ ಅವರಿಗೆ ಹೇಳಿದರು, ಅವರ ಮಗ ಶ್ರೇಷ್ಠವಾದ ಜೀವ. ಬಾಕಿಯಿದ್ದ ಅಲ್ಪ ಸ್ವಲ್ಪ ಕರ್ಮ ಋಣವನ್ನು ತೀರಿಸಿ ಮುಗಿಸಿದ ಮೇಲೆ ಜನನ ಮರಣಗಳ ಬಂಧನದಿಂದ ವಿಮುಕ್ತ ಹೊಂದಿದ್ದಾನೆ.

ರಾಜ ಮಹೇಂದ್ರಿಯ ಫುಟ್‌ಬಾಲ್ ಕ್ರೀಡಾಂಗಣದಲ್ಲಿ ಸೇರಿದ್ದ ಅಗಾಧ ಜನಸ್ತೋಮವನ್ನು ಉದ್ದೇಶಿಸಿ ಬಾಬಾ ಮಾತನಾಡಿದರು. ಎರಡು ವಾರಗಳ ನಂತರ ಅವರಿಗೊಂದು ಪತ್ರ ಬಂತು. ಅದನ್ನು ಬರೆದ ವ್ಯಕ್ತಿ ತನ್ನ ಮಗನನ್ನೂ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಆ ಭಾಷಣವನ್ನು ಆಲಿಸಿದ್ದನು. "ನನ್ನ ಮಗನು ಅಂದು ತಾವು ನೀಡಿದ ದಿವ್ಯೋಪನ್ಯಾಸದಿಂದಲೂ ಭಜನೆಗಳಿಂದಲೂ ಎಷ್ಟು ಪ್ರಭಾವಿತನಾದನೆಂದರೆ, ಅವನು ಸಂಪೂರ್ಣವಾಗಿ ತಮ್ಮಲ್ಲಿ ಮುಳುಗಿ ಹೋದನು. ಒಂದೇ ಸಮನೆ ಭಜನೆಗಳನ್ನೂ ತಮ್ಮ ವೈಭವವನ್ನೂ ಮಹಿಮೆಯನ್ನೂ ಹಾಡುತ್ತಿದ್ದನು. ಅತ್ಯುನ್ನತವಾದ ಆ ಪ್ರಜ್ಞಾಸ್ತರದಲ್ಲಿರುವಾಗಲೇ ಅವನು ಕೊನೆಯುಸಿರೆಳೆದನು. ಅಂತರ ಪರಿಶುದ್ಧಾತ್ಮನನ್ನು ನನ್ನ ಮಗನಾಗಿದ್ದನೆಂದು ಹೇಳಿಕೊಳ್ಳಲು ನಾನು ತುಂಬಾ ಸಂತೋಷ ಪಡುತ್ತೇನೆ. ಒಬ್ಬ ಮನುಷ್ಯನು ಸಾಧಿಸಬಹುದಾದ ಅತ್ಯುನ್ನತ ಸ್ಥಿತಿಯನ್ನು ಪಡೆದ ಅವನ ಅಂತ್ಯ ಸಂಸ್ಕಾರವನ್ನು ನಾವು ಸಂತೋಷದಿಂದ ನೆರವೇರಿಸಿದೆವು." ಪ್ರಾರ್ಥನೆ ಮಾಡಿಕೊಂಡಾಗ ಬಾಬಾ ಈ ವರವನ್ನು ನೇರವಾಗಿ ನೀಡಿದ ಸಂದರ್ಭಗಳೂ ಇವೆ.

ಚಿಂಚೋಳಿ ರಾಜಮ್ಮ ಎಂಬ ಮಹಿಳೆಯ ಎಂಟು ವರ್ಷದ ಮಗಳು ತಾಯಿಯೊಂದಿಗೆ ಆಗಾಗ ಪುಟ್ಟಪರ್ತಿಗೆ ಬರುತ್ತಿದ್ದಳು. ನಗೆದು, ಕುಣಿದು, ನಕ್ಕು ನಲಿದಾಡಿ ಎಲ್ಲರ ಮನಸ್ಸನ್ನೂ ಸೂರೆಗೊಳ್ಳುತ್ತಿದ್ದ ಹುಡುಗಿ ಬಾಬಾ ಅವರ ಸನ್ನಿಧಿಯಲ್ಲಿ ಸೂರ್ಯಕಿರಣದಂತೆ ಮಿಂಚುತ್ತಿದ್ದಳು. ಒಂದು ಸಂಜೆ ಕೆಲವು ಭಕ್ತರೊಂದಿಗೆ ಬಾಬಾ ಚಿತ್ರಾವತಿ ಮಳಲದಂಡೆಗೆ ಹೊರಟಾಗ ಅವರ ಪಾದರಕ್ಷೆಗಳನ್ನು ತಂದು ಆ ಹುಡುಗಿ ಅವರ ಮುಂದಿರಿಸಿದಳು. ಬಾಬಾ ಅವಳ ತಲೆ ದಡವಿ "ನಿನಗೇನು ಬೇಕು ಹೇಳು" ಎಂದು ಕೇಳಿದರು. ಎಲ್ಲರೂ ಬೆರಗಾಗುವಂತೆ, ತಾಯಿಗೆ ಆಘಾತವಾಗುವಂತೆ ಆ ಮುಗ್ಧ ಹುಡುಗಿ "ನನ್ನನ್ನು ತಮ್ಮಲ್ಲಿ ಲೀನಗೊಳಿಸಿಕೊಳ್ಳಬೇಕು" ಎಂದಳು!" "ನೀನಿನ್ನೂ ಮಗು; ಬೆಳೆದು ಮದುವೆ ಮಾಡಿಕೊಳ್ಳಬೇಕು, ನಿನ್ನ ಕುಟುಂಬವನ್ನು ಬೆಳೆಸಬೇಕು; ತಾಯಿಗೆ ಸಂತೋಷ

ಉಂಟುಮಾಡಬೇಕಲ್ಲವೆ?" ಎಂದು ಬಾಬಾ ಕೇಳಿದರು. ಭಗವಾನರಲ್ಲಿ ಲೀನವಾಗುವುದರ ಎದುರಿಗೆ ಅವೆಲ್ಲ ಅತ್ಯಂತ ಕ್ಷುಲ್ಲಕವಾದ ವಿಷಯಗಳು ಎಂದು ಬಿಟ್ಟಳು ಆ ಮುಗ್ಧ ಹುಡುಗಿ. ಇದೆಲ್ಲವನ್ನೂ ಅವಳು ಎಲ್ಲಿಂದ ಕಲಿತಳು ಎಂದು ನೆರೆದವರೆಲ್ಲ ಮೂಕ ವಿಸ್ಮಿತರಾದರು. ಬಾಬಾ ಹರಿಯುತ್ತಿದ್ದ ಅವಳ ಕಣ್ಣೀರು ಒರೆಸಿ ಹೇಳಿದರು "ನೋಡು, ನಿನಗೆ ತಂದೆಯಿಲ್ಲ. ನೀನು ತಾಯಿಯೊಂದಿಗೆ ವಾಸ ಮಾಡಬೇಕು." "ಸ್ವಾಮಿ, ತಾವು ಹೇಳಿದಂತೆ ನಾನು ಮದುವೆ ಮಾಡಿಕೊಂಡರೂ ತಾಯಿಯನ್ನು ಆಗಲಿ ಹೋಗಲೇಬೇಕಲ್ಲವೆ? ಇಲ್ಲ. ನೀವು ನನಗೆ ನಿಮ್ಮಲ್ಲಿ ಆಶ್ರಯ ಕೊಡಲೇಬೇಕು" ಎಂದಳು ಅವಳು. ಬಾಬಾ ಸ್ವಲ್ಪ ಹೊತ್ತು ಸುಮ್ಮನಿದ್ದರು. ಆ ಎಳೆ ಹೃದಯದ ಬೇಗುದಿಗೆ ಅವರ ಪ್ರತಿಕ್ರಿಯೆ ಅದು. "ಒಳ್ಳೆಯದು, ಒಳ್ಳೆಯದು" ಎನ್ನುತ್ತಾ ಅವಳ ಗಲ್ಲವನ್ನು ಹಿಡಿದು ಮುದ್ದಿಸಿ ನಡೆದರು ಬಾಬಾ. ಅದಾದ ಐದು ದಿನಗಳ ನಂತರ ಒಂದು ಗುರುವಾರ ಬೆಂಗಳೂರಿನಲ್ಲಿ ಆ ಹುಡುಗಿ ಕಣ್ಣುಗಳನ್ನು ಬಾಬಾ ಅವರ ಚಿತ್ರದ ಮೇಲೆ ನಟ್ಟು ಕೊನೆಯುಸಿರೆಳೆದಳು. ಅದಕ್ಕೆ ಕೇವಲ ಮೂರು ಗಂಟೆಗಳ ಹಿಂದೆ ಹಾರ ಹಾಕಿ ಪೂಜೆ ಮಾಡಿ, ಒಂದೇ ಸಮನೆ ಭಜನೆಗಳನ್ನು ಹಾಡುತ್ತಾ ಶಾಂತಚಿತ್ತದಿಂದ ಅವಳು ಬಾಬಾ ಅವರಲ್ಲಿ ಲೀನವಾದಳು. ಭಗವಂತನು ಅವಳನ್ನು ತನ್ನ ತೋಳ ತೆಕ್ಕೆಗೆ ಬರಸೆಳೆದುಕೊಂಡುದಕ್ಕಾಗಿ ತಾಯಿ ಕೃತಜ್ಞಳಾಗಿದ್ದಾಳೆ.

ಈ ಶತಮಾನದ ಮೂರನೆಯ ದಶಕದಲ್ಲಿ ಶ್ರೀ ರಣಜೋಧ್ ಸಿಂಗ್ ಕೆಲವು ವರ್ಷ ಮೈಸೂರು ಸಂಸ್ಥಾನದ ಪೋಲೀಸ್ ಇನ್ಸ್‌ಪೆಕ್ಟರ್ ಜನರಲ್ ಆಗಿದ್ದರು. ಅವರ ಮಗಳಿಗೆ ತೀವ್ರ ಸ್ವರೂಪದ ಕೊಲೈಟಿಸ್ ವ್ಯಾಧಿಯಾಗಿ ಯಾವುದೇ ಆಹಾರ, ಪಾನೀಯ ತೆಗೆದುಕೊಳ್ಳಲು ಸಾಧ್ಯವಾಗದಂತೆ ಮಾಡಿಬಿಟ್ಟಿತ್ತು. ತಂದೆ ತಾಯಿ ಇಬ್ಬರೂ ಬಾಬಾ ಅವರ ಭಕ್ತರು. ಆಕೆಗೂ ಅವರ ದೈವತ್ವದಲ್ಲಿ ಆಳವಾದ ಶ್ರದ್ಧೆ. ಒಂದು ಗುರುವಾರ ಇದ್ದಕ್ಕಿದ್ದಂತೆ ಅವರ ಮನೆಗೆ ಭೇಟಿ ನೀಡಿ ಬಾಬಾ ಎಲ್ಲರನ್ನು ಬೆರಗುಗೊಳಿಸಿದರು. ರೋಗದಿಂದ ಬಳಲಿದ್ದ ಆ ಹುಡುಗಿಗೆ ಸಮಾಧಾನ ಹೇಳಿ ಬಿಸಿ ಬಿಸಿಯಾದ ಗರಿಗರಿಯಾದ ಒಳ್ಳೆಯ ತುಪ್ಪದ ಪರಿಮಳ ಬೀರುತ್ತಿದ್ದ ಒಂದು ದೋಸೆಯನ್ನು ಸೃಷ್ಟಿಸಿ ಅವಳಿಗೆ ತಿನ್ನಲು ಕೊಟ್ಟರು. ಮುಂದಿನ ಗುರುವಾರವೂ ಬಂದು ತನ್ನ ಮನೆಯನ್ನು ಪಾವನಗೊಳಿಸಬೇಕೆಂದು ಶ್ರೀ ರಣಜೋಧ್‌ಸಿಂಗ್ ಬೇಡಿದಾಗ ಬಾಬಾ ಏನೂ ಮಾತಾಡದೆ ಹೊರಟು ಹೋದರು. ಆ ಮುಂದಿನ ಗುರುವಾರ ಹುಡುಗಿಯು ಹಾಸಿಗೆಯಿಂದ ಮೇಲೆದ್ದಳು, ಸ್ನಾನ ಮಾಡಿದಳು, ಬಾಬಾ ಅವರ ಚಿತ್ರಪಟಕ್ಕೆ ಪೂಜೆ ಮಾಡಿದಳು, ಆಮೇಲೆ "ನೋಡಿ! ಬಾಬಾ ನನ್ನನ್ನು ಕರೆಯುತ್ತಿದ್ದಾರೆ!" ಎಂದು ಹೇಳುತ್ತಲೆ ದೇಹತ್ಯಾಗ ಮಾಡಿದಳು. ಬಹಳ ಹಿಂದೆಯೇ ಬಾಬಾ ಅವಳಿಗಾಗಿ ಒಂದು ಬೆಳ್ಳಿಯ ತಟ್ಟೆಯನ್ನು ಸೃಷ್ಟಿಸಿಕೊಟ್ಟಿದ್ದರು. ಅದರಲ್ಲಿ ಎರಡು ಪಾದಗಳ ಗುರುತಿತ್ತು. ಅದನ್ನವಳು ವಿಷ್ಣು ಪಾದ ಎನ್ನುತ್ತಿದ್ದಳು. ಸದಾ ತನ್ನ ತಲೆದಿಂಬಿನ ಅಡಿಯಲ್ಲಿ ಭಕ್ತಿಯಿಂದ ಇರಿಸಿಕೊಂಡಿರುತ್ತಿದ್ದಳು. ಅವಳ ಪ್ರಾಣ ಹೋದೊಡನೆ ಆ ತಟ್ಟೆಯೂ ಮಾಯವಾಗಿ ಹೋಯಿತು. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ತಂದೆ ತಾಯಿ ಭಗವಂತನಿಗೆ ಅಪಾರ ಕೃತಜ್ಞತೆ ಅರ್ಪಿಸಿದರು. ಕೆಲವು ಅಮೆರಿಕನ್ನರು ವೈಟ್ ಫೀಲ್ಡಿನಲ್ಲಿ ಸ್ಟೀವ್ ಎಂಬ ಕ್ಯಾನ್ಸರ್ ಗ್ರಸ್ತ ತರುಣನನ್ನು ನೋಡಿಕೊಳ್ಳುತ್ತಿದ್ದರು. ಅವನ ಜೀವಿತಾಂತ್ಯ ಸಮೀಪಿಸಿದಾಗ ಅವರು ಹೇಳಿಕೊಂಡರು. "ಸತ್ತು ಬಾಬಾ ಅವರಲ್ಲಿ ಸೇರಿಕೊಳ್ಳುವುದು ಎಂಥ ಸುಖ ಅನ್ನುವುದು ಜನರಿಗೆ ಗೊತ್ತಿದ್ದರೆ! ಕೊನೆಯದಿನ ಸ್ಟೀವ್ ಹಿಂದಿನ ಮಾದಕ ದ್ರವ್ಯ ಮತ್ತು ಅಲ್ಕೋಹಾಲಿನ ' ದಿನಗಳನ್ನು

ಮರೆತು ಶುದ್ಧೀಕರಣ ಕ್ರಿಯೆಯ ಮೂಷೆಯಲ್ಲಿ ಬೆಂದು ಥಳಥಳಿಸುತ್ತಾ ಹೊರಬಂದನು ಸುಂದರವಾದ ಭಜನೆಗಳು ತುಟಿಗಳ ಮೇಲೆ, ಅದ್ವಿತೀಯ ಆನಂದ ಮುಖದ ಮೇಲೆ ಮಿನುಗುತ್ತಿರಲು ಅವನ ಪ್ರಾರ್ಥನೆಯನ್ನು ಬಾಬಾ ಈಡೇರಿಸಿದರು.

ಹೋನೋಲುಲುವಿನ ಡಾ. ಕ್ರೇಮರ್ ಅದೇ ಕೃತಜ್ಞತೆಯ ದನಿಯಲ್ಲಿ ಬರೆಯುತ್ತಾರೆ: "ಮೊಕ್ ಸತ್ತು ಹೋದ ವಿಷಾದ ಆದರೆ ಅತ್ಯಂತ ವೈಭವೋಪೇತವಾದ ಸುದ್ದಿಯನ್ನು ನಿಮಗೆ ತಿಳಿಸುವುದಕ್ಕಾಗಿ ಈ ಪತ್ರ ಬರೆಯುತ್ತಿದ್ದೇನೆ. ಅವಳು ನೇರವಾಗಿ ಬಾಬಾ ಅವರ ಕೈ ತೆಕ್ಕೆಗೇ ಹೋಗಿ ಸೇರಿರುತ್ತಾಳೆ. ಅವಳು ಕೊನೆಗಳಿಗೆಯಲ್ಲಿ ಎಷ್ಟು ಶಾಂತಳಾಗಿದ್ದಳು, ಹಸನ್ಮುಖಿಯಾಗಿದ್ದಳು ಎಂದರೆ ಅವಳ ಮುಖದಲ್ಲಿ ಕಳವಳದ ಒಂದು ಸಣ್ಣ ಕುರುಹೂ ಇರಲಿಲ್ಲ. ಕೊನೆಯ ಕ್ಷಣದ ವರೆಗೂ ಬಾಬಾ ಅವರ ನಾಮವನ್ನೇ ಅವಳು ಸ್ಮರಿಸುತ್ತಿದ್ದಳು."

## ಅಂಗೈಯಲ್ಲಿ ಕಂಡರು

ಒಬ್ಬ ವ್ಯಕ್ತಿ ಎರಡನೆಯ ಮಹಾಯುದ್ಧ ಸಂದರ್ಭದಲ್ಲಿ ಕ್ಯಾಪ್ಟನ್ ಆಗಿದ್ದನು. ಒಂದು ಸಿವಿಲ್ ಆಸ್ಪತ್ರೆಯಲ್ಲಿ ಸಾಮಾನ್ಯವಾದ ಸ್ಥಳೀಯ ರೋಗವೊಂದರಿಂದ ಅವನು ಮಡಿದನು. ಹಾಗಾಗಿ ಅವನ ಪತ್ನಿಗೆ ನಿವೃತ್ತಿ ವೇತನವಾಗಿ ಹೆಚ್ಚೇನೂ ದೊರಕಲಿಲ್ಲ. ಮೂರು ಮಕ್ಕಳನ್ನು - ಎರಡು ಹೆಣ್ಣು, ಒಂದು ಗಂಡು - ಸಾಕಲು ಆಕೆ ಸಂಗೀತ ಕಲಿಸಿಕೊಡುತ್ತಾ ಬಹಳ ಕಷ್ಟಪಟ್ಟು ಸ್ವಲ್ಪ ಹಣ ಸಂಪಾದಿಸಬೇಕಾಗಿತ್ತು. ಮಗ ಮದರಾಸು ವಿಶ್ವವಿದ್ಯಾನಿಲಯದಿಂದ ಪ್ರಥಮ ಶ್ರೇಣಿಯಲ್ಲಿ ಬಿ. ಎಸ್. ಸಿ., ಪರೀಕ್ಷೆಯಲ್ಲಿ ಉತ್ತೀರ್ಣನಾದ. ಆಗಿನ್ನೂ ಅವನಿಗೆ ಹದಿವಯಸ್ಸು. ಸೇನಾಧಿಕಾರಿಗಳು ಅವನಿಗೆ ಬೆಂಗಳೂರು ಕಂಟೋನ್ಮೆಂಟಿನಲ್ಲಿ ಒಂದು ಕೆಲಸವನ್ನು ಕೊಟ್ಟರು. ತನ್ನ ಕಷ್ಟ ಸಾರ್ಥಕವಾಯಿತೆಂದು ಮಗನನ್ನು ಕಳಿಸಿಕೊಟ್ಟಳು. ತಿರುಪತಿಯಲ್ಲಿ ತನ್ನ ಮನೆದೇವರು ವೆಂಕಟಾಚಲಪತಿಯ ದರ್ಶನ ಮಾಡಿ ಆ ದಿವ್ಯಾನುಗ್ರಹ ಪಡೆದ ನಂತರ ಅವನು ಬೆಂಗಳೂರಿಗೆ ಹೋಗಿ ಕೆಲಸದ ಮೇಲೆ ವರದಿ ಮಾಡಿಕೊಳ್ಳಬೇಕೆಂದು ಅವಳು ಬಯಸಿದಳು.

ಆದರೆ ನಡೆದದ್ದೇ ಬೇರೆ. ಹುಡುಗನು ತಿರುಪತಿಯ ಪವಿತ್ರ ಪುಷ್ಕರಿಣಿಯಲ್ಲಿ ಸ್ನಾನ ಮಾಡುವಾಗ ಮುಳುಗಿ ಸತ್ತು ಹೋದನು. ಯಾರೂ ಗುರುತು ಹಿಡಿಯಲಿಲ್ಲವೆಂದು ದೇಹವನ್ನು ಎರಡು ದಿನಗಳವರೆಗೆ ಪೋಲೀಸರು ತಮ್ಮ ವಶದಲ್ಲಿ ಇಟ್ಟುಕೊಂಡಿದ್ದರು. ದಿನ ಪತ್ರಿಕೆಗಳಲ್ಲಿ ಪ್ರಕಟವಾದ ತನ್ನ ಮಗನ ಹೆಣದ ಚಿತ್ರವನ್ನು ನೋಡಿ ಮೊದಲೇ ಕಾತರಪಡುತ್ತಿದ್ದ ತಾಯಿಗೆ ದುಃಖದ ಕಟ್ಟೆಯೊಡೆಯಿತು. ಆದರೆ ಅವಳ ಕನಸಿನಲ್ಲಿ ಬಾಬಾ ಕಾಣಿಸಿಕೊಂಡು ಅವಳನ್ನು ಪುಟ್ಟಪರ್ತಿಗೆ ಬರಲು ಹೇಳಿದರು. ಅಲ್ಲಿಗೆ ಹೋದಾಗ ಯಾರೋ ಒಬ್ಬ ಅಪರಿಚಿತ ವ್ಯಕ್ತಿಯು ಆಕೆಯನ್ನು ಭಗವಾನರ ಸಮ್ಮುಖಕ್ಕೆ ಕರೆದುಕೊಂಡು ಹೋದನು. ಆಕೆಯನ್ನೂ, ಮಕ್ಕಳನ್ನೂ ಸ್ವಾಮಿ ಸಂದರ್ಶನಕ್ಕೆ ಕರೆದರು. "ಅಳಬೇಡ. ಏಕೆಂದರೆ ಸಂಯಮದ ಜೀವನ ನಡೆಸಿದ ನಿನ್ನ ಮಗ, ಪೂರ್ಣ ಭಕ್ತಿಯಿಟ್ಟಿದ್ದುದರಿಂದ ಈಗ ಭಗವಂತನಲ್ಲಿ ಲೀನವಾಗಿದ್ದಾನೆ. ಕೊನೆಗೆ ಆರಾಧ್ಯದೈವದ ಚರಣಕಮಲದ ದಿವ್ಯಾನಂದವನ್ನು ಅವನು ಕಂಡುಕೊಂಡಿದ್ದಾನೆ. ಈಗ ನೀನು ಶೋಕಿಸಬಾರದು" ಎಂದು ಸಮಾಧಾನ ಹೇಳಿದರು. ಆದರೆ ಅದರಿಂದ ಅವಳ ವ್ಯಥೆ ಅಡಗಲಿಲ್ಲ.

ಬಾಬಾ ಮುಂದುವರಿಸಿದರು: "ಅವನ ಮೃತದೇಹದ ಕೊನೆಯ ದರ್ಶನವೂ ನಿನಗೆ ದೊರಕದೆ ಹೋದುದರಿಂದ ನಿನಗೆ ಅಪಾರ ಸಂಕಟವಾಗಿದೆಯಲ್ಲವೆ? ನೋಡು, ಇಲ್ಲಿದೆ" ಹೀಗೆಂದವರೇ ಬಾಬಾ ಆಕೆಯ ಕಣ್ಣ ಮುಂದೆ ತಮ್ಮ ಅಂಗೈ ಹಿಡಿದರು. ಅದರಲ್ಲಿ ಆಕೆ ತನ್ನ ಮಗನ ಜೀವಿತಾಂತ್ಯದ ಘಟನೆಗಳನ್ನು ಪೂರ್ತಿ ಕಂಡಳು. ಅವಳ ಮಗನು ಪುಷ್ಕರಿಣಿಗೆ ಇಳಿಯುತ್ತಿದ್ದಂತೆಯೇ ಕಾಲು ಜಾರಿ ಉರುಳಿದನು, ಅವನನ್ನು ಮೇಲೆತ್ತಲೆಂದು ಹಲವರು ನೀರಿಗೆ ಧುಮುಕಿದರು. ಮೇಲೆ ತಂದು ಪ್ರಥಮ ಚಿಕಿತ್ಸೆ ನೀಡಿದರು. ಆದರೆ ಆದರಿಂದ ಏನೂ ಪ್ರಯೋಜನವಾಗಲಿಲ್ಲ. ಅವನ ದೇಹದಿಂದ ತಾವರೆ ಹೂವಿನ ಆಕಾರದಲ್ಲಿ ಬೆಳಕಿನ ಕುಡಿಯು ಮೇಲೆದ್ದು, ನೇರವಾಗಿ ದೇವಾಲಯವನ್ನು ಪ್ರವೇಶಿಸಿ ಗರ್ಭಗುಡಿಯೊಳಗೆ ವೆಂಕಟಾಚಲಪತಿಯ ಪಾದಗಳಲ್ಲಿ ಬೆಳಕಿನೊಡನೆ ಬೆಳಕಾಗಿ ಲೀನವಾಯಿತು. ಆಮೇಲೆ ದೇವರ ವಿಗ್ರಹವು ಜೀವ ತಳೆದುದನ್ನೂ ನಿಧಾನವಾಗಿ ಅದು ಬಾಬಾ ಅವರ ದಿವ್ಯ ಮನೋಹರ ಮೂರ್ತಿಯಾಗಿ ರೂಪಾಂತರಗೊಂಡುದನ್ನೂ ಅವಳು ಕಂಡಳು.

ಸ್ವಲ್ಪ ಹೊತ್ತಾದ ಮೇಲೆ ಬಾಬಾ ನುಡಿದರು: "ಅಮ್ಮ, ನೀನು ಮಗನೆಂದು ಪ್ರೀತಿಸುತ್ತಿದ್ದ ಈ ವ್ಯಕ್ತಿ ಹಿಂದಿನ ಜನ್ಮದಲ್ಲಿ ಪರಮ ದೈವಭಕ್ತನಾಗಿದ್ದ. ಇದೇ ಪುಷ್ಕರಿಣಿಯ ಮೆಟ್ಟಿಲುಗಳ ಮೇಲೆ ಹನ್ನೆರಡು ವರ್ಷ ತಪಸ್ಸಿನಲ್ಲಿ ಮುಳುಗಿದ್ದ. ಅವನಲ್ಲಿ ಆಳವಾಗಿ ಬೇರೂರಿದ್ದ ಆಸೆಯೆಂದರೆ, ಆ ಪವಿತ್ರ ತೀರ್ಥದಲ್ಲಿ ಜಲಸಮಾಧಿ ಪಡೆಯಬೇಕು ಎನ್ನುವುದು. ಆ ಬಯಕೆಯನ್ನು ಪೂರೈಸಿಕೊಳ್ಳುವ ಸಲುವಾಗಿ ಅವನು ಮತ್ತೆ ಹುಟ್ಟಬೇಕಾಯಿತು. ಈಗ ನಿನ್ನ ಗುರುವಾಗಿ ಈ ಮೂಲಕ ನಿನ್ನನ್ನು ನನ್ನ ಬಳಿಗೆ ಕರೆತಂದನು. ನೀವು ಪುಟ್ಟಪರ್ತಿಯಲ್ಲೇ ಇದ್ದುಬಿಡು. ನಿನ್ನ ಮಗನನ್ನು ತನ್ನ ಮಡಿಲಿಗೆ ಸೇರಿಸಿಕೊಂಡ ವೆಂಕಟಾಚಲಪತಿಯ ದಿವ್ಯವೈಭವವನ್ನು ಮನದಣಿಯೆ ಹಾಡುತ್ತಾ ಇದ್ದುಬಿಡು."

## ಇಂದು ಗುರುವಾರ

ಪಾಲಘಾಟಿನ ವಿಕ್ಟೋರಿಯ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ರಾಮಕೃಷ್ಣ ಅಂದು ಮಧ್ಯಾಹ್ನದ ಬಿಡುವಿನಲ್ಲಿ ಮನೆಗೆ ಬರುತ್ತಿದ್ದರು. ದಾರಿಯಲ್ಲಿ ಒಬ್ಬ ಮುದುಕನು ಅವರನ್ನು ನಿಲ್ಲಿಸಿದನು. ನೋಡಲು ಶಿರ್ಡಿಯ ಸಾಯಿಬಾಬಾ ಅವರಂತೆಯೇ ಆತ ಇದ್ದುದನ್ನು ಕಂಡು ಪ್ರೊಫೆಸರ್ ಆಶ್ಚರ್ಯಪಟ್ಟರು. ತಮಿಳಿನಲ್ಲಿ ಆತ ಹೇಳಿದ: "ಇಂದು ಗುರುವಾರ." ಅದೇ ಒಂದು ವಿಶೇಷ ಸುದ್ದಿಯೆನ್ನುವ ಹಾಗೆ "ಆದ್ದರಿಂದ ರಮೇಶನನ್ನು ನಾನು ಕರೆದೊಯ್ಯುತ್ತಿದ್ದೇನೆ" ಎಂದ. ರಮೇಶ ಪ್ರೊಫೆಸರರ ಹದಿನಾಲ್ಕು ವರ್ಷ ವಯಸ್ಸಿನ ಮಗ. ಎಂದಿನಂತೆ ಅಂದೂ ಬೆಳಗ್ಗೆ ಶಾಲೆಗೆ ಹೋಗಿದ್ದ, ಪ್ರೊಫೆಸರ್ ದಡದಡನೆ ಮನೆಗೆ ಬಂದರು. ರಮೇಶ ವಿಪರೀತ ಜ್ವರ ಹಿಡಿದು ಶಾಲೆಯಿಂದ ಮನೆಗೆ ಬಂದು ಬಿಟ್ಟಿದ್ದ. ತನ್ನ ಹಾಸಿಗೆಯ ಪಕ್ಕದಲ್ಲಿ ತಂದೆ ತಾಯಿ ಇಬ್ಬರೂ ಒಟ್ಟಿಗೆ ನಿಲ್ಲುವುದಷ್ಟನ್ನು ನೋಡಲೆಂದೇ ಅವನು ಕಾದಿದ್ದನೆನ್ನಿಸಿತು. ತಕ್ಷಣವೇ ಅವನ ಪ್ರಾಣ ಹೋಯಿತು. ತಂದೆ ನನಗೆ ಬರೆದರು: "ಬಾಬಾ ಎಷ್ಟು ದಯಾಮಯರು! ತಾವು ರಮೇಶನನ್ನು ಕರೆದೊಯ್ಯುವುದಾಗಿ ಬಂದು ಹೇಳಿದರಲ್ಲ. ಅವರೇ ನೀಡಿದ್ದ ವರ ಈ ಹುಡುಗ. ಅದೂ ಒಂದು ಗುರುವಾರವೇ. ನಮ್ಮನ್ನು ತಮ್ಮ ಪಾದಕಮಲಗಳಿಗೆ ಅರ್ಪಿಸಿಕೊಳ್ಳಬೇಕೆಂದು ಹೇಳುವುದು ಗುರುವಾರವೇ ತಾನೆ." ಕೆಲವು ವಾರಗಳ ಅನಂತರ ಉದಕಮಂಡಲದಲ್ಲಿ ಬಾಬಾ ಆ ಪ್ರೊಫೆಸರರನ್ನೂ ಅವರ ಪತ್ನಿಯನ್ನೂ ಸಂದರ್ಶನಕ್ಕೆ ಕರೆದು,

ತಾವು ಹೇಳಿದ ಮಾತನ್ನು ಸ್ಥಿರೀಕರಿಸಿದರು. ಬಂಗಲೆಯಲ್ಲಿ ನೇತುಹಾಕಿದ್ದ ಆ ಬಾಲಕನ ಚಿತ್ರದ ತುಂಬ ವಿಭೂತಿಯ ಮಳೆಗರೆದು ಅನುಗ್ರಹಿಸಿದರು.

ಅಮೇರಿಕಾದ ಪೆಸಿಫಿಕ್ ಕರಾವಳಿಯಲ್ಲಿ ಸ್ಯಾನ್‌ಡಿಯೇಗೋದ ಲಿನ್ ಎಂಬ ಬಾಲಕಿಯ ತಾಯಿಗೂ ಇದೇ ಬಗೆಯ ಸಾಂತ್ವನ ದೊರಕಿತು. ಮಗಳು ಅಂದು ಗುರುವಾರ, ತನ್ನ ತಮ್ಮನನ್ನು ನಾಯಿಯಿಂದ ರಕ್ಷಿಸಲು ಮರಹತ್ತಲು ಹೋಗಿ ಕೆಳಗೆ ಬಿದ್ದು ಸತ್ತು ಹೋದಳು. ಲಿನ್ ಬಾಬಾ ಅವರನ್ನು ಪೂಜಿಸುತ್ತಿದ್ದಳು. ಅವಳು ತನ್ನ ಬಾಲವಿಕಾಸ ವರ್ಗದ ಅತ್ಯಂತ ಪ್ರತಿಭಾಶಾಲಿ ಮಗು. ಅವಳ ತಾಯಿಯು ಈ ಗಂಡಾಂತರವನ್ನು ಧೈರ್ಯವಾಗಿ ಶಾಂತಚಿತ್ತದಿಂದ ಎದುರಿಸಿದಳು. ಏಕೆಂದರೆ ಬಾಬಾ ಅವಳಿಗೆ ವಿಧಿಯ ಇಂತಹ ಪೆಟ್ಟುಗಳನ್ನು ಸಮಚಿತ್ತದಿಂದ ಸಹಿಸುವ ವಿವೇಕವನ್ನು ದಯಪಾಲಿಸಿದ್ದರು.

1973ರ ಡಿಸೆಂಬರ್ 31ನೇ ತಾರೀಕು ನವದೆಹಲಿಯಿಂದ ಒಬ್ಬ ದುಃಖ ತಪ್ತ ತಂದೆಯಿಂದ ನನಗೆ ಪತ್ರ ಬಂದಿತು. ಆತ ಬರೆದಿದ್ದರು : "ತಾವು ಬಹಳ ಕಾರ್ಯಮಗ್ನರಾಗಿರುವುದರಿಂದ ನನ್ನ ಪತ್ರಕ್ಕೆ ಉತ್ತರ ದೊರಕುವುದಿಲ್ಲ ಎಂದು ನಾನು ಬಲ್ಲೆ. ಆದರೂ ನನಗೆನ್ನಿಸುತ್ತಿರುವುದನ್ನು ನಾನು ಬರೆಯಲೇಬೇಕು. ಏಕೆಂದರೆ ಆದರಿಂದ ನಾನು ನನ್ನ ದೈವ ಸಾಯಿಬಾಬಾ ಅವರ ಸನಿಹಕ್ಕೆ ಹೋದಹಾಗಾಗುತ್ತದೆ.

"ಡಿಸೆಂಬರ್ 21ನೇ ತಾರೀಕು ಸಫ್ದರ್‌ಜಂಗ್ ಆಸ್ಪತ್ರೆಯಲ್ಲಿ ನನ್ನ ಮಗಳು ತೀವ್ರ ಸುಟ್ಟಗಾಯಗಳಿಂದಾಗಿ ತೀರಿಕೊಂಡಳು. ಎಂಟು ದಿನಗಳ ಕಾಲ ನಾನು ಅವಳ ಜೊತೆಯಲ್ಲೇ ಇದ್ದೆ, ಬಾಬಾ ಸದಾ ನನ್ನ 'ಜೊತೆಗಿದ್ದರು' ಅವರ ಉಪಸ್ಥಿತಿ ನನಗೆ ಎಷ್ಟು ಧೈರ್ಯವನ್ನೂ ಶಾಂತಿಯನ್ನೂ ನೀಡಿತೆಂದರೆ ಆ ದುರ್ಭರ ಯಾತನೆಯನ್ನು ಒಂದು ಗೋಣಗಾಟವಾಗಲಿ ಒಂದು ಹನಿ ಕಣ್ಣೀರಾಗಲಿ ಇಲ್ಲದೆ ಎದುರಿಸುವುದು ನನಗೆ ಸಾಧ್ಯವಾಯಿತು. ನನ್ನ ಮಗಳು ಆ ರೀತಿಯಲ್ಲಿ ಸಾಯಬೇಕೆಂಬುದೇ ವಿಧಿಯಾಗಿತ್ತು, ಆದ್ದರಿಂದಲೇ ಬಾಬಾ ಅವರಿಗೆ ನಾನು ಸಲ್ಲಿಸಿದ ಪ್ರಾರ್ಥನೆಯೆಲ್ಲ ವಿಫಲವಾಯಿತು. ಆದರೆ ಅವರ ಕೃಪಾಶೀರ್ವಾದ ಸದಾ ಕಾಲವು ನಮ್ಮ ಮೇಲಿದ್ದುವು. ಸಾಯುವುದಕ್ಕೆ ಮೊದಲು ನನ್ನ ಮಗಳು ಭಗವಾನರ ಚರಣಾಮೃತವನ್ನೂ ವಿಭೂತಿಯನ್ನೂ ಸೇವಿಸಿದಳು. ಅವಳ ಅಂತ್ಯ ಪೂರ್ಣ ಶಾಂತಿಯುತವಾಗಿತ್ತು ಎಂದು ತಿಳಿದು ನಿಮಗೆ ಸಂತೋಷವಾದಿತು. ಅವರ ದೇಹದ ಯಾತನೆ ಅದೇ ವಾರ್ಡಿನಲ್ಲಿ ಅದೇ ಬಗೆಯ ಗಾಯಗಳಿಂದ ನರಳುತ್ತಿದ್ದ ಇತರರ ನೋವಿಗೆ ಹೋಲಿಸಲು ಸಾಧ್ಯವೇ ಇರಲಿಲ್ಲ. ನನ್ನ ಕೃತಜ್ಞತಾ ಪೂರ್ವಕ ವಂದನೆಗಳನ್ನು ಭಗವಾನರಿಗೆ ದಯವಿಟ್ಟು ತಿಳಿಸಬೇಕು."

ವಯಸ್ಸಾಗಿದ್ದ ಒಬ್ಬ ಭಕ್ತ ರಾವಲ್ ಶೇಷಗಿರಿರಾವ್ ಕೊನೆಯುಸಿರೆಳೆಯುವ ಹಂತದಲ್ಲಿದ್ದರು. ಆಗ ಪ್ರಶಾಂತಿ ನಿಲಯದಲ್ಲಿದ್ದ ಅವರ ಕೊಠಡಿಗೆ ಬಾಬಾ ಪ್ರವೇಶಿಸಿ ಅವರಿಗೆ ಮರಳಿ ಚೈತನ್ಯ ನೀಡಿ ಅವರು ಎದ್ದು ಕುಳಿತು ಕಾಫಿ ಕುಡಿಯುವಂತೆ ಮಾಡಿದರು. ಹದಿನಾಲ್ಕು ವರ್ಷಗಳಿಗಿಂತಲೂ ಹೆಚ್ಚು ಕಾಲ ಮಂದಿರದ ಹೊಣೆಗಾರಿಕೆ ಶೇಷಗಿರಿರಾವ್ ಅವರದಾಗಿತ್ತು. ಶಾಸ್ತ್ರಾಧ್ಯಯನ ಮಾಡಿದ್ದು, ಜಪ, ಪೂಜೆ ಪುನಸ್ಕಾರಗಳಲ್ಲಿ ಅತ್ಯಂತ ಕ್ರಮಬದ್ಧ ನಿರ್ವಹಣೆ ತೋರಿಸಿದ್ದರು. ವಾಸ್ತವವಾಗಿ ಬಾಬಾ ಅವರ ರೂಪವನ್ನು ಕಣ್ಣೆದುರಿಗಿಸಿಕೊಂಡು ನಾಲಗೆಯಲ್ಲಿ ಉಪನಿಷತ್ತಿನ ಈ ಮಾತುಗಳನ್ನು ಹೇಳುತ್ತಾ ಅವರು ಪ್ರಾಣ ಬಿಡುವ ಅಂಚಿಗೆ ಬಂದಿದ್ದರು: "ಈ ನನ್ನ ದೇಹಕ್ಕೆ ಪಂಚಭೂತಗಳ ಮಿಶ್ರಣವೇ

ಕಾರಣವಾಗಿದೆ, ಅವು ಈಗ ಪರಸ್ಪರ ಆಗಲಿ ಹೋಗುತ್ತಿವೆ"- ಎಂದರು ಅವರು. "ಎಂಥ ಭವ್ಯವಾದ ಮರಣ!" ಎಂದು ನಾನಂದುಕೊಂಡೆ. ಆದರೆ ಶೇಷಗಿರಿರಾವ್ ತಮ್ಮ ಕರ್ಮದ ಸಾಲವನ್ನು ಇನ್ನೂ ಸ್ವಲ್ಪ ತೀರಿಸಬೇಕಾಗಿದೆ ಎಂದು ಬಾಬಾ ಅವರಿಗೆ ಗೊತ್ತು. ಅವರು ಬಯ್ದರು: "ಮೊದಲು ನನ್ನಿಂದ ಟಿಕೆಟ್ ಪಡೆದುಕೊಳ್ಳದೆ ನೀನು ಹೇಗೆ ಪ್ರಯಾಣವನ್ನು ತೊಡಗಿದೆ? ಕೆಳಗಿಳಿ. ಹೋಗು, ಮಂದಿರದ ನಿನ್ನ ನಿತ್ಯಕರ್ಮಗಳನ್ನು ಎಂದಿನಂತೆ ಮಾಡು ಹೋಗು. ಬೆಳಗಿನ ಭಜನೆಯಲ್ಲಿ ಭಾಗವಹಿಸು, ಆರತಿ ಮಾಡು." ಬಾಬಾ ಹೇಳಿದಂತೆಯೇ ಅವರು ಮಾಡಿದರೆಂದು ಬೇರೆ ಹೇಳಬೇಕಾದ ಅಗತ್ಯವಿಲ್ಲವಷ್ಟೆ.

## ನೀನು ಸಾಯುವುದು ಸಾಧ್ಯವಿಲ್ಲ

ಬೆಂಗಳೂರಿನಲ್ಲಿ ವಾಸಿಸುತ್ತಿದ್ದ ಒಬ್ಬ ವ್ಯಕ್ತಿಯು ಸಾಯುವುದಕ್ಕೆ ಸಿದ್ಧನಾಗಿದ್ದವನು ಹೇಳಿಕೊಂಡಿರುವುದನ್ನು ಈಗ ಪರಿಶೀಲಿಸೋಣ. ವ್ರಜಲಾಲ್ ಪಿ. ಪಾರೇಖ್ 1972 ಆಗಸ್ಟ್ 18 ರಂದು ನನಗೆ ಒಂದು ಪತ್ರ ಬರೆದರು. "ಆರು ವರ್ಷಗಳ ಹಿಂದೆ ನಾನು ವೈಟ್ ಫೀಲ್ಡಿನ ಬೃಂದಾವನದಲ್ಲಿ ಸಾಯಿರಾಂ ವೃಕ್ಷದ ಸುತ್ತ ಇದ್ದ ದರ್ಶನಾಪೇಕ್ಷಿಗಳ ಸಾಲಿನಲ್ಲಿ ಕುಳಿತಿದ್ದೆ. ಬಾಬಾ ನನಗೆ ಸಂದರ್ಶನವನ್ನು ದಯಪಾಲಿಸಿದರು. ತೀರಾ ವೈಯಕ್ತಿಕವಾಗಿದ್ದ ಆಲೋಚನೆಗಳನ್ನೂ ನನ್ನನ್ನು ಕಾಡುತ್ತಿದ್ದ ಚಿಂತೆಗಳನ್ನೂ ಅವರು ಬಯಲಿಗೆಳೆದರು, 'ಶ್ರದ್ಧೆಯಿಂದಿರು; ಶಾಂತನಾಗಿರು. ಬಾಬಾ ಆಶೀರ್ವಾದ ಸದಾ ನಿನ್ನ ಮೇಲಿದೆ' ಎಂದು ನನಗೆ ಆಶೀರ್ವಾದ ಮಾಡಿ ಧೈರ್ಯ ತುಂಬಿ ಕಳಿಸಿಕೊಟ್ಟರು. ಆದರೆ ನನಗೆ ವಿಭೂತಿ ಕೊಡಲಿಲ್ಲ. ವ್ಯವಹಾರದಲ್ಲಿ ನನ್ನ ಅದೃಷ್ಟ ಅತ್ತಿಂದಿತ್ತ ಹೊಯ್ದಾಡುತ್ತಿದ್ದಂತೆ ಅವರಲ್ಲಿ ನನಗಿದ್ದ ಶ್ರದ್ಧೆ ನಂಬಿಕೆಗಳೂ ಹೊಯ್ದಾಡುತ್ತಿದ್ದುವು. ನನ್ನ ಕಳವಳ ಹೆಚ್ಚಾಯಿತು. 1938ರಲ್ಲಿ ನಾನು ವಾಣಿಜ್ಯ ಶಾಸ್ತ್ರದಲ್ಲಿ ಡಿಪ್ಲೋಮಾ ಪಡೆದಿದ್ದರೂ ಆಧುನಿಕ ವ್ಯವಹಾರದಲ್ಲಿ ಹೊಸ ತಂತ್ರಜ್ಞಾನವಿಲ್ಲದೆ ಅನರ್ಹನಾಗುತ್ತಿದ್ದೇನೆ ಎನ್ನಿಸಿತು. ಆರ್ಥಿಕವಾಗಿಯಂತೂ ಪೂರ್ತಿ ದಿವಾಳಿಯಾಗಿಬಿಟ್ಟೆ. ನನಗೆ ವಿಪರೀತ ಬೇಸರವಾಯಿತು, ಬದುಕಿರುವುದೇ ಜಿಗುಪ್ಸೆಯೆನಿಸಿತು. ಪ್ರಾಣ ಕಳೆದುಕೊಂಡು ಬಿಡಬೇಕೆಂದು ನಿರ್ಧರಿಸಿದೆ. ಒಂದು ಸೀಸೆ ಟಿಕ್ - 20 ವಿಷವನ್ನು ಕೊಂಡು ತಂದು ತುಂಬಾ ರಹಸ್ಯವಾದ ಸ್ಥಳದಲ್ಲಿಟ್ಟೆ. ಬಹಳವಾಗಿ ಎಲ್ಲ ವಿಷಯಗಳನ್ನೂ ಆಲೋಚನೆ ಮಾಡಿ 1970 ಸೆಪ್ಟೆಂಬರ್ 4ನೇ ತಾರೀಕು, ಗಣೇಶ ಚತುರ್ಥಿಯ ರಾತ್ರಿ ಅದನ್ನು ಕುಡಿದುಬಿಡುವುದು ಎಂದು ತೀರ್ಮಾನಿಸಿದೆ.

ಆದರೆ, ಕೆಲವಾರು ತಿಂಗಳಿಂದ ಕಾಯಿಲೆ ನರಳುತ್ತಿದ್ದ ನನ್ನ ಅಕ್ಕ ಅದೇ ದಿನವೇ ತೀರಿ ಹೋಗಬೇಕೆ! ನನ್ನ ಆತ್ಮಹತ್ಯಾ ಪ್ರಯತ್ನವನ್ನು ಮುಂದಕ್ಕೆ ಹಾಕಬೇಕಾಯಿತು. ಬಾಬಾ ಅವರ ಈ ವಿಚಿತ್ರ ಕಾರ್ಯವಿಧಾನಗಳು ನಮಗೆ ಅರ್ಥವಾಗುವುದಿಲ್ಲ. ನನಗೆ ಇನ್ನೂ ಹೆಚ್ಚಾಗಿ ಮಂಕು ಕವಿಯಿತು. 1970 ಸೆಪ್ಟೆಂಬರ್ 11ನೇ ತಾರೀಕು ಶುಕ್ರವಾರ ಸಂಜೆ 4 ಗಂಟೆಗೆ ವಿಷ ಕುಡಿದುಬಿಡುವುದು ಎಂದು ನಿರ್ಧರಿಸಿದೆ. ವಿಷದ ವೇದನೆ ಅತಿಯಾಗಿ ಆಗದೆ ನನಗೆ ಶಾಂತವಾದ ಸಾವು ದೊರಕಲಿ ಎಂದು ಅದರ ಜೊತೆಯಲ್ಲಿ ಒಂದು ಚಿಟಿಕೆ ವಿಭೂತಿ ಸೇರಿಸಿ ಕುಡಿಯುವುದೆಂದು ತೀರ್ಮಾನಿಸಿದೆ. ಆ ಸೀಸೆಯನ್ನು ಜೇಬಿನಲ್ಲಿ ಇಟ್ಟುಕೊಂಡು ಅಂದು ಬೆಳಿಗ್ಗೆ ಸ್ವಲ್ಪ ಬೇಗನೆಯೇ ಅಂಗಡಿಗೆ ಹೋದೆ. ಅಂಗಡಿಯಲ್ಲಿ

ನಾನೊಬ್ಬನೇ. ಮಧ್ಯಾಹ್ನ ಯಾವ ಗಿರಾಕಿಯೂ ಬರುತ್ತಲೂ ಇರಲಿಲ್ಲ. ಸಾವಿನ ಸಮಯ ಹತ್ತಿರವಾಗುತ್ತಿದೆ ಎಂದು ನನಗೆ ಸಂತೋಷವಾಗುತ್ತಿತ್ತು. ಮಧ್ಯಾಹ್ನದ ಅಂಚೆಯಲ್ಲಿ ಬಂದ ಸನಾತನ ಸಾರಥಿ ಸಂಚಿಕೆಯನ್ನು ಓದುತ್ತಾ ಬಾಬಾ ಅವರಲ್ಲಿ ಲೀನವಾಗಲು ಸಾಯುವಾಗ ಎಂಥ ಪವಾಡವಾಗಬಹುದು ಎಂದು ಯೋಚಿಸುತ್ತಿದ್ದೆ.

1.30 ಗಂಟೆಗೆ ಇಬ್ಬರು ಸಾಮಾನ್ಯ ವಸ್ತ್ರಧಾರಿಗಳಾದ ಅಧಿಕಾರಿಗಳು ಅಂಗಡಿಗೆ ಬಂದು ಒಡನೆಯೆ ಅವರ ಜೊತೆಯಲ್ಲಿ ಶೇಷಾದ್ರಿಪುರಂ ಪೋಲೀಸ್ ಸ್ಟೇಷನ್ನಿಗೆ ಬರಬೇಕೆಂದು ಹೇಳಿದರು. ಅದೇಕೆ ಎಂದು ನನಗೆ ಸ್ವಲ್ಪವೂ ತಿಳಿಯಲಿಲ್ಲ. ತಲೆ ಬಿಸಿಯಾಗಿ ಅಂಗಡಿ ಬಾಗಿಲು ಮುಚ್ಚಿ ಅವರೊಂದಿಗೆ ಹೋದೆ. ಸೀಸೆ ನನ್ನ ಅಂಗಿಯ ಜೇಬಿನಲ್ಲಿತ್ತು. ಸ್ಟೇಷನಿನಲ್ಲಿ ಇನ್ಸ್‌ಪೆಕ್ಟರ್ ಹೊರಗೆ ಹೋಗಿದ್ದಾರೆ ಎಂದು ತಿಳಿಯಿತು. ಉತ್ತರ ಪ್ರದೇಶದ ಮೊರಾದಾಬಾದಿನಿಂದ ಒಬ್ಬ ಮ್ಯಾಜಿಸ್ಟ್ರೇಟರು ನನ್ನ ಬಂಧನದ ವಾರಂಟ್ ಕಳಿಸಿದ್ದಾರೆ ಎಂದು ತಿಳಿಯಿತು. ಆಗ ನನಗೆ ಅರ್ಥವಾಯಿತು. ಮೊರಾದಾಬಾದಿನ ಒಬ್ಬ ವ್ಯಾಪಾರಿಯು ನಾನು ಅವನ ಒಂದು ಬಿಲ್ಲನ್ನು ಪಾವತಿ ಮಾಡಿರಲಿಲ್ಲವಾದ್ದರಿಂದ ನನ್ನ ಮೇಲೆ ಮೊಕದ್ದಮೆ ಹೂಡಿದ್ದನು. ನನ್ನ ಕಷ್ಟಗಳನ್ನು ವಿವರಿಸಿ ಸ್ವಲ್ಪ ಸಮಯ ಕೊಡಬೇಕೆಂದು ಪರಿಪರಿಯಾಗಿ ಬೇಡಿಕೊಂಡರೂ ಕೇಳದೆ ನನ್ನನ್ನು ನಂಬದೆ ಅವನು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದ್ದನು. ವಾರಂಟೇನೋ ಜಾಮಿನು ಕೊಡಬಹುದಾದ್ದು, ಆದರೆ ಒಬ್ಬ ಜಾಮೀನುದಾರರನ್ನು ನಾನು ಹುಡುಕಿ ತರಬೇಕಾಗಿತ್ತು.

"ಈ ಮಧ್ಯೆ ನನ್ನನ್ನು 'ಲಾಕಪ್' ಒಳಕ್ಕೆ ಹೋಗುವಂತೆ ಆದೇಶಿಸಿದರು. ಪೋಲೀಸ್ ಅಧಿಕಾರಿ ನುಡಿದನು: "ನಿಮ್ಮ ಜೇಬುಗಳಲ್ಲಿರುವ ಎಲ್ಲ ವಸ್ತುಗಳನ್ನೂ ಹೊರ ತೆಗೆದು ಈ ಮೇಜಿನ ಮೇಲಿಟ್ಟು ಹೋಗಿ." ಜೇಬಿನಲ್ಲಿದ್ದ ಸೀಸೆಯಿಂದಾಗಿ ನಾನು ಸ್ವಲ್ಪ ಹಿಂದೆ ಮುಂದೆ ನೋಡುತ್ತಿದ್ದೆ. ಇದು ಕೇವಲ ಸಿವಿಲ್ ಮೊಕದ್ದಮೆಯಾದ್ದರಿಂದ ನನ್ನನ್ನು ದಯವಿಟ್ಟು 'ಒಳಕ್ಕೆ' ಕಳಿಸಬಾರದೆಂದು ಕೇಳಿಕೊಂಡೆ. ನನ್ನ ಬಗ್ಗೆ ಸ್ವಲ್ಪ ಸಹಾನುಭೂತಿ ಉಂಟಾಗಿ ಅಲ್ಲೇ ಪಕ್ಕದಲ್ಲಿದ್ದ ಒಂದು ಬೆಂಚಿನ ಮೇಲೆ ಕುಳ್ಳಿರ ಹೇಳಿದನು. ಅಣ್ಣನಿಗೆ ಬರಲು ಹೇಳಿಕಳಿಸಿದೆ. ಅವನೂ ಬೇಗ ಬಂದನು. ಕಾಗದದಲ್ಲಿ ಸುತ್ತಿದ್ದ ಸೀಸೆಯನ್ನು ಅವನ ಕೈಗೆ ಕೊಟ್ಟು ಯಾರಿಗೂ ಹೇಳದೆ ಮನೆಯಲ್ಲಿ ಗುಪ್ತವಾಗಿಡಬೇಕೆಂದು ಕೇಳಿಕೊಂಡೆ. ನನಗೆ ಜಾಮೀನು ಕೊಡಲು ಯಾರನ್ನಾದರೂ ಕರೆದುಕೊಂಡು ಬರಬೇಕೆಂದೂ ಹೇಳಿದೆ.

"ಸರಿಯಾಗಿ 4 ಗಂಟೆ ಹೊಡೆಯುವ ಹೊತ್ತಿಗೆ ಪೋಲೀಸ್ ಇನ್ಸ್‌ಪೆಕ್ಟರ್ ಬಂದರು. ನನ್ನನ್ನು ಕಾರಾಗೃಹದೊಳಕ್ಕೇ ಕಳಿಸಬೇಕೆಂದು ಆಜ್ಞೆ ಮಾಡಿದರು. ನಾನು ಎಷ್ಟು ವಿಧವಾಗಿ ಕೇಳಿಕೊಂಡರೂ ಅವರು ಬಗ್ಗಲಿಲ್ಲ. "ಬಾಬಾ ಅವರ ಆಶೀರ್ವಾದ ಸದಾ ನಿನ್ನ ಮೇಲಿದೆ" ಎಂದು ಸ್ವಾಮಿ ಅಂದು ಹೇಳಿದ್ದುದನ್ನು ಇಂದು ನೆನೆದೆ. ಅವರು ನನ್ನನ್ನು ಆತ್ಮಹತ್ಯೆ ಮಾಡಿಕೊಳ್ಳದಂತೆ ತಡೆದಿದ್ದರು. ನನಗೆ ತುಂಬಾ ಸಂತೋಷವಾಯಿತು. ಲಾಕಪ್ ಒಳಗೆ ಬಾಬಾ ನನ್ನ ಮೂರ್ಖತನಕ್ಕಾಗಿ ನಗುತ್ತಾ ನಿಂತಿದ್ದುದನ್ನು ಕಂಡೆ.

"ನಾನು ಆ ಸೆಲ್‌ನಲ್ಲಿ ನಾಲ್ಕು ನಿಮಿಷ ಇದ್ದಿರಬಹುದು ಅಷ್ಟೆ. ನನ್ನ ಅಣ್ಣ ಜಾಮೀನು ಕೊಡಲು ಬೇರೊಬ್ಬರನ್ನೂ ಕರೆದುಕೊಂಡು ಬಂದನು. ನನ್ನನ್ನು ಬಿಡುಗಡೆ ಮಾಡಿದರು. ವಿಷವನ್ನು ಜೇಬಿನಲ್ಲಿ ಇಟ್ಟುಕೊಂಡಿದ್ದಕ್ಕಾಗಿ ಅಣ್ಣ ನನ್ನನ್ನು ಚೆನ್ನಾಗಿ ಬಯ್ದನು. ಆತ್ಮ ಹತ್ಯೆಯ ಮೊದಲ

ಪ್ರಯತ್ನವು ಅಕ್ಕನ ಸಾವಿನಿಂದಾಗಿ ನಿಲ್ಲುವಂತೆ ಬಾಬಾ ನೋಡಿಕೊಂಡರು, ಅದೇ ಸಮಯಕ್ಕೆ ಇಳಿಯವಯಸ್ಸಿನಲ್ಲಿ ತೀವ್ರ ಯಾತನೆಯಿಂದ ಕಷ್ಟಪಡುತ್ತಿದ್ದುದನ್ನು ಅವಳಿಗೆ ತಪ್ಪಿಸಿದರು. ಮತ್ತೆ ಎರಡನೆಯ ಪ್ರಯತ್ನ ತಪ್ಪಿಸಿದರು. 1800 ಮೈಲಿ ದೂರದಿಂದ ಬಂಧನ ಆದೇಶವು ಬರುವಂತೆ ಮಾಡಿ, ಆತ್ಮಹತ್ಯೆಗೆ ನಾನು ನಿಗದಿಪಡಿಸಿಕೊಂಡಿದ್ದ ಸಮಯಕ್ಕೆ ಸರಿಯಾಗಿ ವಿಷದ ಸೀಸೆ ಜೇಬಿನಲ್ಲಿ ಇಲ್ಲದೆ ನಾನು ಕಾರಾಗೃಹದೊಳಗೆ ಹೋಗುವಂತೆ ಮಾಡಿದರು. ಅವರ ಅದ್ಭುತವನ್ನು ಅಳೆಯುವುದು ಯಾವ ಮಾನವಮತಿಗೂ ಅಸಾಧ್ಯ."

## ನೀವು ಬಂದಿದ್ದೀರಿ

ದೈವಕೃಪೆಯ ದಿಗಂತದೊಳಗೆ ಬಂದಿರುವ ಅನೇಕರು ಶಾಂತಿಯಿಂದ, ಸಂತೋಷವಾಗಿ ಮರಣವನ್ನಪ್ಪಿದ್ದಾರೆ. ಬಾಬಾ ಅವರ ನಾಮವನ್ನು ಉಚ್ಚರಿಸುತ್ತಾ, ಅಥವಾ ತನಗೆ ಬಾಬಾ ಅವರ ದರ್ಶನವಾಗುತ್ತದೆ ಎಂದು ಹೇಳುತ್ತಾ ಕೊನೆಯುಸಿರೆಳೆದಿದ್ದಾರೆ. ನಾವು ಹುಟ್ಟಿದಾಗ ಕೋಽಹಂ ಎಂದು ಅತ್ತೆವು ಎಂದು ಬಾಬಾ ಹೇಳುತ್ತಾರೆ. ಆಗ 'ನಾನು ಯಾರು' ಎಂಬ ಸಮಸ್ಯೆ ನಮಗೆದುರಾಗಿತ್ತು. ಹಾಗೆಯೇ ನಾವು ಸಂತೋಷವಾಗಿ ಸೋಽಹಂ (ನಾನು ಅದೇ ಆಗಿದ್ದೇನೆ) ಎನ್ನುತ್ತಾ ಕೊನೆಯುಸಿರೆಳೆಯಬೇಕು. 'ಬಾಬಾ ನನ್ನನ್ನು ಕರೆಯುತ್ತಿದ್ದಾರೆ', 'ಇಲ್ಲೇ ಪಕ್ಕದಲ್ಲಿ ಬಾಬಾ ನಿಂತಿದ್ದಾರೆ' ಎಂದು ಭಕ್ತರು ಪ್ರಾಣ ಬಿಡುವ ಮೊದಲು ಹೇಳುವುದುಂಟು. ಅದು ವೈಟ್ ಫೀಲ್ಡಿನಲ್ಲಿ ಪುನರುತ್ಥಾನಗೊಂಡ ವಾಲ್ಟರ್ ಕೊವಾನ್ ಮತ್ತು ಅವನ ಪತ್ನಿ ಇವರ ಮೇಲೆ ಮತ್ತಷ್ಟು ಅನುಗ್ರಹದ ಮಳೆಗರೆಯಲೆಂದು ಬಾಬಾ ತಮ್ಮ ಜೊತೆ ಇರಿಸಿಕೊಂಡ ದಿನ, ವಾಲ್ಟರ್ ತನ್ನ ಅನುಭವವನ್ನು ಹೇಳಬೇಕೆಂದು. ಆದೇಶಿಸಿದರು. ಮದರಾಸಿನಲ್ಲಿ 'ಸತ್ತ' ದಿನ ಬಾಬಾ ಅವರ ಜೊತೆಯಲ್ಲಿ ನ್ಯಾಯಮೂರ್ತಿಯ ಪೀಠದೆದುರಿಗೆ ಹೋಗಿ ನಿಂತುದನ್ನು ಎಲ್ಲರಿಗೂ ಹೇಳಬೇಕು ಎಂದರು. ವಾಲ್ಟರ್ ತನ್ನ ನಿರೂಪಣೆಯನ್ನು ಮುಗಿಸಿದಾಗ ಅಲ್ಲಿ ನೆರೆದಿದ್ದವರೆಲ್ಲ ಮೂಕ ವಿಸ್ಮಿತರಾಗಿದ್ದರು. ಇಂದ್ರಾದೇವಿ ಬಾಬಾ ಅವರ ಅಪಾರ ಕರುಣೆಯ ಬಗೆಗೆ ಮಾತನಾಡಿದರು. ಎಷ್ಟೋ ವರ್ಷಗಳ ಹಿಂದೆ ನನ್ನ ತಾಯಿಗೆ ತಾವು ಕೊಟ್ಟ ವರವನ್ನು ಬಾಬಾ ಹೇಗೆ ನೆರವೇರಿಸಿದರು ಎಂಬುದನ್ನು ವಿವರಿಸಿದರು. "ನೀನು ಈ ಜಗತ್ತನ್ನು ಬಿಟ್ಟು ಹೋಗುವಾಗ ನಾನು ನಿನಗೆ ಅಮೃತವನ್ನು ಕುಡಿಸುತ್ತೇನೆ" ಎಂದಿದ್ದರು. ಒಂದು ಮಧ್ಯಾಹ್ನ ಪ್ರಶಾಂತಿ ನಿಲಯದಲ್ಲಿ ಆಕೆ ತನ್ನ 'ಸ್ವರ್ಗದ ಮನೆಗೆ' ತೆರಳಿದರು. ಆಗ ಬಾಬಾ ವೈಟ್‌ಫೀಲ್ಡಿನಲ್ಲಿದ್ದರು. ಸಾಯುವುದಕ್ಕೆ ಕೆಲವು ನಿಮಿಷಗಳ ಮುಂಚೆ ಆಕೆಯ ಹಾಸಿಗೆ ಪಕ್ಕದಲ್ಲಿ ಇರಿಸಿದ್ದ ಶಿರ್ಡಿ ಸಾಯಿಬಾಬಾ ಅವರ ವಿಗ್ರಹದಿಂದ ಅಮೃತ ಉತ್ಪನ್ನವಾಯಿತು. ಎಡ ಮಂಡಿಯ ಮೇಲೆ ಇರಿಸಿದ ಬಲಗಾಲ ಹೆಬ್ಬೆರಳಿನಿಂದ ಧಾರೆಯಾಗಿ ಸುರಿಯತೊಡಗಿದ ಅಮೃತವನ್ನು ಆಕೆ ಗಮನಿಸಿದಳು. ತನ್ನ ಕೈಯನ್ನು ಬಟ್ಟಲಿನಂತೆ ಹಿಡಿದು ಅದನ್ನು ತುಂಬಿಕೊಂಡಳು. ಕಸ್ತೂರಿ ಅವರನ್ನು ಹಾಸಿಗೆಯಿಂದ ಸ್ವಲ್ಪ ಎಬ್ಬಿಸಿ ಹಿಡಿದು ಅವರು ಅದನ್ನು ಕುಡಿಯಲು ಸಹಾಯ ಮಾಡಿದರು. ಸುಮಾರು ಎರಡು ಔನ್ಸಿನಷ್ಟು ದಿವ್ಯ ಪರಿಮಳಭರಿತವಾದ ಸಿಹಿಯಾದ ಆ ಅಮೃತ ಪಾನ ಮಾಡಿ ಮತ್ತೆ ಮಲಗಿ ಸಾಯಿಯಲ್ಲಿ ಐಕ್ಯಳಾದರು." ಇಂದ್ರಾದೇವಿ ಹೇಳಿದುದನ್ನು ಪೂರ್ತಿ ಕೇಳಿದ ಬಾಬಾ ನುಡಿದರು: "ಹೌದು, ಯಾರು ಸ್ಥಿರವಾಗಿ ಶ್ರದ್ಧೆಯನ್ನುಳಿಸಿಕೊಂಡಿರುತ್ತಾರೋ ಅವರಿಗೆ ಕೊಟ್ಟ ಮಾತನ್ನು ನಾನು ಖಂಡಿತವಾಗಿ ಈಡೇರಿಸುತ್ತೇನೆ. ನನಗೆ ತಮ್ಮ ಜೀವಿತವನ್ನು ಅರ್ಪಿಸಿದ ವ್ಯಕ್ತಿಗೆ ಮರಣ ಸನ್ನಿಹಿತವಾದಾಗ ನಾನು ದರ್ಶನವನ್ನೂ ಕೊಡುತ್ತೇನೆ."

ಮರಣಶಯ್ಯೆಯ ದರ್ಶನಗಳ ಬಗೆಗೆ ಮಾತನಾಡುವಾಗ ನನ್ನ ಗುರು ಶ್ರೀ ರಾಮಕೃಷ್ಣಾಶ್ರಮದ ಮಹಾಪುರುಷಜೀ ಅವರು ಹೇಳಿದ ಒಂದು ಸಂದರ್ಭವನ್ನೂ ಉಲ್ಲೇಖಿಸಬೇಕು. ರಾಮಕೃಷ್ಣ ಪರಮಹಂಸರು 'ಶಾಂತಿಯ ಮಳೆ' ಗರೆದ ಸಂದರ್ಭ ಅದು. ರಸಿಕ ಎಂಬ ಹೆಸರಿನ ಒಬ್ಬ ಜಲಗಾರ ದಕ್ಷಿಣೇಶ್ವರದಲ್ಲಿದ್ದ. ಒಂದು ದಿನ ಗುರುಮಹಾರಾಜರು ಪಂಚವಟಿಯ ಕಡೆಯಿಂದ ಆಧ್ಯಾತ್ಮಿಕ ಮನಸ್ಥಿತಿಯಲ್ಲಿ ಬರುತ್ತಿರುವಾಗ ರಸಿಕನು ಅವರೆದುರು ಮಂಡಿಯೂರಿ ನಮಸ್ಕರಿಸಿದರು. "ತಂದೆ ನೀವೇಕೆ ನನಗೆ ಅನುಗ್ರಹ ಮಾಡುವುದಿಲ್ಲ? ನನಗೇನಾಗುತ್ತದೆ ಹೇಳಿ ತಂದೆ" ಎಂದನು. ಗುರು ಮಹಾರಾಜರು ಅವನಿಗೆ ಆಶ್ವಾಸನೆಯಿತ್ತರು: "ನಿನ್ನ ಆಸೆ ಈಡೇರುತ್ತದೆ. ಮರಣ ಸಮಯದಲ್ಲಿ ನನ್ನನ್ನು ನೀನು ನೋಡುವೆ." ಕೆಲವು ವರ್ಷಗಳ ನಂತರ ರಸಿಕನಿಗೆ ಸಾವು ಸನ್ನಿಹಿತವಾದಾಗ ಅವನು ಆನಂದದಿಂದ ಕೂಗಿದನು: "ನೀವು ಬಂದಿರಿ, ತಂದೆ! ನೀವು ನಿಜವಾಗಿ ಬಂದಿರಿ." ಹಾಗೆ ಹೇಳುತ್ತಲೇ ಅವನು ಕೊನೆಯುಸಿರೆಳೆದನು.

ಸಾಯಿಭಕ್ತರು ಮರಣೋನ್ಮುಖರಾಗಿರುವಾಗ ಅಥವಾ ತಮ್ಮ ಪ್ರೀತಿ ಪಾತ್ರರು ಆಗಲಿ ಹೋಗುತ್ತಿರುವುದನ್ನು ಸಹಿಸಿಕೊಳ್ಳುತ್ತಿರುವಾಗ ನಮಗೆ ಅವರು ಸಂವೇದನಾ ರಹಿತವಾಗಿದ್ದಾರೆಯೇ ಎಂದು ಅನ್ನಿಸುವುದು ಸಹಜ. ಇಲ್ಲ. ಅವರು ಸಾವವನ್ನು ಧೀರರಂತೆ ಎದುರಿಸುತ್ತಾರೆ. ಏಕೆಂದರೆ ಬಾಬಾ ತಮ್ಮ ಗುರು, ರಕ್ಷಕ, ಗೆಳೆಯ ಆಗಿರುತ್ತಾರೆ ಎಂದು ಅವರಿಗೆ ಖಚಿತವಾಗಿ ಗೊತ್ತು. ತಾವು ಎಷ್ಟೇ ಜನ್ಮಗಳನ್ನು ಮರಳಿ ಮರಳಿ ಅವರು ಸದಾಕಾಲವೂ ನಮ್ಮೊಂದಿಗೆ, ನಮ್ಮಲ್ಲಿ ನಮ್ಮ ಪಕ್ಕದಲ್ಲಿ, ನಮ್ಮ ಮುಂದೆ, ನಮ್ಮ ಹಿಂದೆ ಇದ್ದೇ ಇರುತ್ತಾರೆ. ಆದ್ದರಿಂದ ಸಾವಿನ ಸಮಯದಲ್ಲಿ ಕಳವಳಿಸುವ ಬದಲಾಗಿ ಈ ಕೊನೆಯ ಪಾತ್ರಾಭಿನಯವನ್ನು ಸಂತೋಷವಾಗಿ ಅಭಿನಯಿಸುತ್ತಾರೆ. ಪ್ರೀತಿಯ ತಂದೆ ತಾಯಿ ಕೈ ಹಿಡಿದುಕೊಂಡು ಮಕ್ಕಳನ್ನು ಶಾಲೆಗೆ ಕರೆದುಕೊಂಡು ಹೋಗುತ್ತಿರುವ ಹಾಗೆ, ಪದವೀಧರರು ಘಟಿಕೋತ್ಸವದಲ್ಲಿ ಭಾಗವಹಿಸುತ್ತಿರುವ ಹಾಗೆ, ಪರ್ವತಾರೋಹಿಯು ಶಿಖರವನ್ನು ಸಮೀಪಿಸುತ್ತಿರುವ ಹಾಗೆ ಅಥವಾ ನದಿಗಳು ಸಾಗರದಲ್ಲಿ ಲೀನವಾಗುತ್ತಿರುವ ಹಾಗೆ.

ಪ್ರಶಾಂತಿನಿಲಯದ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ವೈದ್ಯರೊಬ್ಬರಿದ್ದರು. ಅವರಿಗೆ ಸುಮಾರು 60 ವರ್ಷ. ಹೃದಯಕ್ಕೆ ಸ್ವಲ್ಪ ಹಾನಿಯಾಗಿದ್ದರೂ ಒಳ್ಳೆಯ ಆರೋಗ್ಯಶಾಲಿಯಾಗಿದ್ದರು. ಒಂದು ಸಂಜೆ ಬಾಬಾ ಅವರಿಗೆ ಹೇಳಿ ಕಳಿಸಿದರು. ಊಟ ಮಾಡುತ್ತಿದ್ದುದನ್ನೂ ಅಲ್ಲೇ ಬಿಟ್ಟು 'ಭಗವಾನರು ನನ್ನನ್ನು ಕರೆಯುತ್ತಿದ್ದಾರೆ' ಎಂದು ಹೇಳುತ್ತಾ ಮಂದಿರದ ಕಡೆಗೆ ಧಾವಿಸಿದರು. ಮಂದಿರವನ್ನು ಸಮೀಪಿಸುತ್ತಿದ್ದಂತೆಯೇ ತಲೆ ತಿರುಗಿ ಕೆಳಗೆ ಕುಸಿದರು, ಮತ್ತೆ ಚೇತರಿಸಿಕೊಳ್ಳಲಿಲ್ಲ. ಸಾವು ಅತ್ಯಂತ ಅನಿರೀಕ್ಷಿತವಾಗಿ, ಯಾತನಾರಹಿತವಾಗಿ ಅವರಿಗೆ ದೊರಕಿತು. ಬಾಬಾ ಅವರು ಆತ್ಮದ ಬಗೆಗೆ, ಪರಮಾತ್ಮನಲ್ಲಿ ಲೀನವಾಗುವ ಬಗೆಗೆ ಕರ್ಮದ ವಿಚಾರವಾಗಿ ಉಪದೇಶ ಮಾಡುವುದನ್ನು ಕೇಳಿ, ಅರಗಿಸಿ ಕೊಂಡಿದ್ದ ಆತನ ಪತ್ನಿ ಈ ಪೆಟ್ಟನ್ನು ಧೈರ್ಯವಾಗಿ, ವಿವೇಕದಿಂದ ಸ್ವೀಕರಿಸಿದಳು. ಆಕೆಗೆ ಸಮಾಧಾನ ಮಾಡಲೆಂದು ಬಂದ ಮಹಿಳೆಯರಿಗೆ ಆಕೆ ಹೇಳಿದಳು: "ನಾನು ಕಠಿಣ ಹೃದಯದವಳು, ಅಳುತ್ತಿಲ್ಲ ಎಂದು ನೀವು ಭಾವಿಸಬಹುದು. ಇಲ್ಲ, ನಾನೇಕೆ ಅಳುತ್ತಿಲ್ಲ ಗೊತ್ತೆ? ಅದು ವ್ಯರ್ಥ ಮತ್ತು ಅವಿವೇಕ ಎಂದು ಬಲ್ಲೆನಾದ್ದರಿಂದ." ದೆಹಲಿಯಿಂದ ಶ್ರೀ ಸೇತು ಬರೆಯುತ್ತಾರೆ, "ಬಾಬಾ ಏನು ಮಾಡಿದರೂ ಅದು ನಮ್ಮ ಒಳಿತಿಗಾಗಿಯೇ. ಆ ಕ್ಷಣಕ್ಕೆ ಅದು ನಿಮಗೆ ಹಾಗೆಂದು ತೋರದಿರಬಹುದು ಅಷ್ಟೆ."

# ಸಮೀಪಕ್ಕೆ ಅತಿ ಸಮೀಪಕ್ಕೆ

## ಸಂದರ್ಶನ

ಪ್ರಶಾಂತಿ ನಿಲಯದ ಮಂದಿರದ ನೆಲ ಅಂತಸ್ತಿನಲ್ಲಿ ಉದ್ದನೆಯ ವೆರಾಂಡಾದ ಪಶ್ಚಿಮದ ತುದಿಗೆ ಒಂದು ಕೊಠಡಿಯಿದೆ. ಮಹಡಿ ಮೆಟ್ಟಲಿಗೆ ಹೋಗಬೇಕಾದರೆ ಆ ಕೊಠಡಿಯ ಮೂಲಕವೇ ಹೋಗಬೇಕು. ಅದನ್ನು ಸಂದರ್ಶನ ಕೊಠಡಿ ಎಂದು ಕರೆಯುತ್ತಾರೆ. ಖಾಸಗಿಯಾಗಿ ಸಂಭಾಷಣೆ ನಡೆಸುವ ಅವರ ನಿರ್ದೇಶನ ಪಡೆಯುವ ಅವಕಾಶವನ್ನು ಬಾಬಾ ಅವರಿಂದ ಪಡೆದು ಅನುಗ್ರಹಿಸಲ್ಪಟ್ಟ ವ್ಯಕ್ತಿಗಳು ಈ ಕೊಠಡಿಯ ಮುಂದೆ ಕುಳಿತು ಒಳಗೆ ಹೋಗಲು ಅವರ ಅನುಮತಿಗಾಗಿ ಕಾಯುತ್ತಾರೆ.

ಅವತಾರ ಘೋಷಣೆಯ ದಿನ (23ಮೇ, 1940) ಸತ್ಯನಾರಾಯಣನು ತಾನು ಸಾಯಿಬಾಬಾ ಎಂದು ಘೋಷಿಸಿಕೊಂಡನಷ್ಟೆ. ಅಂದಿನಿಂದಲೂ ಭಕ್ತರು, ಆರ್ತರು ಎಲ್ಲಾ ಮೂಲೆಗಳಿಂದ ಪುಟ್ಟಪರ್ತಿಗೆ ಅವರ ದರ್ಶನ ಮಾಡಲು, ಭಜನೆಗಳಲ್ಲಿ ಭಾಗವಹಿಸಲು, ಸಲಹೆ ಸೂಚನೆಗಳನ್ನು ಸಾಂತ್ವನ, ಸಮಾಧಾನ, ಆತ್ಮವಿಶ್ವಾಸ ಮತ್ತು ಸ್ಥೈರ್ಯಗಳನ್ನು ಅವರಿಂದ ಪಡೆಯಲು ಹೊಳೆಯಂತೆ ಹರಿದು ಬರುತ್ತಿದ್ದಾರೆ. 1950 ನವೆಂಬರ್ 23·ನೆಯ ತಾರೀಕು ಭಗವಾನರ ಇಪ್ಪತ್ತೈದನೆಯ ಹುಟ್ಟಿದ ಹಬ್ಬದಂದು ಪ್ರಶಾಂತಿ ಮಂದಿರವನ್ನು ಉದ್ಘಾಟಿಸಲಾಯಿತು.

ಅದಕ್ಕಿಂತ ಮೊದಲು ಸ್ವಾಮಿ ಕೆಲವು ಭಕ್ತರೊಂದಿಗೆ ಗ್ರಾಮದೊಳಗೆ ವಾಸ ಮಾಡುತ್ತಿದ್ದರು. ಗ್ರಾಮದ ಪೂರ್ವದ ಕೊನೆಯಲ್ಲಿ, ಅವರ 'ಸಾಕು ತಾಯಿ' ಸುಬ್ಬಮ್ಮ ಉಡುಗೊರೆಯಾಗಿ ಕೊಟ್ಟ ಸಣ್ಣ ನಿವೇಶನದಲ್ಲಿ ಕಟ್ಟಿದ ಒಂದು ಮಂದಿರದಲ್ಲಿ ವಾಸಿಸಿದರು. ಭಕ್ತರ ಸಂಖ್ಯೆ ಬೆಳೆಯುತ್ತಾ ಹೋದಾಗ ಕಲ್ನಾರು ಶೀಟು ಹೊದೆಸಿದ ಉದ್ದನೆಯ ವಿಸ್ತರಣವೊಂದನ್ನು ಅದಕ್ಕೆ ಜೋಡಿಸಲಾಯಿತು. ಬಾಬಾ ಅವರ ಉಪಯೋಗಕ್ಕೆಂದು ಒಂದು ಮಲಗುವ ಕೋಣೆ, ಒಂದು ಸ್ನಾನ ಗೃಹಗಳಿದ್ದ ಬೇರೆ ಒಂದು ಕಟ್ಟಡವನ್ನೂ ನಿರ್ಮಿಸಲಾಯಿತು.

ಆಗಿನ್ನೂ ಹದಿವಯಸ್ಸಿನಲ್ಲಿದ್ದ ಬಾಬಾ, ಬಂದ ಯಾತ್ರಿಗಳೊಂದಿಗೆ ಬೆರೆಯುತ್ತಿದ್ದರು. ಅಡಿಗೆ ಮನೆಯಲ್ಲೋ, ಅವರು ಕೆಲಸ ಮಾಡುತ್ತಿದ್ದ ಬೇರೆ ಸ್ಥಳದಲ್ಲೋ ಓಡಾಡುತ್ತಿದ್ದರು. ಅವರ ಅಮೂಲ್ಯ ಕೃಪೆಯನ್ನು ಪಡೆಯಲೆಂದೇ ಕಾತರ ತುಂಬಿದ ಜನರು, ಅಥವಾ ಅವರು ನೀಡುವ ಪೂರ್ವ ಸೂಚನೆಗಳನ್ನೋ ಆಧ್ಯಾತ್ಮಿಕ ಸಾಧನಾ ಪಥದಲ್ಲಿ ನಿರ್ದೇಶನವನ್ನೋ ಪಡೆಯಬಯಸುತ್ತಿದ್ದವರು ಅವರು ಎಲ್ಲೆಲ್ಲಿ ಹೋದರೆ ಅಲ್ಲಿಲ್ಲಿಗೆ ಹಿಂಬಾಲಿಸುತ್ತಿದ್ದರು. ಕೊನೆಗೆ ಎಲ್ಲೋ ಒಂದು ಕಡೆ ನೆಲದ ಮೇಲಿಟ್ಟ ಹಾಸಿಗೆ ಸುರುಳಿಯ ಮೇಲೆ ಸ್ವಾಮಿ ಕುಳಿತುಕೊಳ್ಳುವರು, ಎಲ್ಲರೂ ಅವರ ಪದತಲದಲ್ಲಿ ಅರ್ಧ ವೃತ್ತಾಕಾರವಾಗಿ ಕುಳಿತುಕೊಳ್ಳುವರು. ಕೋರಿಕೆಗಳನ್ನು, ಅಹವಾಲುಗಳನ್ನು, ಸಮಸ್ಯೆಗಳನ್ನು ರಾಶಿ ಹಾಕುವರು. ಅನೇಕ ಸಂಜೆಗಳಲ್ಲಿ ಬಾಬಾ ಚಿತ್ರಾವತಿಯ ಮರಳದಂಡೆಗೆ ಎಲ್ಲರನ್ನೂ ಕರೆದೊಯ್ಯುತ್ತಿದ್ದರು. ಭಜನೆಗಳನ್ನು ಹಾಡುತ್ತಿರುವಾಗ ಖಾಸಗಿಯಾಗಿ ಸಂದರ್ಶನ ನೀಡಲು ಕೆಲವರನ್ನು ಸ್ವಲ್ಪದೂರ ಮಬ್ಬುಗತ್ತಲಿಗೆ ಒಯ್ಯುತ್ತಿದ್ದರು.

ಪೂಜಾ ವೇದಿಕೆ ಉದ್ದನೆಯ ಶೆಡ್‌ನ ಪಶ್ಚಿಮದ ತುದಿಯಲ್ಲಿ ಸ್ವಲ್ಪ ಎತ್ತರದಲ್ಲಿತ್ತು. ಅದರ ಮುಂದೆ ಕುಳಿತು ಎಲ್ಲರೂ ಭಜನೆಗಳನ್ನು ಹಾಡುತ್ತಿದ್ದರು. ಭಜನೆ ಮುಗಿದ ಮೇಲೆ ಅದನ್ನು 'ಮುಚ್ಚು'ತ್ತಿದ್ದರು. ದಪ್ಪನೆಯ ನೀಲಿ ಬಣ್ಣದ ಪರದೆಯೊಂದನ್ನು ದಕ್ಷಿಣೋತ್ತರವಾಗಿ ಅಡ್ಡವಾಗಿ ಎಳೆಯುತ್ತಿದ್ದರು. ಯಾತ್ರಿಗಳು ಊರಿಗೆ ಹೊರಡುವ ಸಮಯ ಬಂದಾಗ ಬೆಳಗ್ಗೆ ಮತ್ತು ಸಂಜೆ ಹೊತ್ತು ಆ ನೀಲಿ ತೆರೆಯ ಆಚಿನ ಪಾರ್ಶ್ವದಲ್ಲಿ ಸಂದರ್ಶನ ಪಡೆಯುತ್ತಿದ್ದರು. ಆಗಲೂ ಬಾಬಾ ಅವರ ಇಡೀ ದಿನವು ತಮ್ಮ ಸನ್ನಿಧಿಗೆ ತಮ್ಮ ಸಂಕಲ್ಪವು ಸೆಳೆದ ವ್ಯಕ್ತಿಗಳನ್ನು ದುರಸ್ತಿ ಪಡಿಸುವುದರಲ್ಲಿ, ಪುನರ್ನಿರ್ಮಿಸುವುದರಲ್ಲಿ, ಸುಧಾರಿಸುವುದರಲ್ಲಿ ಕಳೆಯುತ್ತಿತ್ತು. ಅಂತಹ ಸಂದರ್ಶನಗಳಲ್ಲಿ ದೈಹಿಕ ಅಸಾಮಾನ್ಯತೆಗಳನ್ನೂ ಉಪಸಾಮಾನ್ಯತೆಗಳನ್ನೂ ದಿವ್ಯ ಹಸ್ತದ ಶಸ್ತ್ರ ಚಿಕಿತ್ಸೆಯಿಂದ ಗುಣಪಡಿಸಿಬಿಡಲಾಗುತ್ತಿತ್ತು.

## ಪಾದ - ಪೂಜೆ

ಹಳೆಯ ಮಂದಿರದ ದಿನಗಳಲ್ಲಿ (ಮತ್ತು ಬಾಬಾ ಹೊಸ ಮಂದಿರಕ್ಕೆ ಬಂದ ಸುಮಾರು ಐದು ವರ್ಷಗಳ ಕಾಲ, ಸಾಕಷ್ಟು ಸಮಯ ಸನ್ನಿಧಿಯಿಂದ ಅಗಲಿ ದೂರ ಹೋಗಬೇಕಾಗಿ ಬಂದ ವ್ಯಕ್ತಿಗಳಿಗೆ ಅಥವಾ ಕುಟುಂಬಗಳಿಗೆ ಸ್ವಾಮಿಯ 'ಪಾದ ಪೂಜೆ' ಮಾಡುವ ಅವಕಾಶ ಲಭ್ಯವಾಗುತ್ತಿತ್ತು. ಪಾದಗಳನ್ನು ಪೂಜಿಸುವುದೇ ಪಾದ ಪೂಜೆ. ವರಾಂಡಾದ ಪೂರ್ವದ ಕೊಠಡಿಯಲ್ಲಿ ಬಾಬಾ ಒಂದು ಬೆಳ್ಳಿಯ ಕುರ್ಚಿಯ ಮೇಲೆ ಕುಳಿತುಕೊಳ್ಳುವರು. ಒಂದು ತಟ್ಟೆಯೊಳಗೆ ತಮ್ಮ ಎರಡೂ ಪಾದಗಳನ್ನು ಇಡುವರು. ವೇದ ಮಂತ್ರಗಳನ್ನು ಪಠಿಸುತ್ತಿರಲು ಭಕ್ತರ ಪಾದಗಳ ಮೇಲೆ ನೀರನ್ನು ಅಭಿಷೇಕ ಮಾಡುವರು. ತಮ್ಮ ಇಷ್ಟ ದೈವದ ಅಷ್ಟೋತ್ತರನಾಮವನ್ನು ಪಠಿಸುತ್ತಾ ಸ್ವಾಮಿಯ ಪಾದಗಳಿಗೆ ಹೂವುಗಳಿಂದ ಪೂಜೆ ಮಾಡುವರು. ಆಮೇಲೆ ಸುವಾಸನೆಯ ಅಗರಬತ್ತಿಗಳನ್ನೂ ಕರ್ಪೂರವನ್ನೂ ಆರತಿ ಮಾಡುವರು. ಹಣ್ಣುಗಳನ್ನೋ ಸಿಹಿ ತಿನಿಸನ್ನೋ ನೈವೇದ್ಯವಾಗಿ ಅರ್ಪಿಸುವರು. ಅದರ ಒಂದು ಚೂರನ್ನು ಸೇವಿಸಿ ಸ್ವಾಮಿ ಭಕ್ತರಿಗೆ ಅಪಾರ ತೃಪ್ತಿ, ಆನಂದ ನೀಡುತ್ತಿದ್ದರು, ಅವರನ್ನು ಅನುಗ್ರಹಿಸುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಒಬ್ಬ ಬಾಲಕನಿಗೆ ಗಾಯತ್ರೀ ಮಂತ್ರ ದೀಕ್ಷೆ, ಅಥವಾ ಒಂದು ಮಗುವಿಗೆ ಅಕ್ಷರಾಭ್ಯಾಸ ಅಥವಾ ಶಿಶುವಿಗೆ ನಾಮಕರಣ, ಅಥವಾ ಮದುವೆಯಾಗಲಿರುವ ಮಧುವರರಿಗೆ ಆಶೀರ್ವಾದ ಮಾಡುತ್ತಿದ್ದರು ಬಾಬಾ. ಕೆಲವೊಮ್ಮೆ ಒಂದು ದಿನದಲ್ಲಿ ಅಂತಹ ಮೂರು- ನಾಲ್ಕು ಪೂಜೆಗಳು ನಡೆಯುತ್ತಿದ್ದುಂಟು, ಬಾಬಾ ಅವರ ಕರುಣೆಗೆ ತಕ್ಕಂತೆ. ಪೂಜೆ ಮುಗಿದ ಮೇಲೆ ಭಕ್ತರು ತಮ್ಮನ್ನು ಕಾಡುತ್ತಿದ್ದ ಪ್ರಶ್ನೆಗಳಿಗೆ ಉತ್ತರ ಪಡೆಯಲು, ತಮಗೆ ದಿಗ್ಭ್ರಮೆಯುಂಟುಮಾಡುತ್ತಿದ್ದ ಒಗಟುಗಳನ್ನು ಬಿಡಿಸಿಕೊಳ್ಳಲು ಕಾಯುತ್ತಿದ್ದರು. ದಿನಗಳು ಕರಗಿ ವಾರಗಳಾಗುತ್ತಿದ್ದವು. ವಾರಗಳು ತಿಂಗಳುಗಳಾಗುತ್ತಿದ್ದುವು. ಆದರೆ ಕಾಯುತ್ತಿದ್ದ ಜನರು ಕಾಯುತ್ತಲೇ ತುಂಬ ನಿರೀಕ್ಷೆಯಿಂದ ಇರುತ್ತಿದ್ದರು. ಪ್ರತಿದಿನವೂ 'ಆ ದಿನ'ವಾಗುತ್ತಿತ್ತು, ಪ್ರತಿ ಕ್ಷಣವೂ 'ಆ ಕ್ಷಣ' ವಾಗುತ್ತಿತ್ತು. ಅವರೊಂದಿಗೆ ಸಂಭಾಷಿಸಲು 'ಪರಿವರ್ತನಾ' ಚಿಕಿತ್ಸೆ ಪಡೆಯಲು ನಿರ್ದಿಷ್ಟ ದಿನ ಎಂದಾಗಲಿ ನಿರ್ದಿಷ್ಟ ಸಮಯವಾಗಲಿ ಇರಲಿಲ್ಲ. ಆದರೆ ಈ ಸುವರ್ಣಾವಕಾಶ ಪಡೆಯುವ ಮೊದಲೇ ಸನ್ನಿಧಿಯನ್ನು ಅಗಲಿ ಹೋಗುವ ಸಂದರ್ಭ ಬಂದರೆ ಮುಂದೆ ಇನ್ನೊಮ್ಮೆ ತನ್ನ ಅದೃಷ್ಟ ಉತ್ತಮವಾಗಬಹುದು ಎಂಬ ನಿರೀಕ್ಷೆಯಿಂದ ದುಃಖದಿಂದ ಅಗಲುತ್ತಿದ್ದರು.

ಪ್ರಶಾಂತಿ ನಿಲಯವು ಎಷ್ಟೆ ಭವ್ಯವಾಗಿದ್ದರೂ, ದೊಡ್ಡದಾಗಿದ್ದರೂ 1974ರ ವರೆಗೂ ಅವತಾರ ಪುರುಷನೊಂದಿಗೆ ಖಾಸಗಿಯಾಗಿ ಮಾತನಾಡಲು ಒಂದು ಪ್ರತ್ಯೇಕ ಕೊಠಡಿ ಅಲ್ಲಿರಲಿಲ್ಲ. ಕಾತರತೆ ತುಂಬಿ ಕುಳಿತ ಭಕ್ತರ ಸಾಲುಗಳಿಂದ ಭಗವಾನರು ಆರಿಸಿದ ವ್ಯಕ್ತಿಗಳನ್ನು ವರಾಂಡಾದ ಪೂರ್ವದ ಕೊನೆಯ ಕೊಠಡಿಗೆ ಕರೆಯಲಾಗುತ್ತಿತ್ತು. ಒಂದು ಸಾರಿಗೆ ಹದಿನೈದು ಅಥವಾ ಇಪ್ಪತ್ತು ಜನ. ಮೊದಲು ಬಾಬಾ ಎಲ್ಲರನ್ನೂ ಉದ್ದೇಶಿಸಿ ಸಾಧನೆಯ ವಿವಿಧ ಅಂಶಗಳನ್ನು ಕುರಿತು ಮಾತನಾಡಿ ಅವರಿಗೆ ಸ್ಫೂರ್ತಿ, ಉತ್ಸಾಹ, ಮಾತನಾಡಿಸಿ ತಮ್ಮ ಸಂದೇಶ ನೀಡಿ ಅವರಲ್ಲಿ ಒಬ್ಬೊಬ್ಬರನ್ನೂ ವೈಯಕ್ತಿಕವಾಗಿ ಮಾತನಾಡಿಸಿ ತಮ್ಮ ಸಂದೇಶ ನೀಡಿ ಅವರಲ್ಲಿ ಸಮಾಧಾನ, ಸ್ಥೈರ್ಯಗಳನ್ನು ತುಂಬುತ್ತಿದ್ದರು. ಅವರ ವ್ಯಾಧಿ ಎಂಥದೆಂಬುದನ್ನು ಪತ್ತೆ ಹಚ್ಚಿ ಮಿದುವಾದ ಹಿತವಾದ ಪ್ರೇಮಪೂರಿತ ವಾತಾವರಣದಲ್ಲಿ ರೋಗಕ್ಕೆ ತಕ್ಕ ಚಿಕಿತ್ಸೆಯನ್ನು ವಿಧಿಸುತ್ತಿದ್ದರು.

ಸಂದರ್ಶನದ ಸಮಯದಲ್ಲಿ ನಡೆದ ಘಟನೆಗಳು ಕೇವಲ ನೆನಪಿನ ಮುದ್ರಿಕೆಗಳಲ್ಲಿ ದಾಖಲಾಗಿರುತ್ತವೆ. ವೈಯಕ್ತಿಕವಾದ ವೈಫಲ್ಯಗಳನ್ನೂ ಒಳಗೆ ಬೆಸೆದುಕೊಂಡ ಸಂಕಟಗಳನ್ನೂ ಬಾಬಾ ಹೊರಗೆಳೆಯುತ್ತಾರೆ. ತಪ್ಪನ್ನು ತಿದ್ದುವುದು, ಅಭ್ಯಾಸಗಳನ್ನು ನಿರ್ಮಲಗೊಳಿಸುವುದು, ಭಾವೋದ್ವೇಗಗಳನ್ನು ಸೋಸುವುದು, ರಾಗಗಳಿಗೆ ಹೊಗೆ ಹಾಕುವುದು, ಸದ್ಗುಣಗಳನ್ನು ಪೋಷಿಸುವುದು - ಈ ಕೆಲಸದಲ್ಲಿ ಅವರು ಸದಾ ತೊಡಗಿರುತ್ತಾರೆ. ಇದು ಪ್ರಚಾರವನ್ನು ಒಲ್ಲದ ಪ್ರಕ್ರಿಯೆ.

## ಮೊದಲನೆಯ ಸಂದರ್ಶನ

ಡಾ. ಜಾನ್ ಹಿಸ್ಲಾಪ್ ಬರೆಯುತ್ತಾರೆ: "ಭಗವಾನರೊಂದಿಗೆ ಮೊತ್ತ ಮೊದಲನೆಯ ಸಂದರ್ಶನ ಪಡೆದಾಗ ಪ್ರಸ್ತುತ ಲೇಖಕನು ತನ್ನ ಪತ್ನಿಯೊಂದಿಗೆ ಮತ್ತು ಇತರ ಕೆಲವರೊಂದಿಗೆ ಒಂದು ಸಣ್ಣ ಕೊಠಡಿಯಲ್ಲಿ ಕುಳಿತಿದ್ದನು. ಆ ಇತರರೂ ಸಂದರ್ಶನ ತಂಡಕ್ಕೇ ಸೇರಿದವರೇ. ಎಲ್ಲರ ಗಮನವೂ ತೆಳ್ಳನೆಯ ಗಂಭೀರವಾದ, ಮನೋಹರವಾದ ಸ್ವಾಮಿಯ ರೂಪದ ಮೇಲೆಯೇ. ಅವರ ಆಳವಾದ ಥಳಥಳಿಸುವ ಕಣ್ಣುಗಳು, ಮಧುರವಾದ ಆತ್ಮೀಯ ಮುಗುಳುನಗೆ, ಮತ್ತು ಲಲಿತ ಸೌಂದರ್ಯದ ಕಡೆಗೆಯೇ. ಸದಾ ವಿಮರ್ಶಿಸುವ, ಪ್ರಶ್ನಿಸುವ ಮನಸ್ಸು ದಿವ್ಯ ಸನ್ನಿಧಿಯಲ್ಲಿ ತಟಸ್ಥವಾಗಿತ್ತು. ಈ ಜಗತ್ತನ್ನಾಗಲಿ, ಅದರ ಸಮಸ್ಯೆಗಳನ್ನಾಗಲಿ ಪ್ರಜ್ಞೆ ಮರೆತುಬಿಟ್ಟಿತ್ತು. ಅವುಗಳ ಬಗೆಗೆ ಕಾತರವು ಮಸುಳಿಸಿತ್ತು. ಸಂತೋಷವೊಂದೇ ಆಗ ಇದ್ದ ಅನುಭವ. ಬಾಬಾ ಮಾತನಾಡುತ್ತಿದ್ದರೂ ಸುತ್ತ ನಿಶ್ಶಬ್ದತೆ. ಆ ಶಾಂತ ಸ್ಥಿತಿಯಲ್ಲಿ ಶ್ರಮವೇ ಇಲ್ಲದೆ ಅರಿವು ಆಳವಾಗುತ್ತಿತ್ತು. ತಿಳುವಳಿಕೆಗೆ ಸಿಕ್ಕದ ಏನೋ ಒಂದು ಜೀವಂತವಾಗಿ ಹೃದಯದಲ್ಲಿದೆ ಅನ್ನಿಸುತ್ತಿತ್ತು. ಒಂದು ಕ್ಷಣದಲ್ಲಿ ಈ ಲೇಖಕನ ಶುಷ್ಕ ಪಾಶ್ಚಾತ್ಯ ಹೃದಯದಲ್ಲಿ ಪ್ರೇಮವಾಹಿನಿ ಹರಿಯತೊಡಗಿತ್ತು. ಆ ಪ್ರೇಮದ ಮೂಲ ಭಗವಾನರೇ ಎನ್ನುವುದು ಸ್ಪಷ್ಟವಾಗಿ ತಿಳಿಯಿತು, ಅಲ್ಲ, ಭಗವಾನರ ದಿವ್ಯ ಮಾಧುರ್ಯವೇ ಮೂರ್ತಿವೆತ್ತು ಹೃದಯದಲ್ಲಿ ಪ್ರತಿಷ್ಠಿಸಿಕೊಂಡಿತ್ತು. "ಮೊದಲು ಎಂದೂ ನೋಡಿರದಿದ್ದ ಅಪರಿಚಿತ ವ್ಯಕ್ತಿ ಶ್ರೀ ಸತ್ಯಸಾಯಿಬಾಬಾ ಒಬ್ಬ ಬೆಳೆದ ಮನಸ್ಸಿನ ವ್ಯಕ್ತಿಯ ಹೃದಯ ಪ್ರವೇಶ ಮಾಡಿ ಅಲ್ಲಿ ಒಳಗಿನಿಂದಲೇ ಒಂದು ಮಹತ್ ಪರಿವರ್ತನೆಯನ್ನು ಮಾಡಲು, ಇನ್ನು ಹಿಂದಿರುಗಿ ನೋಡದಂತಹ ಪರಿವರ್ತನೆಯನ್ನು ಮಾಡಲು ಹೇಗೆ ಸಾಧ್ಯ?

ನಿಜವಾಗಿ ಭಗವಂತನೆಂಬ ಅಪರಿಚಿತನಿಗೆ ಮಾತ್ರ ಇದು ಸಾಧ್ಯ. ಹಿಸ್ಲಾಪ್ ಬರೆಯುತ್ತಾರೆ: "ಸ್ಮರಣೀಯವಾದ ಆ ದಿನ ನಾನು ಸತ್ಯಸಾಯಿಬಾಬಾ ಅವರ ಸನ್ನಿಧಿಗೆ ಮೊದಲನೆಯ ಬಾರಿಗೆ ಬಂದೆ. ಅಂದು ನಾನು ನಲವತ್ತೇಳು ವರ್ಷಗಳ ಹುಡುಕಾಟದ ಗುರಿಯನ್ನು, ತುದಿಯನ್ನು ತಲುಪಿದೆ. ಸತ್ಯವನ್ನು ನೇರವಾಗಿ, ನನಗೆ ನಾನೆ ಅದು ಸತ್ಯವೆಂದು ಕಾಣುವ ಹಾಗೆ ಹೇಳುವ ವ್ಯಕ್ತಿಯನ್ನು ಅಂದು ಕಂಡೆ. ಎಂದಿಗೂ ನಾನು ಆ ದಿನವನ್ನು ಮರೆಯಲಾರೆ."

ಹಿಸ್ಲಾಪ್ ಮತ್ತು ಅವರ ಪತ್ನಿ ಡಾ. ಅನಿ ಬೆಸೆಂಟ್ ಹಾಗೂ ಜೆ. ಕೃಷ್ಣಮೂರ್ತಿ ಅವರಿಂದ ಥಿಯಾಸೊಫಿಯ ಪ್ರವೇಶ ಪಡೆದರು. ಥ್ರೇಸಿತು ಉ ಬಾ ಖಿನ್ ಮತ್ತು ಮಹೇಶಯೋಗಿ - ಜ್ಞಾನದ ಮಾರ್ಗದಲ್ಲಿ ಶ್ರಮಿಸಿದ ಅತಿ ಶ್ರೇಷ್ಠ ಗುರುಗಳನ್ನು ಕಂಡರು. "ಆದರೆ 19678ರಲ್ಲಿ ಸದಾಸ್ಮರಣೀಯವಾದ ಆ ದಿನದಂದು ಬಾಬಾ ಅವರ ಸಮ್ಮುಖಕ್ಕೆ ಬಂದಾಗ ನಾನೊಬ್ಬ ಭಕ್ತ ಎಂಬ ಆಶ್ಚರ್ಯಕರವಾದ ಸಂದೇಹಾತೀತವಾದ ಸಂಶೋಧನೆ ಮಾಡಿದೆ. ನನಗೆ ನಾನೇ ಎಂದೂ ಆ ಪ್ರವೃತ್ತಿಯನ್ನು ತೋರಿಸಿಕೊಂಡಿರಲಿಲ್ಲ. ನನಗೆ ನಿಜವಾಗಿ ಆಶ್ಚರ್ಯವಾಯಿತು." "ಭಗವಂತನು ಮನುಷ್ಯರ ನಡುವೆ ವ್ಯವಹರಿಸಬೇಕಾದರೆ ಮನುಷ್ಯ ರೂಪದಲ್ಲೇ ಬರಬೇಕು ಎನ್ನುತ್ತಾರೆ ಬಾಬಾ. "ಆಗಲೀಗ ಅವನ ಮಾತನ್ನು ಜನ ಕೇಳುತ್ತಾರೆ, ಸಂಪರ್ಕಿಸುತ್ತಾರೆ, ಪ್ರೇಮಿಸುತ್ತಾರೆ, ಗೌರವಿಸುತ್ತಾರೆ, ವಿಧೇಯರಾಗಿರುತ್ತಾರೆ. ಅವನು ಜನರ ಭಾಷೆಯನ್ನು ಮಾತನಾಡಬೇಕು, ಸಾಮಾನ್ಯ ಮಾನವರಂತೆಯೇ ಅವನ ನಡವಳಿಕೆಯೂ ಇರಬೇಕು. ಇಲ್ಲದೆ ಹೋದರೆ ಜನರು ಅವನನ್ನು ಅಲಕ್ಷಿಸುತ್ತಾರೆ, ನಿರಾಕರಿಸುತ್ತಾರೆ ಇಲ್ಲವೆ ಭೀತರಾಗುತ್ತರಾರೆ, ನಿವಾರಿಸುತ್ತಾರೆ." ಹಾಗಾಗಿ ಭಗವಾನರು ಹಿಸ್ಲಾಪರಿಗೆ ಹಿಸ್ಲಾಪರ ದರ್ಶನ ಮಾಡಿಸಿದರು. ತಮ್ಮನ್ನೇ ಗುರಿಯಾಗುಳ್ಳ ಆತ್ಮಾನುಸಂದಾನದ ಪಥಕ್ಕೆ ಅವರನ್ನು ಹಚ್ಚಿದರು.

## ಸಂದೇಹಗಳು ಮತ್ತು ದೋಷಗಳು

ಅಂಥದೇ ದರ್ಶನಾನುಭವವನ್ನು ಪಡೆದ ಮತ್ತೊಬ್ಬ ವ್ಯಕ್ತಿ ಸ್ವಾಮಿ ಅಭೇದಾನಂದರು. ಅವರು ಬಹುಕಾಲ ಭಗವಾನ್ ರಮಣ ಮಹರ್ಷಿಗಳ ಆಶ್ರಮದಲ್ಲಿ ನಿವಾಸಿ ಸಾಧಕರಾಗಿದ್ದರು. 1961 ಡಿಸೆಂಬರ್ 23ನೆಯ ತಾರೀಕು ಅವರು ನನಗೆ ಬರೆದರು: "ನಿಜವಾಗಿ ಹೇಳುತ್ತೇನೆ, ನಾನು ಈಗ ಸಾಕಷ್ಟು ಸಮಯದಿಂದ ಶ್ರೀ ಸತ್ಯಸಾಯಿ ಬಾಬಾಜೀ ಅವರ ಮತ್ತು ಅವರ ಮಹಿಮೆಗಳನ್ನು ಕುರಿತು ಕೇಳುತ್ತಾ ಬಂದಿದ್ದೇನೆ. ಆದರೆ ಕೇಳ್ಮೆಯ ಮಾತುಗಳು ಅವರ ಬಗೆಗೆ ಒಳ್ಳೆಯ ಅಭಿಪ್ರಾಯವನ್ನು ಮೂಡಿಸುವುದಿಲ್ಲ. ಈಚೆಗೆ, ವಾರವೋ ಹತ್ತುದಿನಗಳೋ ಹಿಂದೆ ನಿಮ್ಮ 'ಸತ್ಯಂ ಶಿವಂ ಸುಂದರಂ' ಪುಸ್ತಕವನ್ನು ಅವರ ಭಕ್ತರೊಬ್ಬರು ತಂದುಕೊಟ್ಟರು. ನಾನು ಓದಿದೆ. ಅದು ಬಹಳ ಸ್ವಾರಸ್ಯವಾಗಿದೆ, ಬೋಧಪ್ರದವಾಗಿದೆ. ಆ ದೈವದ ದರ್ಶನ ಪಡೆಯಬೇಕು ಎಂಬ ಹಂಬಲವನ್ನು ನನ್ನಲ್ಲಿ ಮೂಡಿಸುತ್ತಿದೆ. ನಾನು ಅವರ ದರ್ಶನ ಪಡೆಯಬಹುದೆ, ಯಾವಾಗ ಪಡೆಯಬಹುದು ಎಂಬುದನ್ನು ತಿಳಿಸಬಲ್ಲಿರಾ?

"ನಾನೀಗ ಇಪ್ಪತ್ತು ವರ್ಷಗಳಿಗಿಂತಲೂ ಹೆಚ್ಚು ಸಮಯದಿಂದ ಈ ಬಗೆಯ ಜೀವನ ನಡೆಸುತ್ತಿದ್ದರೂ ಇನ್ನೂ ನನ್ನಲ್ಲಿ ಸಂದೇಹಗಳು ಉಳಿದಿವೆ, ದೋಷಗಳೂ ಉಳಿದಿವೆ. ಈ ದೇಹ ಬದುಕಿನ ಕೊನೆಯ ಹಂತಕ್ಕೆ ಬಂದಿದೆ, ಅದಕ್ಕೆ ಎಪ್ಪತ್ತಾರು ವರ್ಷ ಮುಗಿಯಿತು. ಸಾಧನೆಯ ತಿರುಳನ್ನು ಸವಿಯಲು ಇನ್ನು ಹೆಚ್ಚು ತಡಮಾಡುವಂತಿಲ್ಲ. ನನ್ನ ಸಂದೇಹಗಳು ಆ ತಿರುಳನ್ನು ಮುಸುಕಿ

ಮರೆಮಾಡಿವೆ. ಭಗವಾನರ ಕೃಪೆಯನ್ನು ಪಡೆದು ಈ ಸಂದೇಹಗಳನ್ನೂ ದೋಷಗಳನ್ನೂ ನಿವಾರಿಸಿಕೊಂಡು ಈ ಕ್ಲೇಶ ಪೂರ್ಣವೂ ಕೊನೆಯಿಲ್ಲದ್ದು ಆದ ಸಂಸಾರದಿಂದ ಬಿಡುಗಡೆ ಪಡೆಯಲು ನೀವು ನನಗೆ ದಯವಿಟ್ಟು ಸಹಾಯ ಮಾಡಬಲ್ಲಿರಾ?"

ಪತ್ರಕ್ಕೆ ನನ್ನ ಉತ್ತರವು ತಲುಪುವುದಕ್ಕೆ ಮೊದಲೇ ಅವರಿಗೆ 27ನೆಯ ತಾರೀಕು ಬೆಳಗಿನ ಜಾವ 4 ಗಂಟೆ ಸಮಯದಲ್ಲಿ ಒಂದು ದರ್ಶನವಾಯಿತು. ಪೂರ್ತಿ ಎಚ್ಚರವಾಗಿರುವಾಗಲೇ ರಮಣ ಮಹರ್ಷಿ ಮತ್ತು ಸಾಯಿಬಾಬಾ ಇಬ್ಬರನ್ನೂ ಒಟ್ಟಿಗೆ ಅವರು ದರ್ಶನ ಮಾಡಿದರು. ಅವರೊಂದಿಗೆ ಬಾಬಾ ಸ್ಪಷ್ಟವಾದ ತೆಲುಗಿನಲ್ಲಿ ಮಾತನಾಡಿ ಧ್ಯಾನದ ಹೊಸ ವಿಧಾನವೊಂದನ್ನು ನಿರ್ದೇಶಿಸಿದರು. ಅಭೇದಾನಂದರು ಒಡನೆಯೇ ಪ್ರಶಾಂತಿ ನಿಲಯಕ್ಕೆ ಧಾವಿಸಿ ಬಂದರು, ಆಗಲೇ ಅವರಿಗೆ ಸಂದರ್ಶನ ದೊರಕಿತು. 1962 ಫೆಬ್ರುವರಿ 5ನೇ ತಾರೀಕಿನ ಅವರ ಪತ್ರವು ಅವರ ಮೇಲೆ ಬಾಬಾ ತೋರಿದ ಅನುಗ್ರಹದ ನಿರೂಪಣೆ ಕೊಡುತ್ತದೆ. "ಬಾಬಾ ಅವರ ದಿವ್ಯಕರುಣೆಗೆ ನಾನು ತೆರೆದುಕೊಳ್ಳಲು ಕಾರಣವಾದ ನಿಮ್ಮನ್ನು ನಾನು ವಂದಿಸಬೇಕು. ಆದರಿಂದ ನನ್ನ ಎಲ್ಲ ಸಂದೇಹಗಳೂ ಪರಿಹಾರವಾದುವು. ಅಷ್ಟೇ ಅಲ್ಲ ಮುಪ್ಪಿನಿಂದಾಗಿದ್ದ ದೇಹ ದೌರ್ಬಲ್ಯಗಳೆಲ್ಲ ಮಾಯವಾಗಿಟ್ಟವು, ದುರ್ಬಲಗೊಂಡಿದ್ದ ಅಂಗಾಂಗಗಳು ಮರಳಿ ನವ ಚೇತನ ಪಡದುವು. ಅವರ ಒಂದೇ ಒಂದು ದಿವ್ಯ ಸ್ಪರ್ಶದಿಂದ ನಾನು ಶಕ್ತಿಯನ್ನು ಮರಳಿ ಪಡೆದೆ. ವಿಶ್ಲೇಷಣೆ, ಹೋಲಿಕೆಗಳಿಂದ ಕೂಡಿದ ಅತ್ಯಂತ ಸ್ಪಷ್ಟ. ಸರಳ ನಿರೂಪಣೆ ಬಹುಕಾಲದಿಂದ ನನ್ನಲ್ಲಿ ನೆಲೆಯೂರಿದ್ದ ಸಂದೇಹಗಳನ್ನು ಕೊನೆಗೊಳಿಸಿದುದು ಮಾತ್ರವಲ್ಲ, ಮುಖಾಮುಖಿಯಾಗಿ ಸತ್ಯವನ್ನು ಅದರ ಭವ್ಯ ಸ್ವರೂಪದಲ್ಲಿ ಕಂಡೆ."

ಅಷ್ಟೇ ಅಲ್ಲ, ನಾನು ಅವರನ್ನು ಬೀಳ್ಕೊಡುವ ಸಮಯದಲ್ಲಿ ಅವರು ಮುರಳೀಧರ ಕೃಷ್ಣನಾಗಿ ರೂಪಾಂತರಗೊಂಡು ಅದ್ಭುತ ಕಾಂತಿಯಿಂದ ಮೈದೋರಿದ ದೃಶ್ಯವನ್ನು ನಾನು ಎಂದೆಂದಿಗೂ ಮರೆಯಲಾರೆ. ಈ ಜಡ ಚೇತನ ಮೇಲೆ ಕೃಪೆಯಿಟ್ಟು ಸಗುಣ- ನಿರ್ಗುಣಗಳೆರಡೂ ಒಂದೇ ಎಂದು ಮನವರಿಕೆ ಮಾಡಿಕೊಡುವ ಸಲುವಾಗಿ ಸಗುಣ ಬ್ರಹ್ಮದ ದರ್ಶನವನ್ನು ನೀಡಿದರು."

ಹಿಸ್ಲಾಪರೂ ಭಗವಂತನನ್ನು ನಿರ್ಗುಣನಾಗಿಯೇ ಅಂಗೀಕರಿಸಿದ್ದರು. ಸೀಮಿತ, ತಾತ್ಕಾಲಿಕ, ನಿರ್ದಿಷ್ಟ ಅವತಾರವು ಅವರಿಗೆ ಕಡಿಮೆ ದೈವಿಕವೆನಿಸುತ್ತಿದ್ದಿತು. ಆದ್ದರಿಂದ ಬಾಬಾ ಅವರಿಗೂ ಕೃಷ್ಣನಾಗಿ ದರ್ಶನ ನೀಡಿದರು. ದೈವತ್ವವು ಎಂದಿಗೂ ಪರಿಪೂರ್ಣ, ಮುಕ್ತ. ಅವತಾರದ ರೂಪ ಪಡೆದ ಮಾತ್ರಕ್ಕೆ ಅದರ ಮೌಲ್ಯ ಕುಂದುವುದಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಟ್ಟರು. ಅಭೇದಾನಂದರು ಪತ್ರದಲ್ಲಿ ಮುಂದುವರಿಸುತ್ತಾರೆ: "ನಾನು ಇನ್ನೂ ನಿರ್ಗುಣ ಬ್ರಹ್ಮನನ್ನು ಮಾತ್ರ ನಂಬುತ್ತಿದ್ದೆ. ಕಣ್ಣಿಗೆ ಕಾಣುವ ಈ ಇದೆಲ್ಲವೂ ಮಿಥ್ಯೆ ಎಂದು ನಂಬಿದ್ದೆ. ಅವರು ತೋರಿಸಿದ ಈ ದಿವ್ಯದರ್ಶನವು ನನ್ನನ್ನು ಸಂಪೂರ್ಣವಾಗಿ ಬದಲಾಯಿಸಿದೆ. ಪ್ರತಿಯೊಂದು ವಸ್ತುವನ್ನು- ದೃಶ್ಯ ಹಾಗೂ ಕಲ್ಪಿತ- ಸತ್ಯವೆಂದೂ ಅದೇ ಪರಿಪೂರ್ಣ ತತ್ವದ ಒಂದು ಭಾಗವೆಂದೂ ಅರಿತೆ.

ಸಾಧನೆಯ ದಾರಿಯಲ್ಲಿ ನನ್ನ ಪರಿಶ್ರಮದ ಬಗೆಗೆ ನನಗಿದ್ದ ಸಂದೇಹಗಳನ್ನೂ, ಒದಗಿದ್ದ ಅಡ್ಡಿಗಳನ್ನೂ ಬಾಬಾ ಮೊದಲೇ ನಿರೀಕ್ಷಿಸಿದ್ದು ಅವೆಲ್ಲವನ್ನೂ ಪರಿಹರಿಸಿಬಿಟ್ಟರು. ತಮ್ಮ ಉಪದೇಶದ ಯಥಾರ್ಥತೆಯನ್ನು ನನಗೆ ಮಂದಟ್ಟು ಮಾಡಿಕೊಟ್ಟು, ಹೇಗೆ ನಾನು ಸಾಧನೆಯಲ್ಲಿ

ಮುಂದುವರಿಯಬೇಕೆಂಬ ವಿಷಯವಾಗಿ ಸಲಹೆ ನೀಡಿದರು. ಜನರು ಬಾಬಾ ಅವರಿಗೆ ಅವತಾರತ್ವವನ್ನು ಆರೋಪಿಸುವುದರ ಬಗೆಗೆ ನನಗೆ ಒಪ್ಪಿಗೆಯಿಲ್ಲ. ಅವರು ನನ್ನ ಪಾಲಿಗೆ ಪರಿಪೂರ್ಣ ಪರಬ್ರಹ್ಮ. ಮಾನವನು ತನ್ನ ನಿಜಸ್ಥಿತಿಯಾದ ಆನಂದವನ್ನು ಅರಿತುಕೊಳ್ಳುವಂತೆ ಮಾಡಿ ಜಗತ್ತಿನ ಅಸ್ಥಿರತೆಯನ್ನು ಕೊನೆಗಾಣಿಸುವ ಸಲುವಾಗಿಯೇ ಮೈವೆತ್ತು ಬಂದಿರುವ ಪರತತ್ತ್ವ."

ಫ್ರಾನ್ಸಿನಲ್ಲಿ ಭಾರತದ ರಾಯಭಾರಿಯಾಗಿರುವ ಶ್ರೀ ಮಹಾರಾಜ ಕೃಷ್ಣ ರಸಗೋತ್ರ ಅವರು ಬಾಬಾ ಸನ್ನಿಧಿಯಲ್ಲಿ ಕಳೆದ ಕ್ಷಣಗಳನ್ನು ಕುರಿತು ಬರೆಯುತ್ತಾರೆ: "ಆ ಕ್ಷಣಗಳ ಮೌಲಿಕತೆಯನ್ನು ಪದಗಳಲ್ಲಿ ಸಂಗ್ರಹಿಸಲು ಸಾಧ್ಯವೇ ಇಲ್ಲ. ಕರುಣಾಮೂರ್ತಿಯಾಗಿ, ಅಲ್ಲ ಪ್ರೇಮದ ಮೂರ್ತರೂಪವೇ ಆಗಿ ಅವರು ಅಲ್ಲಿ ಕುಳಿತಿದ್ದಾರೆ. ಜಾರುವ ಒಂದೊಂದು ಕ್ಷಣವೂ ದಿವ್ಯ ದರ್ಶನದ, ಜ್ಞಾನದ ಮೋಕ್ಷದ ಕ್ಷಣವಾಗುವಂತೆ ಪರಿವರ್ತಿಸುತ್ತಿದ್ದಾರೆ. ಅವರು ಒಂದು ಕೊಠಡಿಯನ್ನು ಪ್ರವೇಶಿಸಿದರೆಂದರೆ ಅಲ್ಲಿರುವ ನೀವು ಅವರ ಪ್ರೇಮದ ಬೆಚ್ಚನೆಯ ಆಲಿಂಗನದಲ್ಲಿ ಆವೃತರಾಗುವಿರಿ. ನೀವು ಅವರದೇ ಒಂದು ಬಾಗ ಎನ್ನುವ ಭಾವನೆ ನಿಮಗಾಗುತ್ತದೆ. ಪರಸ್ಪರ ಸಮೀಕರಣ ಪೂರ್ಣವಾಗುತ್ತದೆ. ಬಹುಶಃ ಈ ಕಾರಣದಿಂದಲೇ ಇರಬೇಕು, ವ್ಯಕ್ತಿಯ ಭೂತ, ಭವಿಷ್ಯದ್, ವರ್ತಮಾನಗಳಲ್ಲಿ ಏನೊಂದೂ ಅವರ ದೃಷ್ಟಿಗೆ ಮರೆಯಾಗುವುದಿಲ್ಲ.

## ಜೇಡನ ಬಲೆಗಳು ಇನ್ನು ಬೇಡ

"ಕೆಲವು ವರ್ಷಗಳ ಹಿಂದೆ, ಪೂರ್ವ ನಿಶ್ಚಯವಿಲ್ಲದೆ, ಪರಿಚಯವಿಲ್ಲದೆ, ಬಳಕೆಯಿಲ್ಲದೆ ಯಾವುದೋ ಒಂದು ದೂರದ ಸ್ಥಳದಲ್ಲಿ ಮೊತ್ತ ಮೊದಲ ಸಾರಿ ನಾನು ಅವರನ್ನು ದರ್ಶನ ಮಾಡಿದಾಗ, ನನ್ನ ಯಾವುದೇ ಸೂಚನೆಯಾಗಲಿ ಪ್ರಚೋದನೆಯಾಗಲಿ ಇಲ್ಲದೆ ಅವರು ಸಾವಿನ ವಿಷಯವನ್ನು ಎತ್ತಿದರು. 'ಮಗುವನ್ನು ಕಳೆದುಕೊಂಡಿದ್ದು ಇನ್ನೂ ನಿನ್ನ ಮನಸ್ಸಿನಲ್ಲಿ ಭಾರವಾದ ಕೊರಗಾಗಿ ಉಳಿದಿದೆಯಲ್ಲವೆ? ಬದುಕಿರುವವರು ಸಾವಿನ ಅನಿವಾರ್ಯತೆಯನ್ನು ಒಪ್ಪಿಕೊಳ್ಳಲೇಬೇಕು.' ಇಷ್ಟು ಹೇಳಿ ಆದುವರೆಗೆ ನನಗೆ ಪರಿಚಿತವಾಗಿರದ ಹೊಸದೊಂದು ದಿಗಂತವನ್ನೇ ನನ್ನ ಕಣ್ಣೆದುರು ಹರಡಿದರು"- ಎನ್ನುತ್ತಾರೆ ಶ್ರೀ ರಸಗೋತ್ರ.

ಒಬ್ಬ ಭಕ್ತನನ್ನು ಕುರಿತು ಅವರು ಮೃದುವಾಗಿ ಹೀಗೆ ಕೇಳಿದುದು ನನ್ನ ಕಿವಿಗೆ ಬಿತ್ತು: "ನಿನ್ನ ದುಃಖಕ್ಕೆ ಕಾರಣ ಏನು? ನಿನ್ನ ಭೀತಿಗಳಿಗೆ ಆಧಾರ ಯಾವುದು? ನಿನ್ನ ದುಃಖ ನಿನ್ನ ಭೀತಿ ಇವು ಹಿಂದೆ ನೀನು ಪಡೆದ ಅನುಭವಗಳನ್ನು, ನೆನ್ನೆಯ ಅನುಭವಗಳನ್ನು ಅವಲಂಬಿಸಿವೆ. ಆದರೆ ಇಂದು ನೆನ್ನೆಯಲ್ಲ; ಮತ್ತೆ, ನಾಳೆಯೂ ಬೇರೆಯೇ. ನಾಳೆ ನಿನಗೇನು ತರಬಹುದೆಂಬುದು ನಿನಗೆ ತಿಳಿಯದು. ಅಂದ ಮೇಲೆ ನೆನ್ನೆಯ ದೆವ್ವಗಳಿಗೆ ನಿನ್ನ ಹೃದಯದಲ್ಲಿ ಹೊಸ ಜೀವನವನ್ನೇಕೆ ಕೊಡುತ್ತಿದ್ದೀಯೆ?"

ಸಂದರ್ಶನ ಎನ್ನುವುದು ಒಂದು ಅಮೂಲ್ಯ ಸಂದರ್ಭ. ಅಲ್ಲಿ ಬಾಬಾ ಮಿದುಳಿನಲ್ಲಿ ಕಟ್ಟಿದ ಜೇಡನ ಬಲೆಗಳನ್ನು ತೆಗೆದು ಸ್ವಚ್ಛಗೊಳಿಸುತ್ತಾರೆ. ಹುಬ್ಬು ಗಂಟನ್ನು ಸಡಿಲಿಸಿ ಹಣೆಯ ನೆರಿಗೆಗಳನ್ನು ಅಳಿಸುತ್ತಾರೆ, ಮನೋ ಚಾಂಚಲ್ಯವನ್ನು ದೂರಮಾಡಿ ಬುದ್ದಿಯ ಮಂಕನ್ನು ಪರಿಹರಿಸುತ್ತಾರೆ. ನಮ್ಮ ಉಸಿರಾಟದ ಮೇಲೆ ಕೇಂದ್ರೀಕರಿಸಿ ಅದು ಸೋಽಹಂ ಎಂದು ಪಠಿಸುತ್ತಿರುವುದನ್ನು ಆಲಿಸಬೇಕೆಂದು

ನಮಗೆ ಬುದ್ಧಿ ಹೇಳುತ್ತಾರೆ. ಅವರು ನಮ್ಮ ನಾಲಗೆಗೆ ಒಂದು ಸೈಲೆನ್ಸರ್ ಜೋಡಿಸಿಬಿಡುತ್ತಾರೆ. ನಮ್ಮ ಮಾತನ್ನು ಮಧುರಗೊಳಿಸುತ್ತಾರೆ, ಮಿದುಗೊಳಿಸುತ್ತಾರೆ. ನಮ್ಮ ಹೆಗಲ ಮೇಲಿನ ಭಾರವನ್ನು ಹಗುರಗೊಳಿಸುತ್ತಾರೆ, ಭವಿಷ್ಯತ್ತಿನ ಬಗೆಗೆ ಹೊಸ ಆಶೆಯನ್ನು ಕೊಡುತ್ತಾರೆ. ನಮ್ಮ ಕ್ರಿಯೆಗಳಿಗೆ ಅರ್ಥ ನೀಡಿ, ನಾವು ಸಾಧಿಸಬೇಕಾದ ಹೊಸ ಗುರಿಗಳನ್ನು ಹಾಕಿಕೊಡುತ್ತಾರೆ. ವಾಸ್ತವವಾಗಿ ನಮ್ಮ ಭಾವನೆಗೊಳನ್ನು ಉದಾತ್ತ ಗೊಳಿಸಿ, ಉದ್ವೇಗಗಳನ್ನು ಪಾವನಗೊಳಿಸುತ್ತಾರೆ. ನಿರಂತರ ಹಂಬಲದಿಂದ ತಮ್ಮ ಬಳಿಗೆ ಬರುವವರ ಮೇಲೆ ಸಂದರ್ಶನದಲ್ಲಿ ಬಾಬಾ ತೋರಿಸುವ ಕರುಣೆಯನ್ನು ಅನುಭವಿಸಿರುವ ರಸಗೋತ್ರ ಬರೆಯುತ್ತಾರೆ: "ಅವರನ್ನು ಸಂಧಿಸಲು ಹೋದವನು, ಅದೇ ರೀತಿಯಲ್ಲಿ ಹಿಂದಕ್ಕೆ ಬರುವುದಿಲ್ಲ. ಆ ಭೇಟಿಯಿಂದ ಉದಾತ್ತನಾಗಿ ಉಲ್ಲಸಿತನಾಗಿ, ಹೊರಬರುತ್ತಾನೆ. ತಾನು ಧರಿಸಿದ್ದ ತೇಪೆ ಅಂಗಿಯನ್ನು ಕಳಚಿಸಿ ಪ್ರೇಮದ ಹೊಚ್ಚಹೊಸ ಮೇಲಂಗಿಯನ್ನು ಬಾಬಾ ತೊಡಿಸಿ ಕಳುಹಿಸುತ್ತಾರೆ. ನೂತನ ಗುರಿಯ ಕಡೆಗೆ ನವಪ್ರೋಲ್ಲಾಸದಿಂದ ಪ್ರಯಾಣ ಕೈಗೊಳ್ಳಲು ಸನ್ನದ್ಧನಾಗಿ ಅವನು ಬರುತ್ತಾನೆ.

"ಸಂಪರ್ಕ ಸಾಧಿತವಾದ ಮೊದಲನೆಯ ಕ್ಷಣದಿಂದಲೇ ಪರಿವರ್ತನೆ ಪ್ರಾರಂಭವಾಗುತ್ತದೆ. ಉನ್ನತೀಕರಣದ ಪ್ರಕ್ರಿಯೆ ಆಮೇಲೆ ಸಡಿಲಗೊಳ್ಳುವುದೇ ಇಲ್ಲ. ಜಗತ್ತಿನ ಪ್ರತಿಯೊಂದು ಭಾಗದಿಂದಲೂ ಎಲ್ಲ ಧರ್ಮಗಳ, ನಂಬಿಕೆಗಳ ಸ್ತ್ರೀಪುರುಷರನ್ನು ಪುಟ್ಟಪರ್ತಿಗೋ ಬೃಂದಾವನಕ್ಕೋ ಆಕರ್ಷಿಸುತ್ತಿರುವ ಅಂಶ ಬಹುಶಃ ಇದೇ ಆಗಿರಬಹುದು. ಅವರ ವ್ಯಕ್ತಿತ್ವ ಬೀರುವ ಪ್ರಭಾವ ಕ್ಷಣ ಸಿದ್ಧವಾದದ್ದು, ಮಿಂಚಿನಂತೆ ಸಂಭವಿಸುವುದು, ಮೇಲೆತ್ತುವುದು. ಅವರ ಪ್ರಕಾಶಮಾನ ಸನ್ನಿಧಿಯಲ್ಲಿ ವ್ಯಕ್ತಿಯು ತಾನು ಅದುವರೆಗಿದ್ದುದಕ್ಕಿಂತ ಬೇರೆಯೇ ಆದರ ವ್ಯಕ್ತಿಯೆಂಬ, ಮೇಲಿನ ಸ್ತರಕ್ಕೆ ಸೇರಿದವನೆಂಬ ಅನುಭವ ಪಡೆಯುತ್ತಾನೆ. ಅಲ್ಲಿ ಕಾಮ ಕ್ರೋಧಾದಿಗಳಿಲ್ಲ, ದ್ವೇಷವಿಲ್ಲ, ಸುಳ್ಳಿನ ಕಾಟವಿಲ್ಲ; ನೋವಿರಬಹುದು, ಆದರೆ ಭೀತಿಯಂತೂ ಇಲ್ಲವೇ ಇಲ್ಲ."

ವಿಲಿಯಂ ಪೆನ್ ಬರೆಯುತ್ತಾರೆ: "ಅದೇ ಬಾಬಾ ಅವರ ವಿಶೇಷ. ಒಂದು ಸಾರಿ ಅವರು ನಿಮ್ಮ ಬದುಕಿನಲ್ಲಿ ಪ್ರವೇಶ ಮಾಡಿದರೆಂದರೆ, ಅದನ್ನು ಪೂರ್ತಿಯಾಗಿ ತುಂಬಿಕೊಂಡುಬಿಡುತ್ತಾರೆ. ಅದು ಸಂಪೂರ್ಣವಾಗಿ ಬೇರೆಯೇ ಆಗಿಬಿಡುತ್ತದೆ, ಪೂರ್ತಿಯಾಗಿ ಆನಂದಮಯವಾಗುತ್ತದೆ."

ಪ್ರೇಮದ ಬಿಸುಪು ಇರುವ ಪ್ರತಿಯೊಂದು ಹೃದಯದಲ್ಲೂ ಬಾಬಾ ನೆಲಸುತ್ತಾರೆ. ಯಾವುದೇ ಸಮಸ್ಯೆಯೂ ಅವರ ಗಮನಕ್ಕೆ ಬಾರದುದಲ್ಲ, ಅವರ ಕೃಪೆಗೆ ದೂರವಾದುದಲ್ಲ. ಸಂದರ್ಭದಲ್ಲಿ ಏನು ಮಾಡಬೇಕೆಂದು ತಿಳಿಯದೆ ಇಬ್ಬಂದಿ ಮನಸ್ಸಿನಿಂದ ಒದ್ದಾಡುವಂತೆ ಮಾಡುತ್ತಾರೆ. ನಮ್ಮ ಪ್ರಯತ್ನಗಳು ವಿಫಲಗೊಂಡು, ಅಹಂಕಾರವು ಶರಣಾಗತವಾದಾಗ, ನಮ್ಮ ವೈಯಕ್ತಿಕ ಸಮಸ್ಯೆಗಳನ್ನು ಸರಿಯಾಗಿ, ಆತ್ಮೀಯ ಸಹಾನುಭೂತಿಯಿಂದ ವ್ಯವಹರಿಸುತ್ತಾರೆ. ಆದ್ದರಿಂದ ಅಲ್ಲಿ ನಡೆಯುವುದರ ಬಹುಭಾಗ- ಅವರು ನೀಡುವ ಸಲಹೆ, ತುಂಬುವ ಧೈರ್ಯ, ಪರಿಹರಿಸುವ ಸಮಸ್ಯೆ ಗೆಲ್ಲುವ ಹತಾಶ ಸ್ಥಿತಿ, ತಾವು ಕೊಡುವ ಪ್ರೇಮದ ಕುರುಹುಗಳು, ಭರವಸೆ ನೀಡುವ ಅರಿವು, ಪರಿಹರಿಸುವ ಸಂದೇಹಗಳು - ಇತ್ಯಾದಿ ಯಾವುದೂ ದಾಖಲೆಯಲ್ಲಿ ಉಳಿಯುವುದಿಲ್ಲ. ಬಾಬಾ ಸಂದರ್ಶನಕ್ಕೆಂದು ಆಯ್ಕೆಮಾಡುವವರು ಆ ಸಮಯದಲ್ಲಿ ಏನನ್ನು ಸಂಪಾದಿಸುತ್ತಾರೆ ಎನ್ನುವುದನ್ನು, ಭಾಗವಹಿಸಿದ ಒಬ್ಬರ ಈ ಕೆಳಗಿನ ನಿರೂಪಣೆಯಿಂದ ತಿಳಿದುಕೊಳ್ಳಬಹುದು.

ನಡೆಯುವುದೇನು

ಅಂದು ಬೆಳಗ್ಗೆ ಬಾಬಾ ಕರೆದ ತಂಡದಲ್ಲಿ ಏಳುಜನ ಇತರರೂ ಇದ್ದರು. ಮುಂಬಯಿಯ ಒಬ್ಬ ವೈದ್ಯರು, ಶ್ರೀಲಂಕಾದ ಓರ್ವ ಮಹಿಳೆ, ಲಾಸ್ ಏಂಜಲೀಸ್‌ನಿಂದ ಬಂದ ಅಮೆರಿಕನ್ ದಂಪತಿಗಳು, ನ್ಯೂಯಾರ್ಕಿನ ಸೈಕಿಕ್ ರಿಸರ್ಚ್ ಸೊಸೈಟಿಯಿಂದ ಬಂದ ಇಬ್ಬರು ಅಮೆರಿಕನ್ ವಿಜ್ಞಾನಿಗಳು ಮತ್ತು ಹಾಂಕಾಗಿನ ಒಬ್ಬ ವ್ಯಕ್ತಿ. ವೈವಿಧ್ಯ ಪೂರ್ಣವಾದ ತಂಡವೇ ಸರಿ. ಅದೃಷ್ಟದ ಈ ಪೆಟ್ಟನ್ನು ಕಾತರತೆಯಿಂದ ಕಾದು ಮಂದಿರದೆದುರಿಗೆ ಕುಳಿತ ಸಾಲುಗಳಿಂದ ಹೆಕ್ಕಿತಂದ ವೈವಿಧ್ಯ ಪೂರ್ಣ ಮಾದರಿ. ಕೊಠಡಿಯಲ್ಲಿ ಸುಂದರವಾದ ಒಂದು ಕುರ್ಚಿಯಿತ್ತು. ಆದರೂ ಬಾಬಾ ನೆಲದ ಮೇಲೆ ಕುಳಿತರು, ನಾವೆಲ್ಲ ಅವರ ಸುತ್ತ ಕುಳಿತೆವು. ಕುಳಿತುಕೊಳ್ಳುತ್ತಿದ್ದ ಹಾಗೆಯೇ ಬಾಬಾ ವಿಭೂತಿಯನ್ನು ಸೃಷ್ಟಿಸಿ ಎಲ್ಲರಿಗೂ ಹಂಚಿದರು. ತಮ್ಮ ಹಿಂದಿ ಮಾತುಗಳನ್ನು ಇಂಗ್ಲೀಷಿಗೆ ಭಾಷಾಂತರ ಮಾಡಲು ನನಗೆ ಹೇಳಿದರು. ನನ್ನ ಹಿಂದಿ ಅತ್ಯಂತ ಒಡಕಲು, ಅವರ ಇಂಗ್ಲೀಷ್ ಅತ್ಯುತ್ತಮವಾದದ್ದು. ಆದರೂ ನನಗೆ ಈ ವಿನೂತನ ಅನುಭವವನ್ನು ಒದಗಿಸಿದರು, ಈ ಅವಕಾಶ ದೊರೆತದ್ದು ನನಗೆ ತುಂಬಾ ಮುದ ನೀಡಿತು. ನಾವೆಲ್ಲ ಕುಟುಂಬದ ಸದಸ್ಯರು ಒಟ್ಟಾಗಿ ಕುಳಿತರೆ ಹೇಗೋ ಹಾಗೆ ಹಿತವಾಗಿ ಕುಳಿತುಕೊಳ್ಳುವಂತೆ ಮಾಡಿದರು. ಅವರು ಸುಂದರವಾಗಿ, ತಾರುಣ್ಯದ ಉಲ್ಲಾಸದಿಂದ ಮೋಹಕವಾಗಿ ಕಾಣಿಸುತ್ತಿದ್ದರು.

"ತಕ್ಷಣವೇ ಅಮೆರಿಕನ್ ದಂಪತಿಗಳ ಕಡೆಗೆ ತಿರುಗಿ ಬಾಬಾ ಅಂದು ಅವರ ವಿವಾಹದ 33ನೆಯ ವಾರ್ಷಿಕೋತ್ಸವದ ದಿನವಲ್ಲವೆ ಎಂದು ಕೇಳಿದರು. ಅವರು ನಿಬ್ಬೆರಗಾದರು! ಹೌದು ಎಂದು ಉತ್ತರ ಕೊಡಲು ಅವರಿಗೆ ಕೆಲವು ಸೆಕೆಂಡುಗಳೆ ಬೇಕಾದುವು. ತಮ್ಮ ಚಿತ್ರವನ್ನು ಕೆತ್ತಿರುವ ಒಂದು ಉಂಗುರವನ್ನು ಸೃಷ್ಟಿಸಿ ಮಹಿಳೆಯ ನಡುಗುತ್ತಿದ್ದ ಕೈಗೆ ಕೊಟ್ಟು ಪತಿಯ ಬೆರಳಿಗೆ ತೊಡಿಸಲು ಹೇಳಿದರು. ಮತ್ತೆ ಕೈ ಆಡಿಸಿ ಒಂದು ಚಿನ್ನದ ಸರವನ್ನು ಸೃಷ್ಟಿಸಿದರು. ಅದನ್ನು ಪತಿಯ ಕೈಗಿತ್ತು ಪತ್ನಿಯ ಕೊರಳಿಗೆ ತೊಡಿಸಲು ಹೇಳಿದರು. ಅವರಿಬ್ಬರ ಸಂತೋಷಕ್ಕೆ ಎಲ್ಲೆಯೇ ಇಲ್ಲ. ಆ ದಿನ ಮಹತ್ವವನ್ನು ಬಾಬಾ ತಮಗೆ ನೆನಪು ಮಾಡಿಕೊಡುತ್ತಾರೆಂದು ಅವರು ಕನಸಿನಲ್ಲೂ ಎಣಿಸಿರಲಿಲ್ಲ. ಅವರ ಸನ್ನಿಧಿಯಲ್ಲಿ ಕುಳಿತ ತಾವೇ ಅದನ್ನು ಮರೆತುಬಿಟ್ಟಿದ್ದಾಗ ಬಾಬಾ ಹೇಗೆ ಅದನ್ನು ತಿಳಿದುಕೊಂಡರು! ಅಷ್ಟೇ ಅಲ್ಲ, ಎಂದೂ ಮರೆಯಲಾಗದ ವೈಭವದಿಂದ ಅದನ್ನು ಬಾಬಾ ಆಚರಿಸಿದರು.

'ಈ ವಸ್ತುಗಳ ಸೃಷ್ಟಿಯನ್ನು ಕುರಿತು ನಿಮ್ಮ ವಿವರಣೆ ಏನು?' ಎಂದು ಬಾಬಾ ವಿಜ್ಞಾನಿಗಳನ್ನು ಕೇಳಿದರು. ಅವರು ಏನೂ ಉತ್ತರ ಕೊಡದೆ ಸುಮ್ಮನೆ ಕುಳಿತರು. ಬಾಬಾ ಹೇಳಿದರು: "ಏನೂ ಇಲ್ಲದ ಶೂನ್ಯದಿಂದ ಏನ್ನಾದರೂ ಸೃಷ್ಟಿಸುವುದನ್ನು ಭೌತಶಾಸ್ತ್ರದ ನಿಯಮಗಳು ಒಪ್ಪುವುದಿಲ್ಲ. ಆದರೆ ನನಗೆ ಸಂಬಂಧಿಸಿದಂತೆ ಆ ನಿಯಮಗಳು ವರ್ತಿಸುವುದಿಲ್ಲ." "ಅದು ಹೇಗೆ?" ಎಂದು ವಿಜ್ಞಾನಿ ಕೇಳಿದರು. ವಿಜ್ಞಾನವು ದೃಷ್ಟಿಗೋಚರ ಪ್ರಪಂಚಕ್ಕೆ ಸೀಮಿತವಾದದ್ದು. ಆದರೆ ಅತ್ಯಂತ ಪ್ರಬಲವಾದ ಸೂಕ್ಷ್ಮದರ್ಶಕವೂ ಕಾಣಲಾಗದುದನ್ನು ಆಧ್ಯಾತ್ಮಿಕ ಚಕ್ಷುವು ಕಾಣಬಲ್ಲುದು ಎಂದರು ಬಾಬಾ. 'ಒಂದು ಕಾಯಿಲೆಯನ್ನು ಪತ್ತೆ ಮಾಡಲು ನನಗೆ ಎಕ್ಸ್‌ರೇ ಅಗತ್ಯವಾಗಾಲಿ ರಾಸಾಯನಿಕ ಬಿಂದು ಚಿತ್ರಗಳ ಅಗತ್ಯವಾಗಲಿ ಇಲ್ಲ. ಇಂತಹ ಆಧ್ಯಾತ್ಮಿಕ ಅಂತರ್ದೃಷ್ಟಿಯನ್ನು ನೀವೂ

ಬೆಳೆಸಿಕೊಳ್ಳಬಹುದು. ಮನುಷ್ಯನಿಗೆ ಈ ಸಾಧ್ಯತೆಯನ್ನು ಮನವರಿಕೆ ಮಾಡಿಕೊಟ್ಟು ಶಾಂತಿ ಸಾಮರ್ಥ್ಯಗಳ ನೂತನ ವಲಯಗಳ ಕಡೆಗೆ ಅವನನ್ನು ಒಯ್ಯುವ ಸಲುವಾಗೇ ನಾನು 'ಇಲ್ಲಿರುವುದು' ಎಂದು ಅವರು ಹೇಳಿದರು.

## ಬದುಕಿಸಿದ್ದೇಕೆ?

ಮರ್ಫೆಟ್ ವರದಿ ಮಾಡಿರುವಂತೆ ಕುಪ್ಪಂ ಎಂಬ ಗ್ರಾಮದಲ್ಲಿ ಬಾವಿಯಲ್ಲಿ ಮುಳುಗಿ ಹೋಗುತ್ತಿದ್ದ ಒಬ್ಬ ವ್ಯಕ್ತಿಯನ್ನು ಕಾಪಾಡಲು ಬಾಬಾ ತಮ್ಮ ದೇಹವನ್ನು ಬಿಟ್ಟು ಹೋಗಿದ್ದರ ಎಂದು ವಿಜ್ಞಾನಿಗಳು ಕೇಳಿದರು. ಬಾಬಾ ಉತ್ತರ ಕೊಟ್ಟರು: "ನಾನು ರಾಧಾಕೃಷ್ಣನನ್ನು ಮುಳುಗದಂತೆ ಕಾಪಾಡಿದೆ ನಿಜ. ಆದರೆ ಅದಕ್ಕಾಗಿ ಈ ಸ್ಥಳವನ್ನು ಬಿಟ್ಟು ನಾನು ಹೋಗಬೇಕಾಗಿರಲಿಲ್ಲ. ನಾನಾಗಲೇ ಅಲ್ಲೇ ಇದ್ದೆ. ಎಲ್ಲ ಕಾಲಗಳಲ್ಲೂ ಎಲ್ಲೆಲ್ಲೂ ನಾನು ಇದ್ದೇನೆ. ನಾನು ಒಂದು ಕೆಲಸಕ್ಕಾಗಿ ಹೋಗಬೇಕಾಗಿಲ್ಲ, ಅಥವಾ ಹಿಂದಿರುಗಬೇಕಾಗಿಲ್ಲ."

"ಅವರು ಮತ್ತೆ 'ಯಾವ ಆಧಾರದ ಮೇಲೆ ನೀವು ಜನರನ್ನು ಅನುಗ್ರಹಿಸುವಿರಿ?' ಎಂದು ಕೇಳಿದರು. ಬಾಬಾ ಹೇಳಿದರು: "ವ್ಯಕ್ತಿಯು ನನಗೆ ಸಂಪೂರ್ಣವಾಗಿ ಶರಣಾಗತನಾಗಿದ್ದರೆ, ಮತ್ತು ಪರಿಸ್ಥಿತಿಯು ಅದನ್ನು ಬೇಡುತ್ತಿದ್ದರೆ ನಾನು ಅನುಗ್ರಹಿಸುತ್ತೇನೆ. ಮದರಾಸಿನ ವಾಲ್ಬರ್‌ಗೆ ಮೂರು ಸಾರಿ ಅತ್ಯಂತ ತೀವ್ರವಾದ ಮರಣಾಂತಕವಾದ ಹೃದಯಾಘಾತವಾಯಿತು. ಮೂರು ಸಾರಿಯೂ ಅವನನ್ನು ನಾನು ರಕ್ಷಿಸಿದೆ. ಏಕೆಂದರೆ ಅದು ಅವಶ್ಯಕವಾಗಿತ್ತು. ರಾಧಾಕೃಷ್ಣನನ್ನು ಕೇವಲ ಹತ್ತು ದಿನಗಳಿಗೋಸ್ಕರ ಜೀವವುಳಿಸಿದೆ. ಏಕೆಂದರೆ ಅದು ಅಗತ್ಯವೆಂದು ನನಗನ್ನಿಸಿತು. ನೀವು ನನ್ನನ್ನು ಸಾವು ಮತ್ತು ಜೀವದ ವಿಸ್ತರಣಗಳ ಬಗೆಗೆ ಕೇಳುತ್ತೀರಿ; ಆದರೆ ನಾನು ಹೇಳುತ್ತೇನೆ, ನೀವು ಹುಟ್ಟಿಯೂ ಇಲ್ಲ, ನೀವು ಸಾಯುವುದೂ ಇಲ್ಲ."

"ಇಡೀ ದೇಶವನ್ನೇ ನೀವು ಅನುಗ್ರಹಿಸಬಲ್ಲಿರಾ?" ಎಂದೊಬ್ಬ ಅಮೇರಿಕನ್ ಕೇಳಿದನು. "ನಾನು ಮಾಡಬಲ್ಲೆ" ಎಂದು ಉತ್ತರಿಸಿದರು ಬಾಬಾ. ನಾನು ಇಷ್ಟಪಟ್ಟರೆ ಈ ಇಬ್ಬರು ವಿಜ್ಞಾನಿಗಳಿಗೆ ವಿಶೇಷ ಅನುಗ್ರಹ ತೋರಿಸಿದ್ದೇನೆ. ನನ್ನನ್ನು ಗಮನಿಸಲು, ನನ್ನ ಮಾತುಗಳನ್ನು ಕೇಳಲು ಅನೇಕ ಅವಕಾಶಗಳನ್ನು ಇವರಿಗೆ ಕೊಟ್ಟಿದ್ದೇನೆ. ಏಕೆಂದರೆ ಈ ಅನುಭವಗಳಿಂದ ತಾವು ಪಡೆಯುವ ಜ್ಞಾನವನ್ನು ಉಪಯೋಗಿಸಿಕೊಂಡು ಮಾನವ ಜನಾಂಗಕ್ಕೆ ಸಹಾಯ ಮಾಡುವ ಶಕ್ತಿ ಇವರಿಗಿದೆ, ಆಸಕ್ತಿಯೂ ಇದೆ." ಇಬ್ಬರಲ್ಲಿ ಒಬ್ಬ ವಿಜ್ಞಾನಿಯು ಬಾಬಾ ತಮಗೆ ಸೃಷ್ಟಿಸಿ ಕೊಟ್ಟಿದ್ದ ಉಂಗುರದಲ್ಲಿ ಒಂದು ಹರಳು ಮಾಯವಾಗಿರುವುದನ್ನು ಅಗತಾನೆ ನೋಡಿದರು. ನಾವೆಲ್ಲ ಅದನ್ನು ಹುಡುಕತೊಡಗಿದೆವು. ಆದರೆ ಬಾಬಾ ಮುಗುಳ್ನಗುತ್ತಾ ತಾವೇ ಅದನ್ನು ಮಾಯವಾಗಿಸಿರುವುದಾಗಿ ಹೇಳಿದರು.

"ಆಮೇಲೆ ಬಾಬಾ ಮೇಲೆದ್ದು ನಮ್ಮಲ್ಲಿ ಪ್ರತಿಯೊಬ್ಬರಿಗೂ ವೈಯಕ್ತಿಕ ಸಂದರ್ಶನ ನೀಡಲು ತೊಡಗಿದರು. ಕೆಲವೇ ನಿಮಿಷಗಳಲ್ಲಿ ನನ್ನಲ್ಲಿದ್ದ ಎಲ್ಲಾ ಸಂದೇಹಗಳೂ, ಅನಿಶ್ಚಿತೆಗಳೂ ಪರಿಹಾರವಾದುವು. ನನ್ನ ಬದುಕಿಗೆ ಅವರು ಹೊಸತೊಂದು ಉದ್ದೇಶದ ಸೂಜಿಮದ್ದು ಚುಚ್ಚಿದರು. ಮಾತಿಲ್ಲದೆ ಅವರೆದುರಿಗೆ ನಿಂತಾಗ ನನ್ನ ಕೈಗಳನ್ನು ಹಿಡಿದು ಕೊಂಡು'ಯೋಚಿಸಬೇಡ ನಾನು ನಿನ್ನನ್ನು

ನೋಡಿಕೊಳ್ಳುತ್ತೇನೆ. ನಾನು ಯಾವಾಗಲೂ ನಿನ್ನೊಂದಿಗೆ, ನಿನ್ನ ಪಕ್ಕದಲ್ಲಿ, ನಿನ್ನ ಹೃದಯದಲ್ಲೇ ಇದ್ದೇನೆ' ಎಂದು ಭರವಸೆ ನೀಡಿದರು.

"ಕೆಲವು ದಿನಗಳ ನಂತರ ಬಾಬಾ ಇಬ್ಬರು ವಿಜ್ಞಾನಿಗಳನ್ನೂ, ಅಮೇರಿಕದಿಂದ ಬಂದಿದ್ದ ಇಬ್ಬರು ದಂಪತಿಗಳನ್ನು ಒಬ್ಬ ಬ್ರಿಟಿಷ್ ಪ್ರಜೆಯನ್ನೂ ನನ್ನನ್ನೂ ಸಂದರ್ಶನ ಕೊಠಡಿಗೆ ಕರೆದರು. ಕಳೆದುಹೋದ ಉಂಗುರದ ಹರಳಿನ ಬಗ್ಗೆ ಕೇಳಿದರು. ಆ ವಿಜ್ಞಾನಿಯು ಕೈಯಿಂದ ಉಂಗುರವನ್ನು ಹಿಂದಕ್ಕೆ ತೆಗೆದುಕೊಂಡು ತಮ್ಮ ಬಾಯೆದುರಿಗೆ ಕೈಯಲ್ಲಿ ಹಿಡಿದುಕೊಂಡು ಮೂರುಸಾರಿ ಮೃದುವಾಗಿ ಅದರ ಮೇಲೆ ಊದಿದರು. ಕಳೆದುಹೋಗಿದ್ದ ಹರಳು ಮತ್ತೆ ಬಂದಿತ್ತು, ಗಟ್ಟಿಯಾಗಿ, ಸುಂದರವಾಗಿ. "ಇದು ಸಂಕಲ್ಪ, ಇಚ್ಛೆ ಅದನ್ನು ನಡೆಸುತ್ತದೆ" ಎಂದು ಬಾಬಾ ವಿವರಿಸಿದರು.

"ಆಮೇಲೆ ಬಾಬಾ ವಿಜ್ಞಾನಿಗಳು ಕರುಣೆ, ವಿನಯಗಳನ್ನೂ, ಸಂಯಮ, ಸದ್ಗುಣಗಳನ್ನೂ ಬೆಳೆಸಿಕೊಳ್ಳುವ ಅಗತ್ಯವನ್ನು ವಿವರಿಸಿದರು. ಪರಮಾಣು ಬಾಂಬು ಮತ್ತು ಇತರ ವಿನಾಶಕಾರಿ ಅಸ್ತ್ರಗಳನ್ನು ಅವು ಉಂಟು ಮಾಡುವ ಭೀಕರ ಗಂಡಾಂತರಗಳನ್ನು ಕುರಿತು ಹೇಳಿದರು. "ಏಳು ಸಾವಿರ ವರ್ಷಗಳ ಹಿಂದೆ ಕುರುಕ್ಷೇತ್ರದ ಯುದ್ಧ ರಂಗದಲ್ಲಿ" ಎಂದು ಅವರು ಮಾತು ಪ್ರಾರಂಭಿಸಿದಾಗ, ಒಬ್ಬ ಅಮೇರಿಕನ್ ಮಧ್ಯೆ ಬಾಯಿ ಹಾಕಿದ. 'ಸಾವಿರಾರು ವರ್ಷಗಳ ಹಿಂದೆ ನಡೆದ ಘಟನೆಗಳನ್ನು ಬಾಬಾ ಹೇಗೆ ತಿಳಿದು ಕೊಂಡರು, ಪುಸ್ತಕಗಳಿಂದಲೋ ಅಥವಾ ಬೇರೆಯಾವುದಾದರೂ ವಿಧಾನದಿಂದಲೋ' ಎಂದು ಪ್ರಶ್ನಿಸಿದ. ಬಾಬಾ ನಕ್ಕರು. "ಎಪ್ಪತ್ತು ಸಾವಿರ ವರ್ಷ ಹಿಂದೆ ಏನಾಯಿತೆನ್ನುವುದೂ ನನಗೆ ಗೊತ್ತು. ಕಾಲದಲ್ಲಿ ಮುಂದಕ್ಕೆ ಮತ್ತು ಹಿಂದಕ್ಕೆ ನಾನು ಸಂಚರಿಸಬಲ್ಲೆ. ನನಗಿಷ್ಟ ಬಂದ ವಿಷಯವನ್ನು ತಿಳಿದುಕೊಳ್ಳಬಲ್ಲೆ. ಕಾಲ ದೇಶಗಳು ನನಗೆ ಮಿತಿಯನ್ನೊಡ್ಡಲಾರವು" ಎಂದರು.

"ಹಿಸ್ಲಾಪ್ ಬಾಬಾ ಅವರ ತಲೆಯ ಸುತ್ತ ನೋಡಿದೆನೆಂದು ಬರೆದ ಪ್ರಭಾ ಪರಿವೇಷವನ್ನು ಕುರಿತು ಯಾರೋ ಪ್ರಶ್ನೆ ಕೇಳಿದರು. ಬಾಬಾ ಉತ್ತರ ಕೊಟ್ಟರು: "ಸಾವಿರಾರು ಜನರು ಆ ಕಾಂತಿ ಪರಿವೇಷವನ್ನು ನೋಡಿದ್ದಾರೆ. ಅದನ್ನು ನೋಡಬೇಕಾದರೆ ನೀವು ನನ್ನ ಹತ್ತಿರದಲ್ಲೂ ಇರಬೇಕು, ಬಹಳ ಪ್ರಿಯರೂ ಆಗಿರಬೇಕು."

ಈ ಪ್ರಶ್ನೆ ಇನ್ನೂ ಹಲವು ಪ್ರಶ್ನೆಗಳಿಗೆ ಎಡೆಗೊಟ್ಟಿತು. ಎಲ್ಲವನ್ನು ಒಟ್ಟಿಗೆ ಕೂಡಿಸಿ ಬಾಬಾ ಸಣ್ಣದೊಂದು ಭಾಷಣ ಮಾಡಿದರು. "ನಾನು ಒಂದೇ ಸಮಯದಲ್ಲಿ ಎರಡು ಸ್ಥಳಗಳಲ್ಲಿರುವುದನ್ನೋ ಅಥವಾ ಸಾವಿರಾರು ಬೇರೆ ಬೇರೆ ಸ್ಥಳಗಳಲ್ಲಿರುವುದನ್ನೋ ನೋಡಿ ಆಶ್ಚರ್ಯ ಪಡುತ್ತೀರಿ. ನಿಮಗೆ ನಾನು ಒಂದು ಉಂಗುರವನ್ನೋ ಅಥವಾ ಬೇರೆ ಯಾವುದಾದರೂ ವಸ್ತುವನ್ನೋ ಸೃಷ್ಟಿಸಿ ಕೊಟ್ಟರೆ, ನಿಮಗೆ ಯಾವುದೇ ಅಪಾಯವು ಎದುರಾದರೆ ತಕ್ಷಣವೆ ಅದು ನನಗೆ ಸೂಚನೆ ಕೊಡುತ್ತದೆ. ತಕ್ಷಣವೆ ನಿಮ್ಮ ಬಳಿಗೆ ಬಂದು ಅಗತ್ಯವಾದ ನೆರವನ್ನು ನಾನು ನೀಡಲು ಸಾಧ್ಯವಾಗುತ್ತದೆ. ಹಾಗೆ ನಾನು ಕೊಟ್ಟ ಯಾವುದೇ ಒಂದು ವಸ್ತುವಿಲ್ಲದೆ ಹೋದಾಗಲೂ ಕೂಡ ನನ್ನ ಬಗೆಗೆ ಪ್ರಾಮಾಣಿಕವಾದ ಪ್ರೇಮ ಮತ್ತು ಭಕ್ತಿ ಇದ್ದದ್ದೇ ಆದರೆ ಅಷ್ಟು ಸಾಕು, ತಕ್ಷಣವೇ ನನ್ನ ಪ್ರತಿಕ್ರಿಯೆ ವ್ಯಕ್ತವಾಗುತ್ತದೆ. ಭಗವಂತನ ಯಾವುದೇ ರೂಪವನ್ನು ಅಥವಾ ನಾಮವನ್ನು ಇಟ್ಟುಕೊಂಡು ಜಪಿಸಲಿ ಅಥವಾ ಪೂಜಿಸಲಿ, ಪ್ರತಿಯೊಂದು ಪ್ರಾಮಾಣಿಕವಾದ ಪ್ರಾರ್ಥನೆಗೂ ನಾನು ಓಗೊಡುತ್ತೇನೆ.

"ಒಮ್ಮೆ ಇದೇ ಕೊಠಡಿಯಲ್ಲಿ ಟಿಕೇಟ್‌ನ (ಮೆಕ್ಸಿಕೋ) ಇಂದ್ರಾದೇವಿ ಇತರರೊಂದಿಗೆ ನಾನು ಮಾತನಾಡುವುದನ್ನು ಕೇಳುತ್ತಾ ಕುಳಿತಿದ್ದಳು. ಅವಳ ಪಕ್ಕದಲ್ಲಿ ಒಬ್ಬ ಅಮೆರಿಕನ್ ಗೃಹಸ್ಥ ಕುಳಿತಿದ್ದ. ಅವನ ಪತ್ನಿ ತನ್ನ ದೇಶದಲ್ಲಿದ್ದಳು. ಅವಳು ಕುಳಿತಿದ್ದ ಕಾರು ಭಯಂಕರ ಅಪಘಾತಕ್ಕೆ ಈಡಾಗಿದ್ದುದು ನನಗೆ ತಿಳಿಯಿತು. ಇವರೊಂದಿಗೆ ಮಾತನಾಡುತ್ತಲೇ ಅಲ್ಲಿ ಆಕೆಯನ್ನು ರಕ್ಷಿಸಿ ಅಗತ್ಯವಾಗಿದ್ದ ಎಲ್ಲ ನೆರವನ್ನೂ ನೀಡಿದೆ. ಇಲ್ಲಿ ಅವಳ ಪತಿಗೆ ಏನೂ ಗಾಬರಿ ಪಡದೆ ನಿಶ್ಚಿಂತೆಯಿಂದ ಪೂರ್ವಯೋಜಿತ ರೀತಿಯಲ್ಲಿ ದೇಶಕ್ಕೆ ಮರಳಿ ಹೋಗಬೇಕೆಂದು ಹೇಳಿದೆ.

"ಇಂದು ವಿಜ್ಞಾನ ಮತ್ತು ತಂತ್ರಜ್ಞಾನ ಅದ್ಭುತ ಪ್ರಗತಿ ಸಾಧಿಸಿವೆ. ಆದರೆ ಮಾನವನಿಗೆ ಶಾಂತಿಯಿಲ್ಲವಾಗಿದೆ. ನಿದ್ದೆಯ ಗುಳಿಗೆಗಳು ಮತ್ತು ಶಾಮಕ ಮದ್ದುಗಳು ಪ್ರತಿಯೊಬ್ಬರಿಗೂ ಅಗತ್ಯವಾಗುತ್ತಿವೆ. ಮನುಷ್ಯನನ್ನು ಇಂದು ಪೀಡಿಸುತ್ತಿರುವ ಹಲವಾರು ಮಾರಕ ರೋಗಗಳಿಗೆ ಸರಳವೂ, ನಿಯಂತ್ರಿತವೂ ಆದ ಜೀವನ, ನೈಸರ್ಗಿಕ ಆಹಾರ, ಬೇಕಾದಷ್ಟು ವ್ಯಾಯಾಮ ಇದೇ ಸರಿಯಾದ ಮದ್ದು. ನೀವು ನೋಡಿರುವಂತೆ ನಾನು ಬೇಕಾದಷ್ಟು ಕೆಲಸ ಮಾಡುತ್ತೇನೆ, ತುಂಬ ಕಡಿಮೆ ಪ್ರಮಾಣದಲ್ಲಿ ಸರಳವಾದ ಆಹಾರ ಸೇವಿಸುತ್ತೇನೆ. ಹಾಲು ಮೊಸರುಗಳನ್ನಾಗಲಿ, ಬೆಣ್ಣೆ ಅಥವಾ ಹಣ್ಣಿನ ರಸವನ್ನಾಗಲಿ ನಾನು ತೆಗೆದುಕೊಳ್ಳುವುದಿಲ್ಲ. ಈ ದೇಹವು ತೊಂಬತ್ತನಾಲ್ಕನೆಯ ವಯಸ್ಸಾಗುವವರೆಗೂ ಹೀಗೆ ಪೂರ್ಣಾರೋಗ್ಯದಲ್ಲಿರುತ್ತದೆ. ಆಗಾಗ ನನ್ನ ಭಕ್ತರ ಕಾಯಿಲೆಯನ್ನು ನಾನು ತೆಗೆದುಕೊಳ್ಳುವುದುಂಟು. ಆದರೆ ಅವು ನನ್ನ ಮೇಲೆ ಯಾವ ದುಷ್ಪರಿಣಾಮವನ್ನೂ ಬೀರದೆ ಹಾದು ಹೋಗಿಬಿಡುತ್ತವೆ."

## ಸಹಸ್ರಾರು ಜನರಿಗೆ ನೆರವು

"ಬಾಬಾ ರಾತ್ರಿ ವೇಳೆ ಎಷ್ಟು ಗಂಟೆ ಕಾಲ ನಿದ್ದೆ ಮಾಡುತ್ತಾರೆ ಎಂದು ಯಾರೋ ಕೇಳಿದರು. 'ನಾನು ನಿದ್ದೆ ಮಾಡುವುದೇ ಇಲ್ಲ' ಎಂದು ಅವರು ಉತ್ತರಿಸಿದರು. ಕೈಗಳಲ್ಲಿ ಸದಾ ಏನೇನೂ ಚಲನ ವಲನ ಮಾಡುತ್ತಿರುವುದಕ್ಕೆ ಏನು ಕಾರಣ ಎಂದು ಕೇಳಿದ ಇನ್ನೊಂದು ಪ್ರಶ್ನೆಗೆ ಬಾಬಾ ಹೇಳಿದರು: 'ಭಜನೆಯ ಸಮಯದಲ್ಲಿ, ನಾನು ಕುಳಿತಿರುವಾಗ ಕೈಗಳಿಂದ ಅಥವಾ ಬೆರಳುಗಳಿಂದ ಏನೇನೋ ವಿನ್ಯಾಸ ಮಾಡುತ್ತಿರುತ್ತೇನೆ. ನಾನು ಗಾಳಿಯಲ್ಲಿ ಏನನ್ನೋ ಬರೆಯುವಂತೆ ಮಾಡುವುದನ್ನು ನೀವು ನೋಡಿದ್ದೀರಿ. ಅದೇಕೆ ಎಂದು ತಿಳಿಯಲು ಜನರಿಗೆ ಕುತೂಹಲವಿದೆ. ಅಂತಹ ಸಂದರ್ಭಗಳಲ್ಲಿ ನಾನು, ನೀವು ಕಣ್ಣಿನಿಂದ ನೋಡಲಾಗದ ವ್ಯಕ್ತಿಗಳೊಂದಿಗೆ ಸಂಪರ್ಕ ಬೆಳೆಸಿರುತ್ತೇನೆ. ನೀವು ಅರ್ಥ ಮಾಡಿಕೊಳ್ಳಲಾಗದ ಕೆಲಸಗಳಲ್ಲಿ ತೊಡಗಿರುತ್ತೇನೆ. ಬಹುದೂರದ ಯಾರೋ ಒಬ್ಬರು ಕೇಳಿದ ಪ್ರಶ್ನೆಗಳಿಗೆ ಉತ್ತರ ಬರೆಯುತ್ತೇನೆ, ಜಗತ್ತಿನ ಪ್ರತಿಯೊಂದು ಭಾಗದಲ್ಲೂ ಇರುವ ಸಹಸ್ರಾರು ಜನರಿಗೆ ಸಹಾಯ ಮಾಡುತ್ತಿರುತ್ತೇನೆ.'

"ಆಮೇಲೆ ಅವರು ನಮ್ಮನ್ನು ಒಬ್ಬೊಬ್ಬರನ್ನಾಗಿ ಪಕ್ಕದ ಕೊಠಡಿಗೆ ಕರೆದರು, ಪ್ರತಿಯೊಬ್ಬರೊಂದಿಗೂ ಸ್ವಲ್ಪ ಸಮಯ ಕಳೆದರು. ಚಿಕಿತ್ಸೆ ಮಾಡುತ್ತಾ, ಧೈರ್ಯ ತುಂಬುತ್ತಾ; ಸಮಾಧಾನ ಪಡಿಸುತ್ತಾ ಮತ್ತು ತಿದ್ದುತ್ತಾ. ಅವರ ಶ್ರೀಚರಣಗಳನ್ನು ಮುಟ್ಟುವ ಎರಡನೆಯ ಅವಕಾಶ ನನಗೆ ಲಭ್ಯವಾಯಿತು. ಅವರ ಕರುಣೆಯ ಸಾಗರದಿಂದ ಮತ್ತೊಮ್ಮೆ ಶಕ್ತಿಯನ್ನೂ ಆಧ್ಯಾತ್ಮಿಕ ಪುಷ್ಟಿಯನ್ನೂ ಪಡೆದುಕೊಳ್ಳಲು ಸಾಧ್ಯವಾಯಿತು.

ಒಬ್ಬ ಅಮೆರಿಕನ್ ಕೇಳಿದನು, "ನನಗೆ ಇನ್ನೊಂದು ಅವಕಾಶ ಯಾವಾಗ ದೊರಕುತ್ತದೆ?" ಬಾಬಾ ನಕ್ಕು ಅವನ ಬೆನ್ನು ತಟ್ಟಿ ಹೇಳಿದರು: "ಇಂದು ಒಂದಷ್ಟು ಜನ ಗ್ರಾಮಸ್ಥರು ಬಂದಿದ್ದಾರೆ. ಇಲ್ಲಿಗೆ ಬರುವ ಬಹುತೇಕ ಜನರು ಬಡವರು. ದೀರ್ಘಕಾಲ ಇಲ್ಲಿದ್ದುಕೊಂಡು ಕಾಯಲು ಶಕ್ತಿಯಿಲ್ಲದವರು. ನಾನು ಮೊದಲು ಅಗತ್ಯವುಳ್ಳವರಿಗೆ ಮತ್ತು ಬಡವರಿಗೆ ಗಮನ ಕೊಡುತ್ತೇನೆ. ನನಗೆ ಸ್ವಲ್ಪ ಬಿಡುವಾದಾಗ ನಿನಗೆ ಇನ್ನೊಂದು ಅವಕಾಶ ಕೊಡುತ್ತೇನೆ.

"ಜಡವಸ್ತುವೆನ್ನುವುದು ಆತ್ಮದ, ದಿವ್ಯತ್ವದ ಕೆಳಮಟ್ಟದ ನೆಲೆ. ಭಗವದಿಚ್ಛೆಯು ಕಾರ್ಯಗತವಾಗಿರುವುದು ಆ ರೂಪದಲ್ಲಿ. ಅವನ ಶಕ್ತಿಯ ಅಳತೆಗೋಲು ಅದು. ಸೃಷ್ಟಿಯು ಸಂಭವಿಸುವುದು ಆತ್ಮದ ಶಕ್ತಿಯನ್ನು ಸರಿಯಾಗಿ ಹಾಯಿದಾಗಲೇ ಈ ಸತ್ಯವನ್ನು ಸಾಯಿಬಾಬಾ ಅವರು ಇಂದು ನಮ್ಮ ಅರಿವಿಗೆ ತಂದು ಕೊಡುತ್ತಿದ್ದಾರೆ." ಮೆಕ್ಸಿಕೋದ ಎಂಬತ್ತು ದಾಟಿದ ಡಾ. ಸಿಗ್‌ಫ್ರೀಡ್‌ನ್‌ರ್ ಹೇಳಿದರು. ತಮಗೆ ದೊರೆತ ಸಂದರ್ಶನದ ವಿಷಯವಾಗಿ ಅವರು ಸ್ಯಾನ್‌ಡೀಗೋದಲ್ಲಿ ಶ್ರೋತೃಗಳೆದುರಿಗೆ ಮಾತನಾಡುತ್ತಿದ್ದರು. "ಬಾಬಾ ನನ್ನನ್ನು ಒಳಕ್ಕೆ ಕರೆದರು. ಕೆಲವು ನಿಮಿಷ ನಾನು ಮಾತನಾಡಿದೆವು. ಆ ಮಾತಿನ ವಿವರವನ್ನು ನನ್ನಲ್ಲೇ ಇಟ್ಟುಕೊಳ್ಳಬಯಸುತ್ತೇನೆ. ಆ ಮೇಲೆ ಕೈಗಳನ್ನು ಬಟ್ಟಲಿನಂತೆ ಮಾಡಿ ಹಿಡಿ ಎಂದು ನನಗೆ ಹೇಳಿದರು. ಒಂದಾದ ಮೇಲೊಂದರಂತೆ ಮೂವತ್ತ ಮೂರು ಕಂದು ಬಣ್ಣದ ಗುಳಿಗೆಗಳನ್ನು ನನ್ನ ಕೈಗೆ ಹಾಕಿದರು (ಮೂವತ್ತ ಮೂರು ಬೆನ್ನು ಮೂಳೆಗಳಲ್ಲವೆ ಎಂದು ವಿವರಿಸಿದರು). ಈ ಗುಳಿಗೆಗಳು ಒಂದಾದ ನಂತರ ಒಂದರಂತೆ ಅವರ ಅಂಗೈಯಲ್ಲಿ ರೂಪುಗೊಂಡಿದುವು.

ನಾನು ಭಾರತವನ್ನು ಬಿಟ್ಟು ಬರುವುದಕ್ಕೆ ಮೊದಲು ಮುಂಬಯಿಯಲ್ಲಿ ಬಾಬಾ ಅವರು ನನ್ನನ್ನು ಧರ್ಮಕ್ಷೇತ್ರದಲ್ಲಿ ಒಂದು ಕೊಠಡಿಯೊಳಕ್ಕೆ ಕರೆದರು. ಅಲ್ಲಿ ಅವರೊಬ್ಬರೇ ಇದ್ದರು. ತಮ್ಮ ಕೈಯನ್ನು ವರ್ತುಲಾಕಾರವಾಗಿ ತಿರುಗಿಸಿದರು, ಆ ಮೇಲೆ ಅಂಗೈ ತೆರೆದು ತೋರಿಸಿದರು. ಅಲ್ಲಿ ಒಂದು ದ್ರವವು ಒಸರಿ ಅಲ್ಲಿ ತುಂಬಿಕೊಳ್ಳುತ್ತಿತ್ತು. 'ತೈಲ' ಎಂದರು. ಅದು ಬಹಳ ಮಧುರವಾದ ಪರಿಮಳ ಬೀರುತ್ತಿದ್ದ ಎಣ್ಣೆ ಆಮೇಲೆ ತಮ್ಮ ಎರಡೂ ಅಂಗೈಗಳನ್ನು ಉಜ್ಜಿ ಎಣ್ಣೆಯು ಸಮವಾಗಿ ಹರಡಿಕೊಳ್ಳುವಂತೆ ಮಾಡಿ ಅದನ್ನು ನನಗೆ ಸವರಿದರು. ಕೃತಜ್ಞತೆಯಿಂದ ಅವರ ಪಾದಸ್ಪರ್ಶ ಮಾಡಲು ಬಯಸಿದೆ, ಆದರೆ ಅದಕ್ಕೆ ಅವರು ಅವಕಾಶ ಕೊಡಲಿಲ್ಲ."

## ತಲುಪುವ ಪ್ರಶ್ನೆಯಿಲ್ಲ

ಹಿಂದೂ ಆಧ್ಯಾತ್ಮ ಶಾಸ್ತ್ರದಲ್ಲಿ ಪರಿಣತನಾಗಿದ್ದ ಒಬ್ಬ ವ್ಯಕ್ತಿಯು ಒಮ್ಮೆ "ಯಾವ ದಾರಿಯಿಂದ ನಿಮ್ಮನ್ನು ಬೇಗ ಸೇರಬಹುದು?" ಎಂದು ಕೇಳಿದನು. ಬಾಬಾ ಉತ್ತರ ಕೊಟ್ಟರು, "ನಿಮಗೆ ಒಂದು ದಾರಿಯನ್ನು ವಿಧಿಸುವುದಕ್ಕಾಗದಷ್ಟು ಹತ್ತಿರದಲ್ಲೇ ನಾನಿದ್ದೇನೆ. ನೀನು ಬಂದು ನನ್ನನ್ನು ತಲುಪುವ ಪ್ರಶ್ನೆಯಿಲ್ಲ; ನಿನಗೆ ಅಗತ್ಯವೆನಿಸಿದಾಗ ನಾನು ನಿನ್ನವನೇ ಆಗಿರುತ್ತೇನೆ." ಹೊನೋಲುಲುವಿನ ಒಬ್ಬ ವಾಸ್ತು ಶಿಲ್ಪಿ ಡಬ್ಲ್ಯು. ಜಿ. ಸ್ಟೀವ್ ಹೇಳುತ್ತಾರೆ: "ಆ ಪುಟ್ಟ ಸಂದರ್ಶನ ಕೊಠಡಿ ತುಂಬಿ ಹೋಗಿತ್ತು. ಬಾಬಾ ಆಧ್ಯಾತ್ಮಿಕವಾದ ಪುಟ್ಟ ಉಪನ್ಯಾಸ ನೀಡಿದರು. ಅಲ್ಲಿದ್ದ

ಕೆಲವರನ್ನು ನೇರವಾಗಿ ತಟ್ಟುವಂತಿದ್ದರೂ ಅದು ಸಾಮಾನ್ಯವಾಗಿ ಎಲ್ಲರಿಗೂ ಅನ್ವಯವಾಗುವಂತೆ ತೋರುತ್ತಿತ್ತು. ಆ ಮೇಲೆ ವೈಯಕ್ತಿಕ ಸಂದರ್ಶನ. ನಮ್ಮ ವ್ಯಕ್ತಿತ್ವದ ಆಳದ ಅಳಕ್ಕೆ ಇಳಿದು, ಆರೋಗ್ಯದ ಸಮಸ್ಯೆಗಳ ಬಗೆಗೆ ಮಾತಾಡಿದರು. ಹಿಂದೆ ಅವರೊಂದಿಗೆ ಆದ ಸಂಪರ್ಕಗಳು- ಕನಸಿನಲ್ಲಿ ಐರೀನಗಳೊಂದಿಗೆ ಅವರು ಮತಾನಾಡಿದ್ದರು. ನಂಬುತ್ತೀರಾ? ಆ ಕನಸಿನ ವಿವರಗಳನ್ನೆಲ್ಲ ಅವರು ವರ್ಣಿಸಿದರು. ಸಾಧನೆಯ ಮಧ್ಯೆ ನಾವು ವೈಯಕ್ತಿಕವಾಗಿ ಎದುರಿಸಿದ ಅಡ್ಡಿಗಳು, ನಮ್ಮ ವೈಯಕ್ತಿಕ ಅಶೋತ್ತರಗಳು, ಒಳತೋಟಿಗಳು ಎಲ್ಲವನ್ನೂ ಹೇಳಿದರು. ವಿಭೂತಿಯನ್ನು ಸೃಷ್ಟಿಸಿಕೊಟ್ಟರು. ಇವೆಲ್ಲ ಚುರುಕಾಗಿ, ಸಹಜವಾಗಿ, ಲೀಲಾಜಾಲವಾಗಿ, ಪ್ರೇಮಪೂರ್ವಕವಾಗಿ ನಡೆಯಿತು. ಹಳೆಯ ಪದಗಳಿಗೆ ಹೊಸ ಅರ್ಥಗಳು ಬಂದುವು. ಇಲ್ಲಿ ನಮಗೆ ಒಬ್ಬ ವಿಶ್ವಾಸಿ, ಮಾರ್ಗದರ್ಶಿ, ವೈದ್ಯ, ಗೆಳೆಯ, ತಂದೆ, ತಾಯಿ ಮತ್ತು ಭಗವಂತ ಎಲ್ಲ ಒಂದೇ ಆಗಿ ದೊರೆತರು."

ಆತ್ಮದ ಈ ಪಾರಮ್ಯವನ್ನು ಸಾಧಿಸುವುದು ಹೇಗೆ? ನಾವೂ ಅದನ್ನು ಪಡೆಯಬಹುದು ಎಂದು ಬಾಬಾ ಹೇಳುವಾಗ ನಿಜವಾದ ಅವರ ಅರ್ಥ ಏನು? ದಾತ್‌ಪೆಥೇ ಇದರ ಮೇಲೆ ಬೆಳಕು ಚೆಲ್ಲುತ್ತಾರೆ: "ಇಬ್ಬರು ವ್ಯಕ್ತಿಗಳು ಸಂಧಿಸಿದಾಗ ವಾಸ್ತವವಾಗಿ ಎರಡು ಮನೋಧರ್ಮಗಳು ಸಂಧಿಸುತ್ತವೆ. ಅಸಂಖ್ಯಾತ ಅನುಭವಗಳು, ಸಂಚಿತಗೊಂಡ ಸ್ಮರಣೆಗಳು, ಭಾವನಾತ್ಮಕ ಸಂಬಂಧಗಳು, ವಿವಿಧ ವಸ್ತುಗಳು ಮತ್ತು ಪರಿಸ್ಥಿತಿಗಳ ಕಡೆಗೆ ಒಲವು ಲೆಕ್ಕವಿಲ್ಲದಷ್ಟು ವಿಚಿತ್ರ ವರ್ತನೆಗಳು ಇವುಗಳಿಂದ ಕೂಡಿ ಅವು ಪರಸ್ಪರ ಎದುರಾಗುತ್ತವೆ. ಇವು ಹಿನ್ನೆಲೆಯಾಗಿ ಮತ್ತು ಆ ಇಬ್ಬರು ವ್ಯಕ್ತಿಗಳ ನಡುವೆ ನಡೆಯುವ ಸಂಭಾಷಣೆಯ ಉಗಮಸ್ಥಾನವಾಗಿ ಪರಿಣಮಿಸುತ್ತವೆ. ಆದರೆ ಬಾಬಾ ಯಾರೊಂದಿಗಾದರೂ ಮಾತನಾಡುತ್ತಿದ್ದರೆ, ಅವರಲ್ಲಿ ಅಂತಹ ಪೂರ್ವ ನಿರ್ದಿಷ್ಟ ಹಿನ್ನೆಲೆ ಯಾವುದೂ ಇಲ್ಲ ಎನ್ನುವುದು ಗೊತ್ತಾಗಿ ಆಶ್ಚರ್ಯವಾಗುತ್ತದೆ. ನಮ್ಮದೇ ಗೊಂದಲಗೊಳಿಸುವ ಮತ್ತು ಅಸ್ತವ್ಯಸ್ತವಾದ ಪರಿಸ್ಥಿತಿಯನ್ನು ಗೆಲ್ಲಲು ಅಗತ್ಯವಾದ ಶಕ್ತಿಯನ್ನೂ ಅವರೇ ನೀಡುತ್ತಾರೆ."

ಒಮ್ಮೆ ತನಗೆ ಸಂದರ್ಶನ ದೊರಕಬೇಕು ಎಂದು ಹಂಬಲಿಸುತ್ತಿದ್ದ ಒಬ್ಬ ವ್ಯಕ್ತಿಗೆ ಬಾಬಾ ಹೇಳಿದರು "ನಾನು ಪ್ರತಿದಿನವೂ ಒಳದನಿಯ ಮೂಲಕ ನಿನಗೆ ಸಂದರ್ಶನ ಕೊಡುತ್ತಲೇ ಇದ್ದೇನೆ. ನನಗೆ ಸಂದರ್ಶನ ಕೊಡುವುದನ್ನು ಸದಾ ನಿವಾರಿಸುತ್ತಿರುವವನು ನೀನು. ಅಂತರ್ನಿರೀಕ್ಷೆ, ನಿನ್ನನ್ನು ನಾನೆಂಬಂತೆ, ನನ್ನಲ್ಲಿ ನೋಡಲು ನೀನು ಪ್ರಯತ್ನಿಸುತ್ತಿಲ್ಲ." ಬಾಬಾ ಅವರ "ನಾನು ನಿನ್ನಲ್ಲಿದ್ದೇನೆ, ನೀನು ನನ್ನಲಿ ಇದ್ದೀಯೆ; ನಾವು ನಿಜವಾಗಿ ಒಂದೇ" ಎಂಬ ಮಾತಿನಲ್ಲಿರುವ ಸತ್ಯವನ್ನು ಅರಿತಿದ್ದೇ ಆದರೆ, ಅವರೊಂದಿಗೆ 'ಸಂದರ್ಶನ' ಎಂಬುದು ಅನಗತ್ಯ ಹೆಚ್ಚುವರಿಯಾಗಿ ಬಿಡುತ್ತದೆ. ಜೆರ್ರಿ ಬಾಸ್ ಬರೆಯುತ್ತಾರೆ. "ಅಮೆರಿಕದಿಂದ ಬಂದಿದ್ದ ಇನ್ನೊಬ್ಬ ಬಾಬಾ ಅವರಲ್ಲಿ ಪ್ರಾರ್ಥನೆ ಮಾಡಿದ. ಬಾಬಾ ಅವನೆದುರಿಗೆ ಕೆಲವು ಕ್ಷಣ ನಿಂತರು. ಹೇಳಿದರು, 'ದೊಡ್ಡವನಾಗು! ದೊಡ್ಡವನಾಗು! ವಾಸ್ತವವಾಗಿ ನೀನು ದೊಡ್ಡವನು. ... ಸಂದರ್ಶನ? ಸಂದರ್ಶನ ತುಂಬಾ ಚಿಕ್ಕದ್ದು; ಅದು ನಿನ್ನನ್ನು ನನ್ನಿಂದ ಬೇರೆಯವನನ್ನಾಗಿಸುತ್ತದೆ." ಸ್ವಲ್ಪ ಹೊತ್ತು ಬಾಬಾ ಕೊಟ್ಟ ಈ ಉತ್ತರವನ್ನು ಕುರಿತು ಆಲೋಚನೆ ಮಾಡುವುದು ಒಳ್ಳೆಯದು.

# ತೇಲಿಕೆ ಮತ್ತು ಮುಳುಗುವಿಕೆ

## ವಿಶ್ವ ಸಂದರ್ಶಕ

ಜೊನಾಥನ್ ಸ್ವಿಫ್ಟ್ ತನ್ನ ವಿಶಿಷ್ಟ ಲಕ್ಷಣವಾದ, ಕಟುವಾದ ಮಾತುಗಳಲ್ಲಿ ಬರೆದನು: "ನಿಜವಾದ ಪ್ರತಿಭಾವಂತನೊಬ್ಬ ಈ ಜಗತ್ತಿನಲ್ಲಿ ಕಾಣಿಸಿಕೊಂಡರೆ, ಈ ಗುರುತಿನಿಂದ ಅದನ್ನು ತಿಳಿದುಕೊಳ್ಳಬಹುದು - ಮೂರ್ಖರೆಲ್ಲರೂ ಅವನ ವಿರುದ್ಧ ಮಸಲತ್ತು ಮಾಡುತ್ತಾರೆ." ಅದ್ಭುತವಾದದ್ದಕ್ಕೆ ಹೊಟ್ಟೆಕಿಚ್ಚು ಅರ್ಪಿಸುವ ಉಡುಗೊರೆ ಅಪಮಾನ. ಅಜ್ಞಾನವು ವಿನಯವನ್ನಾದರೂ ತರಬಹುದು ಔದ್ಧತ್ಯವನ್ನಾದರೂ ಉಂಟುಮಾಡಬಹುದು; ಅದು ವಿಚಾರ, ಪರಿಶೋಧನೆ, ಜ್ಞಾನ ಪ್ರಾಪ್ತಿ ಈ ದಾರಿಯಲ್ಲಿ ಹೋಗುವುದಿಲ್ಲ. ಏಕೆಂದರೆ ಅದು ತನ್ನನ್ನೇ ಗುರುತಿಸಿಕೊಳ್ಳಲಾರದು. ಗರ್ವದ ಉಡುಗೆ ಧರಿಸಿ ತೇಜೋವಧೆ ಮಾಡುವ ಅಥವಾ ಕೀಳುಗಳೆಯುವ ಅಲ್ಪ ಕೆಲಸದಲ್ಲಿ ಸಂತೋಷಪಡುತ್ತದೆ.

ಡಾ. ಗೋಕಾಕ್ ಅವರು ಬಾಬಾ ಅವರನ್ನು 'ವಿಶ್ವ ಸಂದರ್ಶಕ' ಎಂದು ಬಣ್ಣಿಸುತ್ತಾರೆ. ಬಾಬಾ ಅವರೇ ತಮ್ಮ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಹೀಗೆ ಘೋಷಿಸಿದರು: "ಯಾರೊಬ್ಬರೂ, ಅವರು ಯಾರೇ ಆಗಿರಲಿ, ವಿಚಾರ ವಿಧಾನ ಯಾವುದೇ ಇರಲಿ, ಎಷ್ಟೇ ಬಲವಾದ ಪ್ರಯತ್ನ ಮಾಡಲಿ, ನನ್ನ ನಿಜವಾದ ಭವ್ಯತೆಯನ್ನು ಗ್ರಹಿಸಲಾರನು." ಅವರು ಹದಿನಾಲ್ಕನೆಯ ವಯಸ್ಸಿನ ವೇಳೆಗೇ ಅಪಪ್ರಚಾರದ ಸರಣಿಯನ್ನು ಆಕರ್ಷಿಸಿದ್ದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಅವರ ತಂದೆಯು ಮಗನ ತಲೆಗೆ ಹೊಕ್ಕಿರುವ ಭ್ರಮೆಯ ಭೂತವನ್ನು ಬಡಿದು ಓಡಿಸಲು ದೊಣ್ಣೆ ಹಿಡಿದು ನಿಂತರು. "ನೀನು ದೇವರೋ ದೈವವ್ರೋ" ಎಂದು ಗರ್ಜಿಸಿದರು. ಬಾಬಾ ಅವರು "ನಾನು ಸಾಯಿಬಾಬಾ, ಮತ್ತೆ ಬಂದಿದ್ದೇನೆ. ನನ್ನನ್ನು ಪೂಜಿಸಿ" ಎಂದು ಹೇಳಿದೊಡನೆ ಅವರ ಕೈಯಿಂದ ದೊಣ್ಣೆ ಕೆಳಕ್ಕೆ ಬಿದ್ದಿತು. ನಡೆದ ಪವಾಡಗಳು ಮಗನನ್ನು ಅವನ ಪಾಡಿಗೆ ಬಿಟ್ಟು ಬಿಡುವುದೇ ಕ್ಷೇಮ ಎಂದು ಅವರ ಮನವೊಲಿಸಿದುವು. 'ಬೆಟ್ಟಗಳ ನಡುವಣ ಪುಟ್ಟ ಹಳ್ಳಿಯಲ್ಲಿ ಉದಯಿಸಿದ ಈ ನೂತನ ತೇಜೋ ಪುಂಜದ ವಿರುದ್ಧ ಸಣ್ಣತನ, ಹೊಟ್ಟೆಕಿಚ್ಚುಗಳ ವಿಷದ ಮುಳ್ಳು ಗಾಳಿ ಸುದ್ದಿ ಮತ್ತು ಅಪಪ್ರಚಾರಗಳ ರೂಪದಲ್ಲಿ ಹರಡುವುದರ ಕಡೆಗೆ ಬಾಬಾ ಅವರ ಅಣ್ಣ ಅವನ ಗಮನ ಸೆಳೆದಾಗ ಬಾಬಾ ಅವರಿಗೆ ಉತ್ತರ ಬರೆದರು: "ಈ ಜನರನ್ನು ಖಂಡಿಸುವ ಬದಲು ಅಯ್ಯೋ ಪಾಪ ಅನ್ನಬೇಕು; ಅವರಿಗೆ ಏನೂ ತಿಳಿಯದು. ಸರಿಯಾದ ನಿರ್ಣಯಕ್ಕೆ ಬರುವ ತಾಳ್ಮೆ ಅವರಿಗಿಲ್ಲ. ಅವರಲ್ಲಿ ಕಾಮ, ಕ್ರೋಧ, ಮಾತ್ಸರ್ಯ ತುಂಬಿಕೊಂಡಿವೆ. ವಸ್ತು ಸ್ಥಿತಿಯನ್ನು ನಿಚ್ಚಳವಾಗಿ, ಪೂರ್ಣವಾಗಿ ಅವರು ನೋಡಲಾರರು. ಆದ್ದರಿಂದ ಅವರು ಬಗೆಬಗೆಯ ಅಪಪ್ರಚಾರದಲ್ಲಿ ತೊಡಗಿದ್ದಾರೆ. ನಿಜಸ್ಥಿತಿ ಅವರಿಗೆ ತಿಳಿದಿದ್ದ ಪಕ್ಷದಲ್ಲಿ ಅವರು ಹಾಗೆ ಮಾತಾಡುತ್ತಿರಲಿಲ್ಲ, ಬರೆಯುತ್ತಿರಲಿಲ್ಲ... ಜನರಿಗೆ ವಿಭಿನ್ನ ಲಕ್ಷಣಗಳಿರುತ್ತವೆ, ಮನೋ ಪ್ರವೃತ್ತಿಗಳಿರುತ್ತವೆ. ಅವರು ಒಬ್ಬರನ್ನೊಬ್ಬರು ತಮ್ಮ ಗ್ರಹಿಕೆಯ ಹಂತಕ್ಕೆ ತಕ್ಕಂತೆ ತೂಗಿ ನೋಡುತ್ತಾರೆ. ತನಗಿರುವ ಬುದ್ಧಿಯ ಮಟ್ಟಕ್ಕೆ ತಕ್ಕ ಹಾಗೆ ಚರ್ಚೆ ಮಾಡಿ ತನ್ನ ದೃಷ್ಟಿಯನ್ನು ಸಮರ್ಥಿಸಿಕೊಳ್ಳುತ್ತಾರೆ."

## ಮೂಢನಂಬಿಕೆ

ತಮ್ಮ ಗೋಳಾರ್ಧದಲ್ಲಿ ದೈವೀ ಶಕ್ತಿಯಿರುವುದನ್ನು ನೋಡಿ ಸಂತೋಷಪಡಲಾಗದ ಇನ್ನೊಂದು ವರ್ಗದ ಜನರೆಂದರೆ 'ವಿಚಾರ ವಾದಿ'ಗಳು. ಅವರಿಗೆ ದೇವರು ಎಂಬ ಕಲ್ಪನೆಯೇ ಒಗ್ಗುವುದಿಲ್ಲ. ಇಲ್ಲಿ ನೋಡಿದರೆ ಬಾಬಾ ತಾವು ದೇವರು ಎಂದು ಘೋಷಿಸುತ್ತಾರೆ, ಪ್ರತಿಯೊಬ್ಬ ವ್ಯಕ್ತಿಯೂ, ಕೊನೆಗೆ ದೇವರನ್ನು ನಿರಾಕರಿಸುವವರೂ ದೇವರೇ ಎಂದು ಹೇಳುತ್ತಾರೆ. ಅಂತಹ ಜನರು ತಮ್ಮ ಅಹಂಕಾರವನ್ನು ಅಥವಾ 'ಇಸಂ' ಅನ್ನು ಪೂಜಿಸುತ್ತಾರೆ. ಈ ಶತಮಾನದ ಸುಮಾರು ನಾಲ್ಕನೆಯ ದಶಕದ ವೇಳೆಗೆ ಅವರು ತರ್ಕಶಕ್ತಿಗೆ ವಿರಾಮ ಹಾಕಿದರು. ಅದು ಎಡಿಂಗ್‌ಟನ್, ಜೀನ್ಸ್, ಫ್ರಾಯ್ಡ್, ಯಂಗ್ ಮತ್ತು ಐನ್‌ಸ್ಟೈನ್ ಇವರು ವಿಜ್ಞಾನದ ಸೀಮಿತತಗಳನ್ನು ಎತ್ತಿ ತೋರಿಸಿದ್ದಕ್ಕಿಂತ ಮೊದಲು. ಈಗ ವಿಜ್ಞಾನವು ಬ್ರಹ್ಮಾಂಡದ ನಿಗೂಢತೆಯೆದುರಿಗೆ ಸೋತು ಕುಳಿತಿದೆ. "ಈ ವಿಶ್ವವು ಭಗವಂತನ ಒಂದು ಆಲೋಚನೆ" ಎನ್ನುತ್ತಾನೆ ಜೀನ್ಸ್. ಜೀವಕೋಶ ಮತ್ತು ಪರಮಾಣು, ದ್ರವ್ಯ ಮತ್ತು ಶಕ್ತಿ ಇವು ವಿಜ್ಞಾನದ ಮಹಾಮಹಾ ಪಂಡಿತರು ಬಹುಕಷ್ಟಪಟ್ಟು ಕಟ್ಟಿದ ತರ್ಕಸರಣಿಯೆದುರಿಗೆ, ಸಿದ್ಧಾಂತದೆದುರಿಗೆ ಒಂದಾದ ಮೇಲೊಂದರಂತೆ ಆಶ್ಚರ್ಯಗಳನ್ನು ರಾಚುತ್ತಿವೆ. ಹಿಂದೊಮ್ಮೆ ಬಹಳ ಗೌರವ ಪಡೆದಿದ್ದ ಬುದ್ಧಿಶಕ್ತಿ ಎಂಬ ಗುಣವನ್ನು ಜೀವ ವಿಜ್ಞಾನ, ಮನೋ ವಿಜ್ಞಾನ ಮತ್ತು ಭೌತ ವಿಜ್ಞಾನ ಕ್ಷೇತ್ರಗಳ ಅಗ್ರಶ್ರೇಣಿಯ ಚಿಂತಕರು ಕೇವಲ ಮೂಢನಂಬಿಕೆ ಎಂದು ತಳ್ಳಿ ಹಾಕುತ್ತಿದ್ದಾರೆ.

ಪಾಲ್ ಬ್ರಂಟನ್ ಬರೆಯುವ ಹಾಗೆ, "ಯಾರಾದರೊಬ್ಬನು ಉದ್ದೇಶಕ್ಕಿರುವ ಎಲ್ಲಾ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿದ ನಂತರವೂ ಎಲ್ಲವನ್ನೂ ನಿರ್ದೇಶಿಸುವ ಉನ್ನತ ಶಕ್ತಿಯೊಂದಿದೆ ಎಂದು ನಂಬಲು ವಿಫಲನಾದರೆ, ಅವನು ನಾಸ್ತಿಕನಾಗುತ್ತಾನೆ. ಅದೇಕೆಂದರೆ, ಅಂಥವನು ಸಾಕ್ಷ್ಯಾಧಾರ ಎಂದು ಪರಿಗಣಿಸುವ ಮನಸ್ಸು ಆಗಲೇ ಪೂರ್ವಾಗ್ರಹದಿಂದ ಮುಚ್ಚಿ ಹೋಗಿರುತ್ತದೆ, ಅಥವಾ ಭಾವೋದ್ವೇಗದಿಂದ ಸಮತೋಲನ ಕಳೆದುಕೊಂಡಿರುತ್ತದೆ, ಯಾತನೆ ಅನುಭವಿಸಿ ಅನುಭವಿಸಿ ಅಸ್ತವ್ಯಸ್ತವಾಗಿರುತ್ತದೆ, ಅಥವಾ ಬೇರೆ ಯಾವುದೇ ಕಾರಣದಿಂದ ದೋಷಪೂರಿತವಾಗಿರುತ್ತದೆ. ಪಕ್ಷ ನಂಬಿಕೆಗಳ ವಿರುದ್ಧವಾಗಿ ಪ್ರತಿಭಟಿಸುವುದರ ಮೂಲಕ ನಾಸ್ತಿಕತೆ ಜೀವಂತವಾಗಿ ಉಳಿಯುತ್ತದೆ. ಅದು ಬಾಲ್ಯ ಕಾಲದ ದೃಢತೆಯ ಕುರುಹಾಗುತ್ತದೆ. ಕೆಲವರು ಈ ಪಂಥವನ್ನು ಬೆಳೆಸುತ್ತಾರೆ, ಕಾರಣ, ಪ್ರಸ್ತುತ ಕಾಲಕ್ಕೆ ಹೊಂದದೆಂದು ಪರಿಗಣಿಸಲಾದ ನಿಲುವನ್ನು ಒಪ್ಪಿಕೊಳ್ಳುವ ಧೈರ್ಯ ಅವರಿಗಿರುವುದಿಲ್ಲ. ಇತರರೂ ಹಾಗೆಯೇ ವರ್ತಿಸುವುದಕ್ಕೆ ಕಾರಣವೂ ಇದೆ. ತಾವೇ ಅಸಂತುಷ್ಟರಾಗಿರುವುದರಿಂದ ಇತರರಿಗೆ ಯಾವುದೇ ಸಂತೋಷ ದೊರಕಿದರೂ ಅದನ್ನು ಹಾಳು ಮಾಡಲು ಅವರು ಬಯಸುತ್ತಾರೆ.

ಒಮ್ಮೆ ವಿಚಾರವಾದಿಗಳೆನಿಸಿಕೊಂಡವರು ಕೆಲವರು ಭಾರೀ ಬಾಜಾಬಜಂತ್ರಿಯೊಂದಿಗೆ ಬಾಬಾ ಅವರನ್ನು 'ತನಿಖೆಗೊಳಪಡಿಸಲು' ಒಂದು ಯೋಜನೆ ಹಾಕಿಕೊಂಡರು. ಅದಕ್ಕಾಗಿ ಕೆಲವು ಪರೀಕ್ಷೆಗಳನ್ನೂ ರೂಪಿಸಿದರು. ಅವುಗಳನ್ನು ನಿಯತಕಾಲಿಕ ಪತ್ರಿಕೆಗಳಲ್ಲಿ ಪ್ರಕಟಿಸಿದರು. "ಬಾಬಾ ಧರಿಸಿರುವ ನಿಲುವಂಗಿಯನ್ನು ತೆಗೆಯಿರಿ ಎಂದು ಹೇಳುತ್ತೇವೆ. ಇನ್ನು ಅವರ ತಲೆಗೂದಲು ಬಗ್ಗೆ ಹೇಗೆ? ಅದೂ ಮೋಸವಿರಬಹುದು; ಕೆಲವರು ಅದು ಮೋಸವೆಂದೇ ಹೇಳುತ್ತಾರೆ. ಆದ್ದರಿಂದ ಅದನ್ನು

ನೋಡಿಬಿಡೋಣ. ಮೈಮೇಲೆ ಎಲ್ಲಾದರೂ ಏನನ್ನಾದರೂ ಬಚ್ಚಿಟ್ಟುಕೊಂಡಿರಬಹುದು, ಪರೀಕ್ಷಿಸಲು ಲೋಹ ಶೋಧಕಗಳನ್ನು ಬಳಸಬೇಕಾಗಬಹುದು."

ಹಿಂದೊಮ್ಮೆ ಬಹಿರಂಗವಾಗಿ ಸತ್ಯಸಾಯಿಬಾಬಾ ಅವರನ್ನು ಟೀಕಿಸಿ ಪ್ರಶ್ನಿಸಿದ್ದ ಬ್ಲಿಟ್ಜ್ ಪತ್ರಿಕೆಯ ಸಂಪಾದಕ ಆರ್ ಕೆ ಕರಂಜಿಯಾ ಅವರು ಈ ಪ್ರಕಟಣೆಯನ್ನು ಕುರಿತು 'ಹಾಸ್ಯಾಸ್ಪದ ಮತ್ತು ಅಪಮಾನಕರ' ಎಂದು ಉದ್ಗರಿಸಿದರು. ಪರಿಶೋಧಕರ ಅನುಯಾಯಿಗಳಾಗಿದ್ದವರು ಕರಂಜಿಯಾ ಅವರನ್ನು ಖಂಡಿಸಿದರು, ಮೂದಲಿಸಿದರು. ಹಣ ಕೊಟ್ಟು ಅವರನ್ನು ಕೊಂಡುಕೊಳ್ಳಲಾಗಿದೆ, ಲಂಚ ನೀಡಲಾಗಿದೆ, ವಶೀಕರಿಸಲಾಗಿದೆ, ಅಥವಾ ಬಾಬಾ ಅವರನ್ನು ಪರಿವರ್ತಿಸಿಬಿಟ್ಟಿದ್ದಾರೆ ಎಂದು ಕಿಡಿಕಾರಿದರು.

ಅಂತಹ ವ್ಯಕ್ತಿಗಳ ದಾಳಿಗಳು ನಮಗೆ ಡಾನ್ ಕ್ವಿಕ್ಸೋಟ್ ಮತ್ತು ಅವನ ಜೊತೆಗಾರ ಸ್ಯಾಂಕೋಪಾಂಜಾರ ಸಾಹಸಗಳನ್ನು ನೆನಪಿಗೆ ತರುತ್ತವೆ. 'ವಿಚಾರ ಶಕ್ತಿ' ಎಂದು ಯಾವುದನ್ನು ನಾವು ಕರೆಯುತ್ತೇವೆಯೋ ಅದು ಒಂದು ಮನಸ್ಥಿತಿ ಮಾತ್ರ ಎಂಬುದು ಈಗ ಸ್ಥಾಪಿತವಾಗಿದೆ. ಅದು ನ್ಯಾಯವಲ್ಲದ ಇಚ್ಛೆ, ಅನಿಚ್ಛೆಗಳಿಂದ ಕಲುಷಿತವಾಗುತ್ತದೆ. ಪ್ರಚಾರದಿಂದ ಅದನ್ನು ವಿರೂಪಗೊಳಿಸಬಹುದು ಕೂಡ. ಅದು ಎಷ್ಟು ಮಟ್ಟಿಗೆ ಸ್ವ- ಪ್ರೇಮದೊಂದಿಗೆ ಗಂಟುಗೊಳ್ಳುತ್ತದೆಂದರೆ, ಅಂತಹ ವ್ಯಕ್ತಿಯು ಒಂದು ವಸ್ತುವನ್ನು ಹೇಗೆ ನೋಡಬೇಕೆಂದು ಇಚ್ಛಿಸುತ್ತಾನೋ ಹಾಗೆ ಕಾಣುತ್ತಾನೆ. ಬಾಲ್ಯಾನುಭವಗಳು ಕೂಡ ವ್ಯಕ್ತಿಗಳ, ತತ್ವಗಳ ಮತ್ತು ಕಾರ್ಯವಿಧಾನಗಳ ಬಗೆಗೆ ಪೂರ್ವಾಗ್ರಹವನ್ನು ಉಂಟುಮಾಡುತ್ತದೆ. ಆದರೆ ಇವೆಲ್ಲಕ್ಕಿಂತ ಮುಖ್ಯವಾದ ಇನ್ನೊಂದು ದೋಷವಿದೆ. ಅದೇನೆಂದರೆ, ನಮ್ಮ ವಿಚಾರಶಕ್ತಿಯು ಆತ್ಮಸಾಕ್ಷಿಯನ್ನು ಸಾಂತ್ವನಗೊಳಿಸಿ ಅಹಂ ಅನ್ನು ಅಪರಾಧ ಭಾವನೆಯಿಂದ ರಕ್ಷಿಸಲೋಸುಗವಾಗಿ ಪೂರ್ವಾಗ್ರಹಗಳನ್ನು ತರ್ಕಸಮ್ಮತ ಗೊಳಿಸಿಬಿಡುವ ಪ್ರವೃತ್ತಿಯನ್ನು ಹೊಂದಿದೆ.

'ನಿಲುವಂಗಿಯನ್ನು ತೆಗೆಸುವುದು... ಕೂದಲನ್ನು ಕೀಳುವುದು... ದೇಹದ ಮೇಲೆ ಲೋಹ ಶೋಧಕವನ್ನು ಹಾಯಿಸುವುದು...!' ಈ ಸ್ಯಾಂಕೋ ಪಾಂಜಾಗಳನ್ನು ನೋಡಿ ಮರೆಯಲ್ಲಿ ನಕ್ಕವರು ಹಲವರು. ಡಾ. ಓಸಿಸ್‌ನ ಈ ಹೇಳಿಕೆ ಹಲವರಿಗೆ ತಿಳಿದಿತ್ತು: "ಬೇರೆ ಎಲ್ಲ ಕ್ಷೇತ್ರಗಳಲ್ಲಿ ಇರುವ ಹಾಗೆಯೇ ವೈಜ್ಞಾನಿಕ ವಲಯದಲ್ಲೂ ಕೂಡ ಜಡತೆಯಿದೆ, ಸಂಪ್ರದಾಯ ಶರಣತೆಯಿದೆ, ಹೊಸದೆನಿಸುವ ಯಾವುದನ್ನೇ ಆಗಲಿ ವಿರೋಧಿಸುವ ಗುಣವಿದೆ." ಆದರೆ ಈ ಸಮಾಜದೊಳಗಿನಿಂದ ಅಂಥದೊಂದು ವ್ಯಕ್ತಿತ್ವ ಮೂಡಿ ಬರುತ್ತದೆಂದು ಯಾರೂ ನಿರೀಕ್ಷಿಸಿರಲಾರರು.

ಬಾಬಾ ಹೇಳುತ್ತಾರೆ: "ಭೌತಿಕ ನಿಯಮಗಳಿಂದ ಬದ್ಧವಾಗಿರುವ ವಿಜ್ಞಾನವು ಹೇಗೆ ತಾನೆ ಭೌತಾತೀತ ಶಕ್ತಿಯನನಉ ಪರೀಕ್ಷಿಸಬಲ್ಲದು? ಏಕೆಂದರೆ ಅದು ವಿಜ್ಞಾನದ ವ್ಯಾಪ್ತಿ ಮತ್ತು ಅರಿವುಗಳ ವಲಯದಿಂದ ಬಹುದೂರದಲ್ಲಿದೆ. ...ನಾನು ಮತ್ತೆ ಮತ್ತೆ ಹೇಳುತ್ತಲೇ ಇದ್ದೇನೆ. ನನ್ನನ್ನು ಅರ್ಥ ಮಾಡಿಕೊಳ್ಳಬೇಕೆಂದು ಬಯಸುವವರಿಗೆ ಇಲ್ಲಿ ಸ್ವಾಗತವಿದೆ. ಪರಿಶೋಧನೆಯ ಹಿಂದಿನ ಮನೋಭಾವ ಇಲ್ಲಿ ಮುಖ್ಯ. ವಿದೇಶದಿಂದ ಪ್ಯಾರಾಸೈಕಾಲಜಿಸ್ಟರು ಇಲ್ಲಿಗೆ ಬಂದಿದ್ದಾರೆ, ನನ್ನನ್ನು ಇತ್ಯಾತ್ಮಕವಾದ, ರಚನ ಶೀಲವಾದ ಮನೋಧರ್ಮದಿಂದ ಪರೀಕ್ಷಿಸಿದ್ದಾರೆ. ಅವರು ಕೀಳುಮಾತುಗಳ ಪತ್ರಗಳನ್ನು ಬರೆಯುವುದಿಲ್ಲ, ಬಹಿರಂಗವಾಗಿ ಸವಾಲು ಹಾಕುವುದಿಲ್ಲ. ಆದರೆ ಇವರು (ಈ

'ಪರಿಶೋಧಕ'ರೆನಿಸಿಕೊಳ್ಳುವವರು) ಹೊರಟ ರೀತಿಯೇ ತಪ್ಪಾಗಿತ್ತು. ಆದ್ದರಿಂದಲೇ ಅವರನ್ನು ನಾನು ಸಂಧಿಸಲೊಪ್ಪಲಿಲ್ಲ. ಜನರು ಬರಬೇಕು, ನೋಡಬೇಕು, ಕೇಳಬೇಕು, ಗಮನಿಸಬೇಕು ಆಮೇಲೆ ನನ್ನನ್ನು ಅನುಭವಕ್ಕೆ ತಂದುಕೊಳ್ಳಬೇಕು ಎಂಬುದೇ ಇನ್ನ ಇಚ್ಛೆ. ಆಗ ಮಾತ್ರವೇ ಅವರಿಗೆ ಅವತಾರವನ್ನು ಅರಿತು ಮೆಚ್ಚುವ ಶಕ್ತಿ ಬರುತ್ತದೆ."

## ಸಾಯಿ ನಿಮಜ್ಜನ

ಡಾ. ಕಾರ್ಲಿಸ್ ಓಸಿಸ್ ಬಹು ಪ್ರತಿಷ್ಠಿತ ಅಮೆರಿಕನ್ ಸೊಸೈಟಿ ಫಾರ್ ಸೈಕಿಕಲ್ ರೀಸರ್ಚ ಸಂಸ್ಥೆಯ ಸಂಶೋಧನ ನಿರ್ದೇಶಕರು. ಅವರು ಮತ್ತು ಅವರ ಮಿತ್ರ ಹಾಗೂ ಸಹೋದ್ಯೋಗಿ ಡಾ. ಇ. ಹೆರಾಲ್ಡ್‌ಸನ್ ಭಾರತಕ್ಕೆ ಮೂರು ಸಾರಿ ಬಂದಿದ್ದರು. ಬಾಬಾ ಅವರೊಂದಿಗೆ ದೀರ್ಘಕಾಲ ಸಂಪರ್ಕವಿರಿಸಿಕೊಂಡಿದ್ದ ಅನೇಕ ಜನರನ್ನು ಭೇಟಿ ಮಾಡಿದರು. ಮಾಹಿತಿ ಸಂಗ್ರಹಣೆಗಾಗಿ ಸಹಸ್ರಾರು ಮೈಲಿಗಳ ಪಯಣ ಮಾಡಿದರು. ತಿಂಗಳುಗಟ್ಟಲೆ ಪ್ರಶಾಂತಿ ನಿಲಯದಲ್ಲಿ ತಂಗಿದರು- ನೋಡಿದರು, ಕೇಳಿದರು, ಅಧ್ಯಯನ ಮಾಡಿದರು, ಗಮನಿಸಿದರು, ಅನುಭವಿಸಿದರು. ಡಾ. ಓಸಿಸ್ ಬರೆಯುತ್ತಾರೆ, "ನಮಗೆದುರಾದ ಅಗಾಧ ಶಕ್ತಿ, ಅದ್ಭುತ ಪವಾಡ ಪರಿಣಾಮ ಎಂಥದಿತ್ತೆಂದರೆ ಬಹಳ ಅನುಭವಿ ಪ್ಯಾರಾ ಸೈಕಾಜಿಲಸ್ಟರಾದ ನಾವೂ ದಿಗ್ಭ್ರಮೆಗೊಳ್ಳುವಂತಾಯಿತು. ನಾನು ಇಪ್ಪತ್ತೈದು ವರ್ಷಗಳ ಕಾಲ ಸಕ್ರಿಯ ಸಂಶೋದನೆಯಲ್ಲಿ ನಿರತನಾಗಿದ್ದೇನೆ, ವ್ಯಾಪಕವಾಗಿ ಪ್ರವಾಸ ಮಾಡಿದ್ದೇನೆ. ಆದರೆ ಬಾಬಾ ಪ್ರತಿ ದಿನವೂ ಮಾಡುವ ಪವಾಡಗಳಂತೆ ಆಧ್ಯಾತ್ಮಿಕ ಸತ್ಯವನ್ನು ಸ್ಪಷ್ಟವಾಗಿ ಶಕ್ತಿಯುತವಾಗಿ ತೋರುವ ಇನ್ನೊಂದು ಶಕ್ತಿಯನ್ನು ಎಲ್ಲೂ ಕಾಣಲಿಲ್ಲ."

ಬಾಬಾ ಹೇಳುತ್ತಾರೆ, "ಮುತ್ತುಗಳನ್ನು ಪಡೆಯಬೇಕೆಂದು ಬಯಸುವವರು ಆಳಕ್ಕೆ ಮುಳುಗಬೇಕು. ಮೇಲು ಮೇಲೆ ತೇಲಾಡುತ್ತಾ ಕೈಕಾಲು ಬಡಿಯುತ್ತಾ ಸಾಗರದಲ್ಲಿ ಸಂಪತ್ತಿಲ್ಲ ಎಂದು ಕಿರಿಚುವುದರಿಂದ ಏನೂ ಪ್ರಯೋಜನವಿಲ್ಲ." ಡಾ. ಸ್ಯಾಂಡ್‌ವಿಸ್ ಪ್ರಶಾಂತಿ ನಿಲಯಕ್ಕೆ ಬಂದರು, ಈ ಮಹಾಶಕ್ತಿಯಲ್ಲಿ ಏನೂ ಹುರುಳಿಲ್ಲವೆಂದು ಸಮರ್ಥಿಸಬೇಕೆಂದು ಆಳಕ್ಕೆ ಮುಳುಗಿದರು. ಆದರೆ ಅವರಿಗೇ ಆಶ್ಚರ್ಯವಾಗುವಂತೆ ಅವರ ಬೊಗಸೆ ತುಂಬ ಮುತ್ತುಗಳು ದೊರಕಿದುವು. ಸಮೂಹ ವಶೀಕರಣ, ಸಮೂಹ ಸನ್ನಿ, ಅಪಾಯಕಾರೀ ಪ್ರಭಾವ ಇತ್ಯಾದಿ ಅವರಿಗಿದ್ದ ಕಲ್ಪನೆಗಳು ಬಹು ಬೇಗ ಕಳಚಿ ಬಿದ್ದುವು. ಪರಿಶೋಧನೆಯ ಪ್ರವಾಸ ಕೈಗೊಳ್ಳುವ ಮೊದಲು ಅವರು ಹೀಗೆ ಬರೆದಿದ್ದರು: "ಅಂತಹ ಘಟನೆಗಳನ್ನು ನೇರವಾಗಿ ನಾನೇ ಗಮನಿಸಿ, ಅವುಗಳ ಮನಶ್ಶಾಸ್ತ್ರೀಯ ತಂತ್ರಗಳನ್ನು ಪರಿಶೋಧಿಸುವುದು ನನಗೆ ಬಹಳ ಆಕರ್ಷಕವಾಗಿ ತೋರಿತು. ಬಾಬಾ ಅವರನ್ನು ಖುದ್ದಾಗಿ ನೋಡುವಾಗ, ಯೇಸುಕ್ರಿಸ್ತನು ನಂಬಲರ್ಹವಲ್ಲದ ಕತೆಗಳನ್ನು ಹರಡಿದ ಸಂದರ್ಭ ಹೇಗಿದ್ದಿರಬಹುದು ಎಂದು ಕಲ್ಪಿಸಿಕೊಳ್ಳಲು ನನಗೆ ಸಾಧ್ಯವಾಗುತ್ತದೆ." ಅದೇ ಸ್ಯಾಂಡ್‌ವಿಸ್ ಈಗ ಸುಪ್ರಸಿದ್ಧವಾಗಿರುವ 'ಸಾಯಿಬಾಬಾ' ಎಂಬ ಪುಸ್ತಕ ಬರೆದಿದ್ದಾರೆ. ಅದರ ಕೊನೆಯ ಪುಟ್ಟದಲ್ಲಿ ಅವರು ತಮಗೆ ದೊರೆತ 'ಮುತ್ತು'ನ್ನು ವರ್ಣಿಸಿದ್ದಾರೆ. ಹೀಗೆ: "ಅವರೊಂದಿಗೆ ವೈಯಕ್ತಿಕ ಮಟ್ಟದಲ್ಲಿ ಗೆಳೆತನವನ್ನು ಬೆಳೆಸಿಕೊಳ್ಳಲು ಇನ್ನೂ ಸಾಧ್ಯವಿರುವಾಗಲೇ ಅವರ ಅತೀ ಸಮೀಪಕ್ಕೆ ಹೋಗುವಂತಾದುದು ನನ್ನ ಸುದೈವ. ಅವರ ಶ್ರೇಷ್ಠತೆಯ ಕುರುಹುಗಳನ್ನು ಅತ್ಯಂತ ಸನಿಹದಲ್ಲಿ, ಅತಿ ಆತ್ಮೀಯವಾಗಿ ನೋಡಲು ಸಾಧ್ಯವಾಯಿತು.

ಆದರೆ ಬಹು ಬೇಗನೆ ಬಾಬಾ ಎಲ್ಲೋ ದೂರದಿಗಂತದಲ್ಲಿ ಕಾಣಿಸುವ ಒಂದು ಕಿತ್ತಳೆ ಬಣ್ಣದ ಚುಕ್ಕೆಯಂತಾಗುತ್ತಾರೆ ಎನಿಸುತ್ತದೆ. ಕಾತರ ತುಂಬಿದ ಮಿಲಿಯಗಟ್ಟಲೆ ಮುಖಗಳು ಅವರನ್ನು ಸುತ್ತಿಕೊಂಡಿರುತ್ತವೆ. ಹಿಂದೊಮ್ಮೆ ಪ್ರತಿ ದಿನದ ವೈಯಕ್ತಿಕ ಸಂಪರ್ಕದಿಂದ ಅವರ ಸಾನ್ನಿಧ್ಯದ ಮಾಧುರ್ಯವನ್ನು ಸವಿಯುವ ಸದವಕಾಶ ಪಡೆದಿದ್ದ ಅವರ ಗ್ರಾಮದ ಜನರ ಹಾಗೆಯೇ ನಾನೂ ಕೂಡ ಮುಂದೆ ಒಂದು ದಿನ ಎಲ್ಲೋ ದೂರದಲ್ಲಿ ನಿಂತು ಅವರ ದರ್ಶನ ಪಡೆಯಬೇಕಾಗುತ್ತದಲ್ಲ ಎಂದು ವಿಷಾದವಾಗುತ್ತದೆ.

ಕರಂಜಿಯ ಅವರು ಕೂಡ ಬಾಬಾ ಅವರ ಭಕ್ತರು ಮತ್ತು ವಿರೋಧಿಗಳು ಇಬ್ಬರೂ ಕೊಟ್ಟ ಸೂಚನೆಗಳಿಂದ ಪ್ರೇರಿತರಾಗಿ ಕೊನೆಗೆ ಸ್ಯಾಂಡ್‌ವಿಸ್‌ರಂತೆ 'ಆಳಕ್ಕೆ ಮುಳುಗ' ಬೇಕೆಂದು ನಿರ್ಧಾರ ಕೈಗೊಂಡರು. ಈಗ ಅವರ ನೆನಪು ಮಾಡಿಕೊಳ್ಳುತ್ತಾರೆ: "ಎಲ್ಲ ಟೀಕೆ, ವಿಮರ್ಶೆಗಳನ್ನು ನೇರವಾಗಿ ಬಾಬಾ ಅವರಿಗೇ ಹೇಳಿ, ಅವರಿಂದ ಉತ್ತರ ಪಡೆಯಬೇಕೆಂಬ ಇರಾದೆಯಿಂದ ನಾನು ಪುಟ್ಟಪರ್ತಿಗೆ ಹೋದೆ. ...ನಮ್ಮ ಭೇಟಿ ಅದ್ಭುತವಾಗಿತ್ತು, ನನ್ನ ಪೂರ್ವಕಲ್ಪನೆಗಳನ್ನು ಹುಡಿಗುಟ್ಟುವಂತಿತ್ತು. ಶ್ರೀ ಸತ್ಯಸಾಯಿಬಾಬಾ ನನಗೆ ಆತ್ಮಸಾಕ್ಷಿಯುಳ್ಳ ವಿಜ್ಞಾನಿಯಾಗಿ ಕಾಣಿಸಿದರು. ಮಾನವನಿಗೆ ಅವನ ಅಂತರ್ಯದಲ್ಲಿರುವ ಪರಮಾತ್ಮನನ್ನು ಪ್ರೇಮ, ಭಕ್ತಿ, ತ್ಯಾಗ, ನಿಸ್ವಾರ್ಥಗಳ ಮೂಲಕ ಸಾಕ್ಷಾತ್ಕರಿಸಿ ಕೊಳ್ಳುವುದು ಹೇಗೆ ಎಂಬುದನ್ನು ಮಾನವ ಕೋಟಿಗೆ ಅವರು ತೋರಿಸಿಕೊಡುತ್ತಿದ್ದರು.

ಪಾಶ್ಚಾತ್ಯ ತತ್ವ ಚಿಂತನೆಯು ಸೃಷ್ಟಿಸಿರುವ ಮಾನವ- ದೇವ, ಪುರುಷ- ಪುರಷೋತ್ತಮ ಎಂಬೀ ಬಗೆಯ ದ್ವಿಭಜನೆಗಳು ಹಿಂದೂ ಶಾಸ್ತ್ರಗಳಲ್ಲಿ ಇಲ್ಲ. ಭಗವಂತನು ಮಾನವನಲ್ಲಿ, ಮಾನವನು ಭಗವಂತನಲ್ಲಿ ಲೀನನಾಗುವುದೀಗ ಧರ್ಮದ ತಳಹದಿ ಎಂದು ಅವು ಬಣ್ಣಿಸುತ್ತವೆ. ಬಾಬಾ ಈ ತತ್ವವನ್ನು ಮೂರ್ತಿಕರಿಸಿದ್ದಾರೆ. ...ಬಾಬಾ ಅವರ ಪವಿತ್ರ ಉದ್ದೇಶವು ನಮ್ಮನ್ನು ವಿಶ್ವನಾಟಕದ ಆಧ್ಯಾತ್ಮಿಕ ಮಹತ್ವದಲ್ಲಿ ಆಳವಾಗಿ ಮುಳುಗುವಂತೆ ಮಾಡುತ್ತದೆ. ಮೊದಲು ಅವನನ್ನು ಭೌತವಾದಿ, ಅಹಂಕಾರ ಬದ್ಧ ರೂಪದಿಂದ ಕಳಚಿಸಿ, ಭಗವಂತನ ರೂಪಕ್ಕೆ, ಹೋಲಿಕೆಗೆ ಬರುವಂತೆ ಮಾಡುತ್ತದೆ."

ಕರಂಜಿಯಾ ಮುಂದುವರಿಂದು ಬಾಬಾ ಒಮ್ಮೆ ತಮ್ಮ ದಿವ್ಯೋಪನ್ಯಾಸದ ಪೀಠಿಕೆಯಾಗಿ ಹಾಡಿದ ಒಂದು ತೆಲುಗು ಪದ್ಯದ ಇಂಗ್ಲೀಷ್ ಆವೃತ್ತಿಯನ್ನು ಉದ್ಧರಿಸುತ್ತಾರೆ:

ನಾನು ನಾಟ್ಯಾಚಾರ್ಯ
ನಾನು ನಟರಾಜ, ನೃತ್ಯದ ಪ್ರಭು.
ನೀವೆಲ್ಲ ನನ್ನ ಶಿಷ್ಯರು.
ನಿಮಗೆ ನೃತ್ಯದ ಪ್ರತಿಯೊಂದು ಹೆಜ್ಜೆಯನು
ಕಲಿಸುವ ಕಷ್ಟವೇನೆಂಬುದು ನನಗೆ ಮಾತ್ರ ಗೊತ್ತು.

ಈ ಪದ್ಯವು ವ್ಯಕ್ತ ಪಡಿಸುವ ನೋವಿನ ವಿಶ್ವ ಆಯಾಮಗಳನ್ನು ಕುರಿತು ಆಲೋಚನೆ ಮಾಡುತ್ತಾ ಕರಂಜಿಯಾ ಬರೆಯುತ್ತಾರೆ, "ಮಾನವ ಆರ್ತತೆಯ ಭಾರವನ್ನೂ, ಭವ್ಯತೆಯನ್ನೂ ಹೊರುವ

ವ್ಯಕ್ತಿಯ ಎದುರಾಗಿ ಕೆಲವು ತಪ್ಪುದಾರಿ ಹಿಡಿದ ಜನರು ಅಪಪ್ರಚಾರ ಮಾಡುತ್ತ ಹೊರಟರೆ ಅದು ಅವರಿಗೆ ಮುಟ್ಟುತ್ತದೇನು?" ಯೇಸುವು ಶಿಲುಬೆಯ ಮೇಲಿಂದ ಎಷ್ಟು ಸರಳವಾಗಿ, ಸಹಜವಾಗಿ 'ತಾವೇನು ಮಾಡುತ್ತಿದ್ದೇವೆಂಬುದು ತಿಳಿಯದ ನಿಂದಕರನ್ನು ಕ್ಷಮಿಸಬೇಕೆಂದು ಕೇಳಿದಷ್ಟೇ ಸರಳವಾಗಿ, ಸಹಜವಾಗಿ ಬಾಬಾ ನಿಂದಕರನ್ನೂ ಆಶೀರ್ವದಿಸುತ್ತಾರೆ.

ಮನುಷ್ಯನೂ ದೈವಿಕನಾಗಿದ್ದಾನೆ ಎಂದು ಬಾಬಾ ಸ್ಥಿರೀಕರಿಸುವುದು ಕೆಲವರಿಗೆ ಹಿಂಸೆಯುಂಟುಮಾಡಬಹುದು. ಅಂಥವರಿಗೊಂದು ಪ್ರಶ್ನೆ ಭಗವಂತನು ಸರ್ವ ವ್ಯಾಪಿಯಾಗಿದ್ದಾನೆಂದ ಮೇಲೆ ಅವನು ಮನುಷ್ಯನಲ್ಲಿ ಇರಲಾರನೆ? ಅವರು ಬಡವರನ್ನು ಎಷ್ಟು ಪ್ರೀತಿಯಿಂದ ನೋಡುತ್ತಾರೋ ಶ್ರೀಮಂತರನ್ನೂ ಅಷ್ಟೇ ಪ್ರೀತಿಯಿಂದ ನೋಡುವುದನ್ನು ಕಂಡು ಮುಜುಗರ ಪಡುವವರಿಗೆ ಉತ್ತರ, 'ಅವರು ನನ್ನ ಬಳಿಗೆ ವ್ಯಥಿತ ಹೃದಯಗಳನ್ನೂ, ರೋಗಗ್ರಸ್ತ ಮನಸ್ಸುಗಳನ್ನೂ ತರುತ್ತಾರೆ. ಅವರು ತಮ್ಮಲ್ಲಿರುವ ಧನವನ್ನೂ, ಶಕ್ತಿಯನ್ನೂ ಸೇವೆಯೇ ಮೊದಲಾದ ಆಧ್ಯಾತ್ಮಿಕ ಉದ್ದೇಶಗಳಿಗಾಗಿ ಬಳಸಬೇಕೆಂದು ಹೇಳಿ ಗುಣಪಡಿಸುತ್ತೇನೆ." ತಮ್ಮ ಅಭಿರುಚಿಗನುಗುಣವಾದ ಒಂದು ಪವಾಡವನ್ನು ತೋರಿಸುವಂತೆ ಕೇಳುವವರು ಮೊದಲು ಅರ್ಥಮಾಡಿಕೊಳ್ಳಬೇಕಾದದ್ದು, ಬಾಬಾ 'ರಂಗ ಪ್ರದರ್ಶಕ'ರಲ್ಲ ಎಂಬುದನ್ನು ನಾವು 'ಪವಾಡ' ಯಾವುದನ್ನು ಕರೆಯುತ್ತೇವೋ ಅದು ಅವರ ದಿವ್ಯ ಪ್ರೇಮವು ಹರಳುಗಟ್ಟಿದ ಅಭಿವ್ಯಕ್ತಿ ಅಷ್ಟೇ. ಅವರೇ ವಿವರಿಸುತ್ತಾರೆ, "ಭಕ್ತರು ಧರಿಸಬಹುದಾದ ವಸ್ತುಗಳನ್ನು ನಾನು ಭಕ್ತರಿಗೆ ಕೊಡುತ್ತೇನೆ. ಅವುಗಳನ್ನು ಧರಿಸುವುದರಿಂದ ಅವರು ತಮ್ಮ ಜೀವಪರ್ಯಂತ ನನ್ನೊಂದಿಗೆ ಸಂಪರ್ಕವಿಟ್ಟುಕೊಳ್ಳಬಹುದು."

ಬಹುತೇಕ ಪ್ರಶ್ನೆಗಳು ಮತ್ತು ಸಂದೇಹಗಳು ಹುಟ್ಟುವುದ ಜಾಣತನದಿಂದ. ಆಲ್ಡಸ್ ಹಕ್ಸ್ಲೀ ಹೇಳುವಂತೆ ವಿಚಾರವನ್ನು "ಆತ್ಮವಾಗಿ ಆತ್ಮದಿಂದ ರೂಪುಗೊಳಿಸುವುದಕ್ಕೆ ಅನುಕೂಲಕರವಾದ ಆಂತರಿಕ ಹಾಗೂ ಬಾಹ್ಯ ಪರಿಸ್ಥಿತಿಗಳನ್ನು ಸೃಷ್ಟಿಸುವುದಕ್ಕಾಗಿ ಬಳಸಲಾಗುತ್ತದೆ." ಹಕ್ಸ್ಲೀ ಮುಂದುವರಿದು, "ಬುದ್ಧಿ ಶಕ್ತಿಯು ನಮಗೆ ತಂತ್ರಜ್ಞಾನವನ್ನೂ ಶಕ್ತಿಯನ್ನೂ ನೀಡಿದೆ. ಆದ್ದರಿಂದ, ಸಮಾಜ ವ್ಯವಸ್ಥೆ, ವಿಶ್ವಶಾಂತಿ, ವೈಯಕ್ತಿಕ ಆನಂದಗಳನ್ನು ಸಾಧಿಸಲು ನಾವು ಇನ್ನೂ ಇನ್ನೂ ಬುದ್ಧಿವಂತರಾಗುತ್ತಲೇ ಹೋಗಬೇಕಾಗುತ್ತದೆ. ಈ ಮಾತಿಗೆ ವಿರುದ್ಧವಾದ ಸಾಕ್ಷ್ಯಾಧಾರಗಳಿದ್ದರೂ ನಾವು ಅದನ್ನು ನಂಬುತ್ತೇವೆ."

ಭಗವಾನರು ಒಂದೇ ಸಮನೆ ಉಪದೇಶಿಸುತ್ತಿರುವ ಹಾಗೆ ನಾವು ಈಗಿಂದೀಗ ನಿರ್ಧಾರ ಮಾಡೋಣ. ವಿಚಾರವನ್ನು ಜಾಣತನವಾಗಿ ವಿರೂಪಗೊಳಿಸಲೆತ್ನಿಸದೆ ಆತ್ಮವಾಗಿ ರೂಪಾಂತರಗೊಳಿಸುವುದರ ಮೂಲಕ ನಮ್ಮನ್ನು ನಾವು ಅರಿಯೋಣ. ನಮ್ಮ ರಹಸ್ಯವನ್ನು ಬಿಡಿಸಲು ನಾವು ನಿರ್ಧರಿಸೋಣ. ಆಗಲೀಗ ನಾವು ಅವರನ್ನು ಅರ್ಥಮಾಡಿಕೊಳ್ಳುತ್ತೇವೆ ನಾವು ಅವರ ಭಾಗವೆಂದು ಅರ್ಥಮಾಡಿಕೊಳ್ಳುತ್ತೇವೆ ಎಂದು ಆಶಿಸಬಹುದು. ಆಗ 'ನನ್ನ ನಾನು ಭಗವಂತನೇ' ಎಂಬ ಸತ್ಯವು ಬೆಳಗುತ್ತದೆ. ಸಣ್ಣ ಮನಸ್ಸುಗಳು ಮೇಲೆ ಮೇಲೆ ತೇಲಲಿ; ನಾವು ಆಳಕ್ಕೆ ಮುಳುಗೋಣ.

## ನಾಳೆ

"ಓ ದೇವ, ಇದು ಹೇಗಾಗುತ್ತದೆ,
ಈ ಹಳೆಯ ಬಡ ಜಗತ್ತಿನಲ್ಲಿ
ಮಹಾಮಹಿಮನಾದ ನಿನ್ನ
ಯಾರೊಬ್ಬರು ಕಾಣರಲ್ಲ ;

ಅತಿ ಸಮೀಪದಲಿರುವ ನಿನ್ನ
ಯಾರೂ ಅನುಭವಿಸರಲ್ಲ;
ಒಬ್ಬೊಬ್ಬರಿಗೂ ನಿನ್ನನೆ ನೀ ಕೊಡುವೆಯಾದರೂ
ಯಾರೊಬ್ಬರೂ ನಿನ್ನ ನಾಮ ತಿಳಿಯದರಲ್ಲ.

ಜನರು ಓಡಿ ನಿನ್ನಿಂದ ದೂರ
ಹೇಳುವವರು ನಿನ್ನ ಕಾಣಲಾರರೆಂದು;
ನಿನ್ನ ಕಡೆಗೆ ಬೆನ್ನು ತಿರುವಿ
ನಿನ್ನ ಕಾಣೆವೆನ್ನುವರು.
ಕಿವಿಯ ತುಂಬ ಗಿಡಿದುಕೊಂಡು
ನಿನ್ನ ಕೇಳಲಾರೆವೆಂಬರು"

ಹೀಗೆಂದು ಹ್ಯಾನ್ಸ್‌ಡೆಂಕ್ ಹಲುಬಿದ. ಇತರ ಅಸಂಖ್ಯ ಮಾನವ ಜೀವಿಗಳೂ ಹೀಗೆಂದೇ ಹಲುಬಿದ್ದರೆ. ಭಗವಂತನಿಗೆ ಮೊರೆ ಕೇಳಿಸಿತು. ಈ ಬಡಪಾಯಿ ಜಗತ್ತನ್ನು ಕುರಿತು ಅಯ್ಯೋ ಪಾಪ ಅಂದ. ನಮ್ಮನ್ನು ಕಾಪಾಡಲು ನಿರ್ಧರಿಸಿದ. ಸತ್ಯಸಾಯಿಯಾಗಿ ಅವತರಿಸಿದ.

ಸಾಯಿ ಮಾನವನಷ್ಟೇ ಕಿರು ಆಕಾಶದಲಿ ಬಂದಿಹರು, ನಮ್ಮ ನಡುವೆ
ಅವರ ನಾವು ಕಾಣಲೆಂದು
ಸಾಯಿ ಅಕ್ಕರೆಯ ಬಂಧುವಾಗಿ ಪ್ರೀತಿಯ ಬಳಗವಾಗಿ ಬಂದರೇ,
ಅವರ ನಾವು ಹತ್ತಿರದಿ ಅನುಭವಿಸಲೆಂದು.

ಸಾಯಿ ಪ್ರತಿಯೊಬ್ಬರಿಗೂ ತಮ್ಮ ನೀಡುವರು, ಆದರೂ ಅವರ
ಹೆಸರನಾರೂ ಅರಿಯರಲ್ಲ,
(ಎಲ್ಲಾ ಹೆಸರುಗಳು ಅವ ರವೇ)
ಸಾಯಿ ಎಲ್ಲೆಲ್ಲು ಇಹರು, ಆವದಿಕ್ಕಿಗೋಡಿದರು ನಾವವರನೇ
ಕಾಣುವವು
ಸಾಯಿ ನಮ್ಮ ಹಿಂದಿಹರು, ಪಕ್ಕದಲಿಹರು, ಮುಂದಿಹರು
ಏಕರಿವೆಯಾ? ಅವರತ್ತ ಬೆನ್ನು ತಿರುವಬಾರದೆಂದು!
ಸಾಯಿ ಸದಾ ನಮ್ಮ ಹೃದಯವಾಸಿಯಾಗಿಹರು, ಕಿವಿಗೆ ಗಿಡಿದು
ತುಂಬಿದರು ಆಲಿಸಬಲ್ಲೆವವರ ದನಿಯ.

ಮಾನವರು ಇನ್ನು ಮುಂದೆ ತಮ್ಮ ದೌರ್ಬಲ್ಯವನ್ನು ಕುರಿತು ದುಃಖಿಸಬೇಕಾಗಿಲ್ಲ. ಸಾಯಿ, ದಿವ್ಯಪ್ರೇಮವತಾರ ಸಾಯಿ ಇಲ್ಲಿದ್ದಾರೆ. ನಾವು ಸಂತೋಷ ಪಡೋಣ, ಅವರ ವಾಣಿಯನ್ನು ಆಲಿಸೋಣ. ಇಂದಿನ ಹಳೆಯ ಬಡಜಗತ್ತು ನಾಳೆಯ ಆನಂದದ ಹೊಸ ಜಗತ್ತಾಗಲಿ.

*ಜೈ ಸಾಯಿರಾಮ್*

---



ಮಾನಸ ಭಜರೇ ಗುರು ಚರಣಂ
ದುಸ್ತರ ಭವ ಸಾಗರ ತರಣಂ